# 'ಸಿದ್ಧಗಂಗಾ'

( ತ್ರೈಮಾಸಿಕ )


ಸಂಚಿಕೆ ೪ ಸಂಪುಟ ೫

ಡಿಸೆಂಬರ್

೧೯೬೯




### ಶ್ರೀ ಸಿದ್ಧಗಂಗಾ ಶಿವಕುಮಾರ ಸ್ವಾಮಿಗಳವರ

# ರಜತ ಮಹೋತ್ಸವ ಸಮಿತಿ

### ಸಿದ್ಧಗಂಗಾ ಮಠ, ತುಮಕೂರು ಡಿಸ್ಟ್ರಿಕ್ಟ್

ಶ್ರೀ ಸಿದ್ಧಗಂಗಾ ಕ್ಷೇತ್ರವು ರಮಣೀಯವಾದ ಗಿರಿ-ವನ ಪ್ರದೇಶದಲ್ಲಿದ್ದು, ಪುರಾತನ ಕಾಲದಿಂದಲೂ ಶಿವಯೋಗಿ ಸಿದ್ಧ ಪುರುಷರಿಗೆ ದೇವೋನ್ಮಾದಕರವಾಗಿ ರಾರಾಜಿಸುತ್ತಿರುವುದು. ಕೇವಲ ತಪಸ್ಸು-ಜ್ಞಾನಗಳಿಗಿಂತಲೂ, ಯಜ್ಞ-ಯಾಗಾದಿ ಕರ್ಮಾನುಷ್ಠಾನಕ್ಕಿಂತಲೂ, ಯೋಗವೃತ್ತಿಯೇ ಶ್ರೇಷ್ಠವೆಂದು ಶ್ರೀಮದ್ಭಗವದ್ಗೀತೆಯು ಸಾರುತ್ತಿದೆ. ಮಾನವನು ತನ್ನಲ್ಲಿರುವ ಭಗವದಂಶವನ್ನು ಜಗತ್ಸೇವೆಗೆ ಧಾರೆಯೆರೆದು ಲೋಕದೊಡನೆ ಸಾಮರಸ್ಯಭಾವದಿಂದ ಬಾಳುವುದೇ ಯೋಗವೃತ್ತಿ. ಪರಂಪರಾನುಗತವಾಗಿ ಈ ವೃತ್ತಿಯನ್ನವಲಂಬಿಸಿ ಸತ್ಕೀರ್ತಿಕಾರಾಗಿರುವ ವೀರಶಿವಯೋಗಿ ಶ್ರೀ ಉದ್ದಾನ ಸಿದ್ಧ ಪುರುಷರಿಂದ 50 ವರ್ಷಗಳ ಹಿಂದೆ ಎಲ್ಲಾ ಜಾತಿಯವರ ಹಿತ ಸಾಧನೆಗಾಗಿ ಸ್ಥಾಪಿಸಲ್ಪಟ್ಟು, ಸಾಂಪ್ರತದಲ್ಲಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಸ್ಫೂರ್ತಿದಾಯಕವಾದ ಆಡಳಿತದಲ್ಲಿ ಅಭಿವೃದ್ಧಿಯನ್ನೈದುತ್ತಿರುವ ಶ್ರೀ ಸಿದ್ಧಲಿಂಗೇಶ್ವರ "ಸಂಸ್ಕೃತ ಕಾಲೇಜು" ಮತ್ತು "ಉಚಿತ ವಿದ್ಯಾರ್ಥಿ ನಿಲಯ"ಗಳ ಸುವರ್ಣ ಮಹೋತ್ಸವವನ್ನು ಆಚರಿಸುವ ಸಮಯದಲ್ಲಿ ಕಳೆದ 26-27 ವರ್ಷಗಳಿಂದ ಸಮಾಜದ ಸರ್ವತೋಮುಖ ಹಿತೋದ್ಧಾರಕ್ಕಾಗಿ ನಿರಂತರವೂ ಶ್ರಮಿಸುತ್ತಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ರಜತ ಮಹೋತ್ಸವವನ್ನು ನೆರವೇರಿಸುತ್ತ, ಈ ಮಹಾಸಂಸ್ಥೆಯ ಪುರೋಭಿವೃದ್ಧಿಯು ಮತ್ತು ಕಾರ್ಯಕ್ಷೇತ್ರವು ಗುಣಾಧಿಕ್ಯವಾಗಿ ಸೋಪಾನಕ್ರಮದಲ್ಲಿ ಉನ್ನತಿಯನ್ನೈದುವ ಹಾಗೆ ನೆರವು ನೀಡಬೇಕೆಂದು ಸಂಕಲ್ಪಿಸಿ, ಕಾರ್ಯೋನ್ಮುಖರಾಗಲು ಸಮಾಜದ ಹಿತೈಷಿಗಳ ಮತ್ತು ಭಕ್ತಬಾಂಧವರ ಮಹಾಸಭೆಯು ಮೇಲ್ಕಂಡ ಸಮಿತಿಯನ್ನು ರಚಿಸಿತು.

ಶ್ರೀಮಠದ ಉಚಿತ ವಿದ್ಯಾರ್ಥಿ ನಿಲಯದಲ್ಲಿ 4000 ವಿದ್ಯಾರ್ಥಿಗಳಿದ್ದಾರೆ. ರೆಸಿಡೆನ್ಷಿಯಲ್ ಪ್ರೌಢಶಾಲೆಯಲ್ಲಿ ಸುಮಾರು 2,800 ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಟೀಚರ್ಸ್ ಟ್ರೈನಿಂಗ್ ಕಾಲೇಜ್, ಪಂಡಿತ ಪರೀಕ್ಷೆಯ ಸ್ಕೂಲು, ಮತ್ತು ಮಾಧ್ಯಮಿಕ ಶಾಲೆಗಳು ಮಠದಲ್ಲಿಯೂ, ಮಠದ ಸಮೀಪದಲ್ಲಿ ಇಂಜಿನಿಯರಿಂಗ್ ಕಾಲೇಜ್, ತುಮಕೂರು ನಗರದಲ್ಲಿ ಪ್ರೌಢಶಾಲೆಗಳು ಟೀಚರ್ಸ್ ಟ್ರೈನಿಂಗ್ ಕಾಲೇಜ್, ಸೈನ್ಸ್ ಕಾಲೇಜ್. ಗ್ರಾಮಾಂತರ ಪ್ರದೇಶಗಳಲ್ಲಿ 10–12 ಪ್ರೌಢಶಾಲೆಗಳು ಮತ್ತು ಮೂರುವಿದ್ಯಾರ್ಥಿ ನಿಲಯಗಳು ನಡೆಸಲ್ಪಡುತ್ತಿವೆ. ಈ ಎಲ್ಲಾ ವಿದ್ಯಾರ್ಥಿ ನಿಲಯಗಳಲ್ಲಿ ಮತ್ತು ವಿದ್ಯಾ ಸಂಸ್ಥೆಗಳಲ್ಲಿ ಮಕ್ಕಳ ಸಂಖ್ಯೆಯು ವರ್ಷಂಪ್ರತಿ ಏರುತ್ತಲೇ ಇದೆ. ಇವುಗಳ ವಸತಿ ಸೌಕರ್ಯವನ್ನೂ ಮತ್ತು ನಿತ್ಯಕಟ್ಲಿಗೆ ಬೇಕಾಗುವ ಖರ್ಚನ್ನು ಹೆಚ್ಚಿನ ಪ್ರಮಾಣದಲ್ಲಿ ಒದಗಿಸುತ್ತಿರಲು ಯಥೇಚ್ಛವಾಗಿ ಹಣದ ಸಹಾಯವು ಅತ್ಯವಶ್ಯಕವಾಗಿದೆ. ಮತ್ತು ಇನ್ನೂ ಅತಿಶಯವಾಗಿ ಸಂಪತ್ಸಹಾಯವು ದೊರಕುವುದಾದರೆ, ಪ್ರತಿಭಾವಂತರೂ, ಪ್ರಭಾವಶಾಲಿಗಳೂ ಆದ ಶ್ರೀಗಳು ಅಗ್ರಿಕಲ್ಚರಲ್ ಕಾಲೇಜ್, ವಿಶ್ವವಿದ್ಯಾಲಯ ಮುಂತಾದ ಉನ್ನತ ಮಟ್ಟದ ಸಂಸ್ಥೆಗಳನ್ನು ಸ್ಥಾಪಿಸಿ, ಯಶಸ್ವಿಯಾಗಿ ನಡೆಸುವುದರಲ್ಲಿ ಸಂದೇಹವೇ ಇಲ್ಲ. ಇದನ್ನು ಮನಗಂಡು ಇಂತಹ ಸದವಕಾಶವನ್ನು ಸಮಾಜದ ಕ್ಷೇಮಾಭ್ಯುದಯಕ್ಕೆ ಉಪಯೋಗಿಸಿಕೊಳ್ಳಬೇಕೆಂದೂ, ಈ ಮಹತ್ ಕಾರ್ಯಗಳಿಗಾಗಿ 50 ಲಕ್ಷ ರೂಪಾಯಿಗಳಿಗೂ ಮೇಲ್ಪಟ್ಟು ಹಣವನ್ನು ಸಂಗ್ರಹಿಸಬೇಕೆಂದೂ ಮಹಾಜನಗಳು ಸಂಕಲ್ಪಿಸಿರುತ್ತಾರೆಯಾಗಿ, ತಾವುಗಳು ಈ ಸಮಿತಿಗೆ ಉದಾರ ಮನಸ್ಸಿನಿಂದ ಧಾರಾಳವಾಗಿ ಧನ ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಸಿದ್ಧಗಂಗಾ ಮಠ
ಡಿಸೆಂಬರ್ ೧೫, ೧೯೬೯

ಕೆ. ತಿಪ್ಪೇರುದ್ರಯ್ಯ, ಐ. ಎ. ಎಸ್. (ರಿಟೈರ್ಡ್)
ಸಮಿತಿಯ ಅಧ್ಯಕ್ಷ

## ಈ ಸಂಚಿಕೆಯಲ್ಲಿ

## "ಸಿದ್ಧಗಂಗಾ"

**ಸಂಪಾದಕ ಮಂಡಳಿ :**

ಚನ್ನಪ್ಪ ಎರೇಸೀಮೆ
(ಪ್ರಧಾನ ಸಂಪಾದಕ)

ರಾಜೀವಲೋಚನಂ, ಎಂ. ಎ.

ಹೀ. ಚಿ. ಶಾಂತವೀರಯ್ಯ,
ಎಂ. ಎ., ಬಿ. ಇಡಿ.

ಟಿ. ಆರ್. ಮಹದೇವಯ್ಯ, ಎಂ. ಎ.

ಆರ್. ರಾಚಪ್ಪ, ಎಂ. ಎ.

ಕೆ. ಪಿ. ಶಿವಲಿಂಗಯ್ಯ, ಬಿ. ಎ.

ಪ್ರಕಾಶಕರು :—

ಹಳೆಯ ವಿದ್ಯಾರ್ಥಿ ಸಂಘ
ಶ್ರೀ ಸಿದ್ಧಗಂಗಾ ಕ್ಷೇತ್ರ
ಪರವಾಗಿ H. B **ಗಂಗಾಧರಯ್ಯ,**
ಬಿ. ಎಸ್‌ಸಿ. ಬಿ. ಇ ಡಿ.

ಮುದ್ರಕರು :—

**ಶ್ರೀಮತಿ ಹೆಚ್. ಸಿ. ಗೌರಮ್ಮ**
ಶ್ರೀ ನಿರಂಜನ ಪ್ರಿಂಟರ್ಸ್,
ರಾಜಾಜಿನಗರ, ಬೆಂಗಳೂರು-10.

**ಪತ್ರಿಕೆ ಪ್ರಕಟವಾಗುವ ಸ್ಥಳ:—**

**ಶ್ರೀ ಸಿದ್ಧಗಂಗಾ ಕ್ಷೇತ್ರ**

**ಪತ್ರಿಕೆ ಹೊರಡುವ ಮಾಸಗಳು:—**

ಮಾರ್ಚ್, ಜೂನ್, ಸೆಪ್ಟಂಬರ್, ಡಿಸೆಂಬರ್.


**ಚಂದಾ ವಿವರ**

| | |
|---|---|
| ಬಿಡಿ ವಿಶೇಷ ಸಂಚಿಕೆ | 1–50 |
| ಬಿಡಿ ಸಾಮಾನ್ಯ ಸಂಚಿಕೆ | 1–25 |
| ವಾರ್ಷಿಕಾ ಚಂದಾ | 5–00 |

ಬಿಡಿ ಸಂಚಿಕೆಗಳ ಅಂಚೆ ವೆಚ್ಚ ಪ್ರತ್ಯೇಕ
ಚಂದಾದಾರರಿಗೆ ಅಂಚೆ ವೆಚ್ಚವಿಲ್ಲ.

**ಮಾನ್ಯ ಚಂದಾದಾರರಲ್ಲಿ ವಿನಂತಿ**

ನಾಲ್ಕು ಸಂಚಿಕೆಗಳು ತಮ್ಮ ಕೈ ಸೇರಿದ ಕೂಡಲೆ ತಮ್ಮ ಚಂದಾ ಅವಧಿ ಮುಗಿಯಿತೆಂದು ತಿಳಿದು (5-00) ಐದು ರೂಪಾಯಿಗಳನ್ನು ಮರು ಪಾವತಿಮಾಡಿ ಪುನಃ ಚಂದಾದಾರರಾಗಿ ಪತ್ರಿಕೆಯ ಅಭಿವೃದ್ಧಿಗೆ ನೆರವಾಗಬೇಕಾಗಿ ಕೋರಿಕೆ. ಚಂದಾ ಹಣವನ್ನು ಈ ಕೆಳಗಿನ ವಿಳಾಸಕ್ಕೆ ಕಳಿಸಿಕೊಡಿ.

ಚಂದಾದಾರರ ವಿಳಾಸ ಬದಲಾವಣೆಯಾದಲ್ಲಿ ಕೂಡಲೇ ಹೊಸ ವಿಳಾಸವನ್ನು ತಿಳಿಸಬೇಕಾಗಿ ವಿನಂತಿ.

ಪ್ರಕಾಶಕರು:

**ಸಿದ್ಧಗಂಗಾ ತ್ರೈಮಾಸಿಕ**
ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲಾ.

ರಾಜ್ಯ ಸರಕಾರದ ವಿದ್ಯಾ ಇಲಾಖೆಯ ಡೈರೆಕ್ಟರ್ ಅವರು CL417-4/65-66 ತಾರೀಖು 29-4-66 ನೆಯ ಆರ್ಡರ್ ಪ್ರಕಾರ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಶಿಕ್ಷಣ ಶಾಲೆಗಳು ಹಾಗು ಸಾರ್ವಜನಿಕ ಗ್ರಂಥ ಭಂಡಾರಗಳು ಕೊಂಡುಕೊಳ್ಳ ಬಹುದೆಂದು ಆಜ್ಞೆ ಹೊರಡಿಸಿದ್ದಾರೆ.

## ಪ್ರಕಟನೆ

ಈ ವರ್ಷ ಆಚರಿಸಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ಸುವರ್ಣ ಮಹೋತ್ಸವ ಸಮಯಕ್ಕೆ 'ಸಿದ್ಧಗಂಗಾ' ತ್ರೈಮಾಸಿಕ ವಿಶೇಷ ಸಂಚಿಕೆಯನ್ನು ಸರ್ವಾಂಗ ಸುಂದರವಾಗಿ ತರಲು ಆಶಿಸಿದ್ದೇವೆ. ವಿದ್ವಾಂಸರ, ಸಂಶೋಧಕರ, ಸಾಹಿತಿಗಳ ಲೇಖನಗಳಿಗಾಗಿ ಸ್ವಾಗತಿಸುತ್ತೇವೆ. ಸ್ವೀಕೃತ ಲೇಖನ ಗಳಿಗೆ ಯೋಗ್ಯ ಸಂಭಾವನೆಯುಂಟು. ಎಲ್ಲರೂ ಸಹಕರಿಸಬೇಕಾಗಿ ಸವಿನಯ ವಿಜ್ಞಾಪನೆಗಳು.

## ಶ್ರೀವಾಣಿ

ಧರ್ಮಭೂಮಿಯೆನಿಸಿರುವ ಭರತಖಂಡವು ವಿಶ್ವಕ್ಕೆ ಕೊಟ್ಟಿರುವ ಸಂದೇಶವಾವುದು ? ಜನ ಜಂಗುಳಿಗೆ ತೋರಿಸಿರುವ ಮಾರ್ಗವಾವುದು ? ಎನ್ನುವುದು ಸ್ಥೂಲವಾಗಿ ವಿವರಿಸುವ : ಧರ್ಮದ ಹೆಸರನ್ನೆತ್ತಿದ ಕೂಡಲೆ ಇಂದಿನ ಜನತೆ ಬೇಸರಪಡುವುದುಂಟು. 'ಧರ್ಮ', 'ದೇವರು' ಎಂಬ ಮೂಢನಂಬಿಕೆಗಳಿಂದ ಭಾರತೀಯರು ಕರ್ತವ್ಯನಿಷ್ಠೆಯಿಂದ ದೂರವಾಗಿ ಪ್ರಗತಿ ಶೀಲರಾಗದೆ ಆಲಸ್ಯವನ್ನು ಪೋಷಣೆ ಮಾಡಿದ ನಿಷ್ಕರ್ಮಿಗಳಾಗಿ ದೇಶವನ್ನು ದುರವಸ್ಥೆಗೆ ಇಳಿಸಿದರೆಂದೂ, ಇಂದಿನ ನಮ್ಮ ಕಷ್ಟ ಕಾರ್ಪಣ್ಯಗಳಿಲ್ಲಗೆಕ್ಕೂ ಈ ಮನೋಭಾವನೆಯೇ ಮೂಲಹೇತುವೆಂದೂ, ಆಕ್ಷೇಪಣೆ ಮಾಡುವುದುಂಟು. ಧರ್ಮದ ಯಥಾರ್ಥ ಸ್ವರೂಪವನ್ನರಿತ ಯಾರೇ ಆಗಲೀ ಈ ಆಕ್ಷೇಪಣೆಯನ್ನೆತ್ತಲಾರರು. ಧರ್ಮದ ಸ್ವರೂಪವನ್ನೇ ಅರಿಯದ ಅಥವಾ ಅರಿಯಲು ಪ್ರಯತ್ನಮಾಡದ ಜನರ ಅಜ್ಞಾನದ ಪರಮಾವಧಿಯ ಭ್ರಾಂತಿಯ ಕೂಗು ಅದು. ಧರ್ಮದ ವ್ಯಾಖ್ಯೆಯನ್ನು ಮಾಡಿದ ಪುಣ್ಯಪುರುಷರು.

**" ಯತೋಭ್ಯುದಯ ನಿಶ್ರೇಯಸ ಸ್ಸಿದ್ಧಿಃ ಸಧರ್ಮಃ"**

ಎನ್ನುವ ದಿವ್ಯ ಸಂದೇಶದಿಂದ ಮಾನವ ಜೀವನದಲ್ಲಿ ಅಭ್ಯುದಯ ನಿಶ್ರೇಯಸ್ಸುಗಳೆರಡನ್ನೂ ಏಕ ಕಾಲದಲ್ಲಿ ಸಾಧಿಸುವುದೇ ಪರಮ ಪುರುಷಾರ್ಥವೆಂದು ಸಾರಿರುವರು. ನಿಜಗುಣ ಶಿವಯೋಗಿಗಳು

**" ಜಾಣನು ಲೌಕಿಕ ಪಾರಮಾರ್ಥಿಕಗಳೆರಡನ್ನೂ ಏಕಕಾಲದಲ್ಲಿ ಸಾಧಿಸುತಿಹನು "**

ಎಂದು ಸಾರಿರುವರು. —

ಮನುಷ್ಯನ ಮೂರು ಮೂಲಭೂತವಾದ ಹಕ್ಕುಗಳ (ಅನ್ನ, ಬಟ್ಟೆ, ವಸತಿ) ಪ್ರಾಪ್ತಿಗಾಗಿ ಅವನು ಸರ್ವಪ್ರಯತ್ನಗಳನ್ನೂ ಮಾಡಲೇಬೇಕು. ಇದುವೇ ಧರ್ಮದ ಸಂದೇಶ. ಮನುಷ್ಯನು ಚರಮ ಗುರಿಯನ್ನು ಮುಟ್ಟಲು ಯೋಗ್ಯಸಾಧನೆ ಮಾಡಬೇಕಾದರೂ ಸಮೃದ್ಧ ಜೀವನವು ಬುನಾದಿಯೆಂದು ಧರ್ಮವು ಸಾರುತ್ತದೆ.

ಬಟ್ಟಬಯಲಾದ ಹಾಳುಭೂಮಿಯಲ್ಲಿ ಪಾರಮಾರ್ಥಿಕತೆಯ ಹುಲುಸಾದ ಬೆಳೆ ಬೆಳೆಯಲಾರದು. ಅಂತೆಯೇ ಅನಾದಿಕಾಲದಿಂದಲೂ, ಮಾನವನ ಇಹಜೀವನದ ಅಂದವಾದ ಬಾಳಿಗೆಬೇಕಾದ ಸೌಕರ್ಯಗಳನ್ನೂ, ಸಹಾಯ ಸಂಪತ್ತುಗಳನ್ನೂ ಸತ್ಯವಾದ, ಪ್ರಾಮಾಣಿಕವಾದ ರೀತಿಯಿಂದ ಗಳಿಸಿ ಬಳಸುವುದೇ ಅವನ ಜೀವನೋದ್ದೇಶಗಳಲ್ಲಿ ಮುಖ್ಯವಾದುದೆಂದು ಧರ್ಮಸಂಸ್ಥಾಪಕರು ಉಪದೇಶಿಸಿದ್ದಾರೆ.

ಮಹಾಪುರುಷರ ಮಾತುಗಳಲ್ಲಿ ನಡೆನುಡಿಗಳಲ್ಲಿ ನಂಬಿಕೆಯನ್ನಿಟ್ಟು ಅವರ ಭವ್ಯಾದರ್ಶವನ್ನು ಜೀವನದ ಮುಂದಿಟ್ಟುಕೊಂಡು ಸಾಗಬೇಕು. /

**ಸೇವಿತವ್ಯೋ ಮಹಾವೃಕ್ಷಃ ಫಲಛಾಯಾಸಮನ್ವಿತಃ**
**ಯದಿ ದೈವಾತ್ ಫಲಂ ನಾಸ್ತಿ ಛಾಯಾ ಕೇನ ನಿವಾರ್ಯತೇ ||**

ಮಹಾವೃಕ್ಷವನ್ನು ಆಶ್ರಯಿಸಬೇಕು. ಅದು ಫಲ ಮತ್ತು ನೆಳಲುಗಳಿಂದ ಕೂಡಿರಬೇಕು. ಒಂದು ವೇಳೆ ಅದರಲ್ಲಿ ಫಲವಿಲ್ಲದಿದ್ದರೆ ನೆಳಲನ್ನು ಯಾರು ತಾನೇ ನಿವಾರಿಸಲು ಶಕ್ಯ ?

ಭದ್ರಂ—ಶುಭ್ರಂ—ಮಂಗಳಂ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ 1970ನೆಯ ಮಾರ್ಚ್ ತಿಂಗಳಲ್ಲಿ ಜರಗಲಿರುವ
ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದ ಅಂಗವಾಗಿ ತೆರೆಯಲಿರುವ,

## " ವ್ಯವಸಾಯ ಮತ್ತು ವಸ್ತು ಪ್ರದರ್ಶನ "

**ತಾ|| 4-3-1970 ರಿಂದ ತಾ|| 17-3-70ರ ವರೆಗೆ ಯಶಸ್ವಿಯಾಗಿ ಜರುಗಲಿದೆ.**

ಈ ವರ್ಷದ ವಸ್ತು ಪ್ರದರ್ಶನವು ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಗ್ರಾಮಾಂತರ ಪ್ರದೇಶದ ಜನರಲ್ಲಿ ವ್ಯವಸಾಯಕ ಮತ್ತು ಕೈಗಾರಿಕೆಯ ಬೆಳವಣಿಗೆಯ ಪ್ರಜ್ಞೆಯನ್ನು ಅಧಿಕಗೋಳಿಸುವ ಮುಖ್ಯೋದ್ದೇಶದಿಂದ ಸ್ಥಾಪಿತವಾದ ಈ ವಸ್ತುಪ್ರದರ್ಶನದಲ್ಲಿ ರಾಜ್ಯ ಹಾಗು ಕೇಂದ್ರ ಸರಕಾರದ ಅನೇಕ ಸ್ಟಾಲ್‌ಗಳೂ, ಖಾಸಗಿಯವರ ಸ್ಟಾಲ್‌ಗಳು ಬರಲಿವೆ. ಸ್ಟಾಲ್‌ಗಳಿಗಾಗಿ ಅಪೇಕ್ಷಿಸುವವರು ಕಾರ್ಯದರ್ಶಿಗಳೊಡನೆ ವ್ಯವಹರಿಸಿರಿ.

ಪ್ರತಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಸರಾಂತ ಕಲಾವಿದರಿಂದ ಸಂಗೀತ– ನಾಟಕಗಳ ಕಾರ್ಯಕ್ರಮಗಳು ನಡೆಯುತ್ತವೆ. ವಿಶೇಷ ಕಾರ್ಯಕ್ರಮಗಳ ಅಂಗವಾಗಿ ತಾ|| 7-3-70 ರಿಂದ 13-3-70ರ ವರೆಗೆ **"ಕೃಷ್ಣ ಚೈತನ್ಯ ನಾಟಕ ಸಭಾ" ಮದ್ರಾಸ್ ಅವರಿಂದ 'ಶಾಂತಿ ನಿವಾಸ' 'ಭಕ್ತಮೀರಾ', 'ಜೀವನಾಂಶ'** ಇತ್ಯಾದಿ ನಾಟಕಗಳನ್ನು ಶ್ರೇಷ್ಟ ವರ್ಗದ ಸಿನೆಮಾ ನಟ-ನಟಿಯರು ಅಭಿನಯಿಸುವರು. ಪ್ರಧಾನ ಭೂಮಿಕೆಯಲ್ಲಿ **ಶ್ರೀಮರ್ಾ ಅಶ್ವತ್ಥ್ ಮತ್ತು ಕಲಾವಿದೆ ಶ್ರೀಮತಿ ಪಂಡರೀಬಾಯಿ, ಮೈನಾವತಿ, ರಮಾದೇವಿ, ಜಯಾ, ರಮಾ, ಶ್ರೀಮರ್ಾ ಕೃಷ್ಣಶಾಸ್ತ್ರಿ, ವೀರಭದ್ರಪ್ಪ, ದಿನೇಶ್** ಇತ್ಯಾದಿ ಅನೇಕ ಕಲಾವಿದ ಕಲಾವಿದೆಯರು ಭಾಗವಹಿಸುವರು ಸರ್ವರೂ ಇವರ ಲಾಭಪಡೆ ಯಬೇಕಾಗಿ ವಿಜ್ಞಾಪಿಸುತ್ತೇವೆ.

### " ಇಂದೇ ನಿಮ್ಮ ಸ್ಟಾಲುಗಳನ್ನು ಕಾದಿರಿಸಿರಿ "

ವ್ಯವಸ್ಥಾಪಕರು :
ವಸ್ತು ಪ್ರದರ್ಶನ ಸಮಿತಿ,
ಸಿದ್ಧಗಂಗಾ ಕ್ಷೇತ್ರ.

## ಸಂಪಾದಕೀಯ

ಎರಡನೆಯ ಸಲ ಚಂದ್ರಗ್ರಹವನ್ನು ತಲುಪಿ, ಅಲ್ಲಿ ಮಹತ್ವದ ಕೆಲವು ಯಂತ್ರಗಳನ್ನು ಸ್ಥಾಪಿಸಿ ಭೂಮಿಗೆ ತಾರೀಖು 25-11-69ರಂದು ಹಿಂದಿರುಗಿದ ಅಮೆರಿಕಾದ ಮಹಾಸಾಹಸಿಗಳಾದ ವಿಜ್ಞಾನಿಗಳನ್ನು ಸ್ವಾಗತಿಸುತ್ತೇವೆ. ಅನೇಕ ಲೆಕ್ಕಾಚಾರಗಳಿಂದ ಸುಮಾರು ಎರಡೂವರೆ ಲಕ್ಷ ಮೈಲುಗಳದೂರದಲ್ಲಿ ಭೂಮಿಯನ್ನು ಸುತ್ತುತ್ತಿರುವ ಚಂದ್ರಗ್ರಹದ ಮೇಲೆ ಇಳಿದು ಪುನಃ ಭೂಮಿಗೆ ಹಿಂದಿರುಗುವ ಸಾಹಸವೇನೂ ಚಿಕ್ಕದಲ್ಲ. ಈ ಕಾರ್ಯಕ್ಕೆ ಯಾಂತ್ರಿಕ ಕ್ರಿಯೆಗಳ ನಿಖರತೆ, ಅವುಗಳ ನಿರ್ಮಾಣ ವಿಷಯದಲ್ಲಿ ಅಗಾಧವಾದ ಭೌತವಿಜ್ಞಾನದ ಪ್ರಗತಿ ಇವು ಅನೂಹ್ಯವೇ ಸರಿ. ಇಂಥ ಅನೂಹ್ಯವಾದ ಸಾಮಾನ್ಯ ಮಸ್ತಿಷ್ಕಕೆ ಯೋಚಿಸಲೂ ಶಕ್ಯವಿಲ್ಲದ ಸಾಹಸಕಾರ್ಯಕ್ಕಾಗಿ ಮಾನವ ಕೋಟಿ ಅಮೆರಿಕಾಕ್ಕೆ ಅಭಿನಂದನೆಗಳ್ನು ಸಲ್ಲಿಸಲೇಬೇಕು. ಚಂದ್ರಗ್ರಹದಿಂದ ಭೂಭಾಗಕ್ಕೆ ಹೊತ್ತು ತಂದ ವಸ್ತುಗಳ ವಿಶ್ಲೇಷಣಾ ಕಾರ್ಯದ ನಂತರ ಚಂದ್ರಲೋಕದ ಅನೇಕ ನಿಗೂಢ ರಹಸ್ಯಗಳು ಹೊರಬೀಳಲಿವೆ. ಈ ಕಾರ್ಯದಲ್ಲಿ ವಿಶ್ವವಿಜ್ಞಾನಿಗಳೆಲ್ಲ ಈಗ ಗಾಢವಾಗಿ ಯೋಚಿಸುವ ಸನ್ನಿವೇಶವೊದಗಿದೆ. ನ್ಯೂಟನ್ನನಿಂದ ಮೊದಲ್ಗೊಂಡು ಇಂದಿನ ವರೆಗೆ ಬೆಳೆದು ಬಂದ ವೈಜ್ಞಾನಿಕ ಮೂಲ್ಯಗಳು ಚಂದ್ರಗ್ರಹಯಾನದ ದೊಡ್ಡ ಒಗಟನ್ನು ಬಟ್ಟಬೈಲಿಗೆಳೆದು ಅನೇಕ ಹೊಸ ಸಂಶೋಧನೆಗಳಿಗೆ ಎಡೆಕೊಟ್ಟಿದೆ. ಈ ದಿಸೆಯಲ್ಲಿ ಭಾರತದ ವೈಜ್ಞಾನಿಕ ಮುನ್ನಡೆಯೂ ತನ್ನದೇ ಆದ ಗತಿಯಲ್ಲಿ ಮುಂದೆ ಹೆಜ್ಜೆಯಿಡಲು ಅನೇಕ ಯೋಚನಾ ಸಾಮಗ್ರಿಗಳುಂಟಾಗಿವೆ. ಮೊನ್ನೆತಾನೆ ತಾ. 7-12-69 ರಂದು ತುಂಬಾ ನೆಲೆಯಿಂದ ಭಾರತೀಯ ಸಲಕರಣೆಗಳಿಂದಲೇ ತಯಾರಿಸಿ ಹಾರಿಸಿದ "ಸೇರಿಟಾರ್" ಕ್ಷಿಪಣಿಯ ಅಲ್ಪಕಾಣಿಕೆಯನ್ನು ವಿಶ್ವ ವಿಜ್ಞಾನ ವೇದಿಕೆಗೆ ಸಲ್ಲಿಸಿದ ಒಂದು ಕಾಣಿಕೆಯಾಗಬಹುದು. ಇಂಥ ಇನ್ನೂ ಅನೇಕ ವೈಜ್ಞಾನಿಕ ಸಂಶೋಧನೆಗಳಿಗೆ ಭಾರತ ಹಿಂದಿರುವುದು ಆರ್ಥಿಕ ತೊಂದರೆಯಿಂದಾಗಿ ; ಬುದ್ಧಿಯ ತೊಂದರೆಯಿಂದಲ್ಲ.

ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನಕ್ಕೆ ಆಯ್ಕೆಯಾದ ಶ್ರೀಯುತ ಪ್ರೊ. ಡಿ. ಜವರೇಗೌಡರನ್ನು ಸ್ವಾಗತಿಸುತ್ತೇವೆ. ಶ್ರೀ ಜವರೇಗೌಡರ ವಿಜಯ ಕನ್ನಡಭಾಷೆಯ ವಿಜಯವೆಂದು ಹೇಳಲು ಅಭ್ಯಂತರವಿಲ್ಲ. ಕನ್ನಡ ಭಾಷಾ ಪ್ರಾಧ್ಯಾಪಕ ಸ್ಥಾನಾಪನ್ನರು ನಮ್ಮ ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನಕ್ಕೇರಿರುವುದು, ಇದು ಎರಡನೆಯಸಲ. ಶಾಂತಿ ಸೌಹಾರ್ದ್ರ ಭಾವನೆಗಳಿಂದ ಕೂಡಿದ ಶ್ರೀ ಜವರೇಗೌಡರು ತಮ್ಮ ಅಧಿಕಾರಾವಧಿಯಕಾಲದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕೀರ್ತಿ ಧ್ವಜವನ್ನು ಎತ್ತಿ ಹಿಡಿಯುವರೆಂದು ಆಶಿಸುತ್ತೇವೆ. ಅಂತೆಯೇ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನಕ್ಕೆ ಆಯ್ಕೆಯಾಗಿರುವ ಶ್ರೀಯುತ ತುಕೋಳ್ ಅವರನ್ನೂ ಸ್ವಾಗತಿಸುತ್ತೇವೆ. ಇದುವರೆಗೆ ನ್ಯಾಯಮೂರ್ತಿಗಳಾಗಿದ್ದ ಶ್ರೀ ತುಕೋಳರು ತಮ್ಮ ಸ್ಥಾನದಲ್ಲಿ ವಿಶೇಷ ಕೀರ್ತಿ ಭಾಜನರಾಗಿದ್ದಾರೆ. ಅವರು ತಮ್ಮ ನೂತನ ಹುದ್ದೆಯಾದ ಬೆಂಗಳೂರು ವಿಶ್ವ ವಿದ್ಯಾಲಯದ ಉಪಕುಲಪತಿಯ ಸ್ಥಾನದಲ್ಲಿ ಗಣನೀಯ ಪ್ರಮಾಣದ ಸುಧಾರಣೆಗಳನ್ನೂ ಮಾಡಿ ವಿಶ್ವ ವಿದ್ಯಾಲಯದ ಉತ್ತರೋತ್ತರ ಅಭಿವೃದ್ಧಿಗೆ ಕಾರಣೀಭೂತರಾಗಲೆಂದು ಹಾರೈಸುತ್ತೇವೆ.

ಇತ್ತೀಚೆಗೆ ನಿಧನರಾದ ಶ್ರೇಷ್ಠ ಕಾದಂಬರಿಕಾರ್ತಿ ಶ್ರೀಮತಿ ಹೆಚ್. ಆರ್. ಇಂದಿರಾ ಹಾಗೂ ಶ್ರೀಮತಿ ಪಯೋಲೇಟ್ ಆಳ್ವಾ, ಪ್ರಸಿದ್ಧ ಭಾರತದ ಕ್ರಿಕೇಟ್ ಆಟಗಾರ ಶ್ರೀಮಾನ್ ಗೊಡಾನಿ ಅವರ ಬಗೆಗೆ ಸಂತಾಪವನ್ನು ಸಿದ್ಧಗಂಗಾ ಪತ್ರಿಕೆ ವ್ಯಕ್ತಪಡಿಸುತ್ತದೆ.

ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಸಿದ್ಧವ್ವನಹಳ್ಳಿ ನಿಜಲಿಂಗಪ್ಪನವರ ೬೮ನೆಯ ಹುಟ್ಟು ಹಬ್ಬದ ಈ ಸಮಯದಲ್ಲಿ ದೇವರು ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನೀಯಲೆಂದು ಹಾರೈಸುತ್ತೇವೆ.

ಈ ವರ್ಷ ಶ್ರೀ ಕ್ಷೇತ್ರ ಸಿದ್ಧಗಂಗೆಯ ಜಾತ್ರೆಯು ಮಾರ್ಚ್ ಮೊದಲನೆಯ ವಾರದಲ್ಲಿ ಪ್ರಾರಂಭವಾಗಲಿದ್ದು ಗ್ರಾಮಾಂತರ ಪ್ರದೇಶದ ಜನರ ವ್ಯವಸಾಯ, ಕೈಗಾರಿಕಾ ವಿಷಯಕ ಜ್ಞಾನವನ್ನು ಅಧಿಕಗೊಳಿಸುವ ದೃಷ್ಟಿಯಿಂದ ನಡೆಸಿಕೊಂಡು ಬರುತ್ತಿರುವ 'ವಸ್ತು ಪ್ರದರ್ಶನ' ದ ಸಿದ್ಧತೆಗಳು ಈಗಿನಿಂದಲೇ ಭರದಿಂದಲೇ ರೂಪಗೊಳ್ಳುತ್ತಿವೆ. ರಚನಾತ್ಮಕ ಕಾರ್ಯದಲ್ಲಿ ಗ್ರಾಮಾಂತರ ಪ್ರದೇಶದ ಜನರು ಮುನ್ನಡೆಯಬೇಕೆಂಬ ಏಕೈಕ ಉದ್ದೇಶದಿಂದ ಸ್ಥಾಪಿತವಾದ ಶ್ರೀ ಕ್ಷೇತ್ರದ ಈ ಸ್ತುತ್ಯ ಕಾರ್ಯಕ್ರಮಕ್ಕೆ ಸರಕಾರದ ಮತ್ತು ಜನರ ಬೆಂಬಲವನ್ನು ತೋರುತ್ತೇವೆ.

ಶ್ರೀಕ್ಷೇತ್ರದಲ್ಲಿ ಕ್ಷಿಪ್ರದಲ್ಲಿ ಜರಗುಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆಯ, ವೇದ ಮಹಾ ಪಾಠಶಾಲೆಯ, ಉಚಿತ ವಿದ್ಯಾರ್ಥಿನಿಲಯದ ಸುವರ್ಣ ಮಹೋತ್ಸವದ ಸಮಯದಲ್ಲಿ. ಹಳೆಯ ವಿದ್ಯಾರ್ಥಿಗಳೂ ಮತ್ತು ಸಾರ್ವಜನಿಕರೂ ಶ್ರೀ ಕ್ಷೇತ್ರಾಧಿಪತಿಗಳೂ, ಮೇಲ್ಕಂಡ ಮಹಾ ಸಂಸ್ಥೆಗಳ ಪ್ರೇಕ್ಷಕರೂ, ತಪಸ್ವಿಗಳೂ ಆದ ಶ್ರೀ ಶ್ರೀ ಗಳವರ ರಜತ ಮಹೋತ್ಸವವನ್ನೂ ಆಚರಿಸಬೇಕೆಂದಿರುವ ಕಾರ್ಯಕ್ರಮಕ್ಕೆ ಹಳೆಯವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಪಾಲಿನ ವಂತಿಕೆಗಳನ್ನೂ ಆದಷ್ಟು ತೀವ್ರ ಸಲ್ಲಿಸುವ ಕಾರ್ಯದಲ್ಲಿ ನೆರವಾಗಬೇಕೆಂದು ವಿಜ್ಞಾಪಿಸಿಕೊಳ್ಳುತ್ತೇವೆ.

—o—

## ಪ್ರಕಟನೆ

'ಸಿದ್ಧಗಂಗಾ' (ತ್ರೈಮಾಸಿಕ) ಪತ್ರಿಕೆಯನ್ನು ರಾಜ್ಯದ ಎಲ್ಲ ಪ್ರಾಥಮಿಕ ಶಾಲೆ ಪ್ರೌಢ ಶಾಲೆ, ಟ್ರೆನಿಂಗ್ ಶಾಲಾ ಕಾಲೇಜುಗಳು ಸಾರ್ವಜನಿಕ ಗ್ರಂಥ ಭಂಡಾರಗಳು ತರಿಸಿಕೊಳ್ಳಬೇಕೆಂದು ರಾಜ್ಯದ ವಿದ್ಯಾ ಇಲಾಖಾ ಡೈರೆಕ್ಟರವರು C.L. 4174/65-66ನೆಯ ಪತ್ರದ ಪ್ರಕಾರ ಆಜ್ಞೆ, ಹೊರಡಿಸಿದ್ದಾರೆ. ಎಲ್ಲರೂ ತರಿಸಿಕೊಂಡು ಸಹಕರಿಸಬೇಕಾಗಿ ವಿಜ್ಞಾಪನೆಗಳು.

—ಪ್ರಕಾಶಕರು 'ಸಿಂದ್ಧಗಂಗಾ'

## ಜಾತ್ರಾ ವಿಶೇಷಾಂಕ
## ಸಿದ್ಧಗಂಗಾ ತ್ರೈಮಾಸಿಕ,

ಈ ವರ್ಷದ ಜಾತ್ರಾ ವಿಶೇಷಾಂಕವು ಅನೇಕ ಪ್ರೌಢ ವರ್ಗದ ಐತಿಹಾಸಿಕ, ಸಾಮಾಜಿ, ವೈಜ್ಞಾನಿಕ ಲೇಖನಗಳಿಂದಲೂ, ಕವನ ಲಘುಕರಟೆ, ನಾಟಕಗಳಿಂದಲೂ ಸುಮಾರು 150 ಪುಟಕ್ಕೂ ಹೆಚ್ಚಿನ ಪುಟ ಸಂಖ್ಯೆಗಳಿಂದ ಕೂಡಿ, ವರ್ಣರಂಜಿತ ಚಿತ್ರಗಳಿಂದ ಹೊರಬರಲಿದೆ. ಇಂದೇ ತಮ್ಮ ತಮ್ಮ ವಿಶೇಷ ಸಂಚಿಕೆಗಳನ್ನು ಕಾದಿರಿಸಿರಿ.

ಪ್ರಕಾಶಕ.

## ಸನ್ಮಾನ್ಯ ಚಂದಾದಾರರಲ್ಲಿ ವಿಜ್ಞಾಪನೆಗಳು

ಈ ಸಂಚಿಕೆಗೆ ತಮ್ಮ ಚಂದಾ ಹಣದ ಅವಧಿ ಮುಗಿದಿರುವ ಮಹನಿಯರುಗಳೆಲ್ಲರೂ ತಮ್ಮ ಮುಂದಿನ ವರ್ಷದ ಚಂದಾಹಣ 5-00 ರೂಪಾಯಿಗಳನ್ನು M. O. ಮೂಲಕ "ಪ್ರಕಾಶಕರು ಶ್ರೀ ಸಿದ್ಧಗಂಗಾ ತ್ರೈಮಾಸಿಕ" ಈ ವಿಳಾಸಕ್ಕೆ ಕಳಿಸಬೇಕಾಗಿ ವಿಜ್ಞಾಪಿಸಿಕೊಳ್ಳುತ್ತೇವೆ. 4 ಸಂಚಿಕೆಗಳು ತಲುಪಿದರೆ ಒಂದು ವರ್ಷದ ಚಂದಾ ಅವಧಿ ಮುಗಿಯಿತೆಂದು ಸನ್ಮಾನ್ಯ ಚಂದಾದಾರರು ಭಾವಿಸಿ ಸಹಕರಿಸಬೇಕಾಗಿ ವಿಜ್ಞಾಪನೆ.

ಪ್ರಕಾಶಕರು:
ಸಿದ್ಧಗಂಗಾ ತ್ರೈಮಾಸಿಕ
ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲಾ.



ತಾ॥ 25-9-69ರಂದು ಬೆಂಗಳೂರು ಭಕ್ತ ಮಂಡಳಿಯವರು ಸತ್ಕಾರ ಸಮಾರಂಭವೇರ್ಪಡಿಸಿದಾಗ ಜಲ ಪೂರ್ಣ ಕುಂಭದಿಂದ ಶ್ರೀ ಮ. ನಿ. ಪ್ರ. ಶ್ರೀ ಶಿವಕುಮಾರಸ್ವಾಮಿಗಳವರನ್ನೂ, ಜಗದ್ಗುರು ಸುತ್ತೂರು ಶ್ರೀ ಗಳವರನ್ನೂ, ಸಿರಿಗೆರೆ ತರಳಬಾಳು ಜಗದ್ಗುರುಗಳವರನ್ನೂ ಭಕ್ತಿಯಿಂದ ಸ್ವಾಗತಿಸುವ ದೃಶ್ಯ.
ಪದ್ಮ ಶ್ರೀ ಶಿವಮೂರ್ತಿಶಾಸ್ತ್ರಿಗಳವರನ್ನೂ ಮತ್ತಿತರನ್ನೂ ಕಾಣಬಹುದು.



ಇತ್ತೀಚೆಗೆ ತಾ|| 25-9-69 ರಂದು ಬೆಂಗಳೂರು ಭಕ್ತ ಮಂಡಳಿಯವರು ಶ್ರೀ ನಿ. ನಿ. ಪ. ಸ್ವಸೂಪಿ ಶ್ರೀ ಶಿವಕುಮಾರ
ಸ್ವಾಮಿಗಳು ಮತ್ತು ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು ಸುತ್ತೂರು ಮತ್ತು ತರಳಬಾಳು
ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯರು ಸಿರಿಗೆರೆ ಅವರಿಗೆ ಜಯ ಬೆಂಗಳೂರು ಜಯದೇವ ಹಾಸ್ಟಲಿನಲ್ಲಿ ಸತ್ಕಾರ
ಸಮಾರಂಭವನ್ನು ಪಾಂಡಿಚೇರಿಯ ಲೆಫ್ಟಿನೆಂಟ್ ಗವರ್ನರ್ ಶ್ರೀ ಶ್ರೀಗಳು ಭಾಷಣ ಮಾಡುತ್ತಿರುವುದು.




ಬೆಂಗಳೂರು ಚಾಮರಾಜ ಪೇಟೆ ಶ್ರೀ ರಾಮೋತ್ಸವ ಸಮಾರಂಭದಲ್ಲಿ ಅಧ್ಯಕ್ಷತೆವಹಿಸಿದ್ದ ಶ್ರೀಮನ್ನಿರಂಜನ ನಿ. ಪ್ರ. ಶಿವಕುಮಾರಸ್ವಾಮಿಗಳವರ ದಿವ್ಯಸನ್ನಿಧಿಯಲ್ಲಿ "ಭಕ್ತರತ್ನ" ಧರ್ಮಪರಾಯಣ್ ಶ್ರೀ ಎಂ. ರಾಮಚಂದ್ರಯ್ಯನವರು ಸ್ವಾಗತ ಭಾಷಣ ಮಾಡುತ್ತಿರುವುದು.

# ಶರಣ ಆದಯ್ಯ

**ಪಂಡಿತ ಡಿ. ರೇವಣಪ್ಪ, ಚಿತ್ರದುರ್ಗ.**

ಗುಣದ ಬಲ್ಮೆಯಿಂದಲೂ, ಕರ್ತೃತ್ವದ ಶಕ್ತಿಯಿಂದಲೂ, ಸರಳ ಮತ್ತು ಸಹಜ ಜೀವನದ ಆದರ್ಶದಿಂದಲೂ ತಮಗುಂಟಾದ ಅನುಭವಗಳನ್ನು ಲೋಕದ ಜನರಿಗೆ ನೀಡುವ, ಉದಾರ ಭಾವದಿಂದಲೂ ಆ ವ್ಯಕ್ತಿಯ ಒಂದು ವಿಶೇಷತೆ ಜಗದವರ ಕಣ್ಣಿಗೂ ಕಟ್ಟಿ, ಮನಕ್ಕೂ ಮುಟ್ಟುವ ಸಾಮರ್ಥ್ಯವನ್ನು ಪಡೆದಿರುತ್ತದೆ. ಅಂಥವರ ಆಕಾರ ವಕ್ರವಾಗಿದ್ದರೇನು, ಸುಂದರವಾಗಿದ್ದರೇನು, ಅವರ ಅಂತರಂಗದ ತೇಜಸ್ಸು, ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸಿ ಅದಕ್ಕೊಂದು ಅಪೂರ್ವ ಕಳೆಯನ್ನು ತಂದುಕೊಡುತ್ತದೆ. "ತನ್ನತನದ ಸಾರವೆಲ್ಲಾ ಆ ವ್ಯಕ್ತಿತ್ವವೆಂಬ ಹೆಸರಿನಲ್ಲಿ ಅಡಗಿರುತ್ತದೆ." ಈ ದಾರಿಯಲ್ಲಿ ಬಂದ ಕೆಲವರ ವ್ಯಕ್ತಿತ್ವ ಉಳಿದವರಿಗೂ ಆಕರ್ಷಣೀಯವಾಗಿ, ಅನುಕರಣೀಯವಾಗಿ ಪ್ರಭಾವಶಾಲಿಯಾಗಿ ಸ್ಥಿರವಾಗಿ ನಿಲ್ಲುತ್ತದೆ. ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಸಾಹಿತ್ಯಕ-ಯಾವುದೇ ರಂಗದಲ್ಲಿಯೂ, ಹಲವಾರು ವ್ಯಕ್ತಿಗಳ ವ್ಯಕ್ತಿತ್ವದ ಪ್ರಭಾವ ಜನತೆಯ ಜೀವನದಲ್ಲಿ, ಅರಿಯದಂತೆಯೇ ಸೇರಿಹೋಗಿ ಅವರ ಬಾಳಿಗೊಂದು ನಂಬಿಕೆಯನ್ನೂ, ಭರವಸೆಯನ್ನೂ, ಹೊಸ ಚೇತನದ ಮಾರ್ಪಾಡುಗಳನ್ನೂ ಉಂಟುಮಾಡುತ್ತದೆ. ಇಂತಹ ಪ್ರತಿಭಾಪೂರ್ಣ, ಪ್ರಬಲ ಮತ್ತು ಸಮರ್ಥವಾದ, ವ್ಯಕ್ತಿತ್ವವನ್ನು ಪಡೆದ ವ್ಯಕ್ತಿಯೇ, ಒಂದು ಶಕ್ತಿಯಾಗಿ ಇಲ್ಲಿಯೇ ಒಂದು ಸಂಸ್ಥೆಯಾಗಿ ನಿಂತು ಕಾರ್ಯವನ್ನು ನಿರ್ವಹಿಸುವುದರಲ್ಲಿ ಸಂದೇಹವಿಲ್ಲವು. ಸೂರ್ಯ ಮುಳುಗಿದರೂ ಅವನ ಹೊಂಬೆಳಕು ಎಲ್ಲೆಡೆಗೂ ಪಸರಿಸುವಂತೆ ಅಂಥ ವ್ಯಕ್ತಿತ್ವದ ದರ್ಶನ ಮುಂದಿನವರಿಗೂ ತನ್ನ ಬೆಳಕನ್ನು ಬೀರುತ್ತಲೇ ಇರುತ್ತದೆ.

## ಧಾರ್ಮಿಕ ಅಂದೋಲನ

ಭಾರತ ದೇಶದಲ್ಲಿ ಧಾರ್ಮಿಕ ಅಂದೋಲನಗಳನ್ನು ಜನ ಜೀವನದಲ್ಲೂ ಮತ್ತು ಇತಿಹಾಸಗಳಲ್ಲೂ ಕಾಣುತ್ತಲೇ ಬಂದಿರುತ್ತೇವೆ. ಹಾಗೆಯೇ ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ನಡೆದ ಧಾರ್ಮಿಕ ಅಂದೋಲನವನ್ನೂ, ಉಳಿದ ಕ್ಷೇತ್ರಗಳಲ್ಲಿ ಆದ ಅದರ ಪರಿಣಾಮವನ್ನೂ ಪರಿಶೀಲಿಸಿದಾಗ, ಆ ಕಾಲವನ್ನೊಂದು ವ್ಯಕ್ತಿತ್ವ ನಿರ್ಮಾಣದ ಯುಗವೆಂದೇ ಕರೆಯ ಬೇಕೆನಿಸುತ್ತದೆ. ಕುಲಶೀಲ, ಆಚಾರಗಳಲ್ಲಿ ವಿಶಾಲ ದೃಷ್ಟಿಯನ್ನೂ, ಉದಾತ್ತ ಮತ್ತು ಉದಾರ ಭಾವನೆಯನ್ನು ತಂದುಕೊಟ್ಟು, ಅಂತರಂಗ ಬಹಿರಂಗ ಶುದ್ಧಿಗಳಿಂದ ಮಹಿಮಾನ್ವಿತರಾಗಿ 'ಕಲ್ಯಾಣವನ್ನು' ಮಾನವ ಕಲ್ಯಾಣದ ಕೇಂದ್ರವನ್ನಾಗಿ ಮಾಡಿದ್ದರು, ಜಗದಣ್ಣ ಬಸವಣ್ಣನವರು. ಭಾರತದ ಬೇರೆ ಬೇರೆ ಭಾಗಗಳಿಂದಲೂ ಆಕರ್ಷಿತರಾಗಿ ಅನೇಕಭಕ್ತರೂ ಶರಣರೂ ಅಲ್ಲಿಗೆ ಧಾವಿಸಿ ಬಂದರು. ಕೆಲವರು ಅಲ್ಲಿಯೇ ನೆಲೆನಿಂತು ತಮ್ಮ ಆತ್ಮದ ಹಸಿವನ್ನು ಹಿಂಗಿಸಿಕೊಂಡುದಲ್ಲದೆ, ನಾಡಿನ ಜನತೆಯಲ್ಲಿ ತಿಳಿವಿನ ಬೆಳಕನ್ನೂ, ಧರ್ಮದ ಪ್ರಚೋದನೆಯನ್ನೂ ತೋರಿದರು. ಅನುಭವ ಮಂಟಪದ ಶಿವಶರಣರ ವ್ಯಕ್ತಿತ್ವ ಈ ರೀತಿ ತೇಜಃಪುಂಜವಾಗಿದ್ದುದರಿಂದಲೇ ಯುಗಯುಗಗಳವರೆವಿಗೂ ಅದು ತನ್ನ ಪ್ರಭಾವವನ್ನು ಬೀರಲು ಸಮರ್ಥವಾಗಿ ಬೆಳಗುತ್ತಾ ಸ್ಫೂರ್ತಿ ದಾಯಕವಾಗಿ ನಿಂತಿದೆ.

ಆ ಕಾಲದ ವೀರಶೈವ ಕವಿಗಳನೇಕರು ಶಿವಶರಣರನ್ನು ನೆನೆಯುವಾಗಲೆಲ್ಲಾ ಆದಯ್ಯನಿಗೂ ಆದರದಿಂದ

ಮನ್ನಣೆಯನ್ನಿತ್ತಿದ್ದಾರೆ. ಕವಿವರನಾದ ಹಂಪೆಯ ಹರೀಶ್ವರನು ಆದಯ್ಯನ ರಗಳೆಯನ್ನು ರಚಿಸಿ, ಅವನ ಉತ್ಕಟ ನಿಷ್ಠೆಯನ್ನು, ಭಕ್ತಿಯ ಕಲಿತನದ ಮಹಿಮೆಯನ್ನು ಕೊಂಡಾಡಿದ್ದಾನೆ. ಷಟ್ಪದೀ ಸಂಪ್ರದಾಯಕನಾದ ರಾಘವಾಂಕ ಕವಿಯ ಸೋಮನಾಥ ಚರಿತ್ರೆ ಆದಯ್ಯನ ಜೀವನದ ಆದರ್ಶವನ್ನೇ ಪ್ರತಿಬಿಂಬಿಸಿರುವಂತೆ ಕಾಣುತ್ತಲಿದೆ.

**ಆದಯ್ಯ:—** ಕಾಲಕಾಲಕ್ಕೆ ಕೆಲವು ಶಿವಶರಣರು ಬಾಳುತ್ತಾ ಬಸವಾದಿ ಪ್ರಮಥರ ಆ ಮಹಾ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಿದ್ದಾರೆ. ಆಶಕ್ತಿ ಸಂಚಯದ ವಾಹಕರಾಗಿ ಹೋದೆಡೆಯಲ್ಲೆಲ್ಲಾ ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ವೀರಶೈವದ ಬೆಳಕನ್ನು ಬೀರಿದ್ದಾರೆ. ತಮ್ಮಕಾರ್ಯದಲ್ಲಿ ಗಟ್ಟಿಗರಾಗಿದ್ದು ಜೈನ ಮತ್ತು ವೈದಿಕ ಧರ್ಮಗಳಪರಮ ಪ್ರಾಬಲ್ಯದ ಆ ಕಾಲದಲ್ಲಿಯೂ ಅತ್ಯಂತ ನಿಷ್ಠೆಯಿಂದಲೂ, ಗಾಂಭಿರ್ಯದಿಂದಲೂ ತಮ್ಮ ಧಾರ್ಮಿಕ ಸಾಧನೆಯನ್ನು ಸಾಹಿತ್ಯದ ಮೂಲಕ, ಸಂಘಟನಾ ಕಾರ್ಯ ರೂಪದಲ್ಲಿ ಕೊನೆಗಾಣಿಸಿದ್ದಾರೆ ಶಿವಶರಣರು. ಇವರಲ್ಲಿ ವಚನಕಾರನಾಗಿ ಮತ್ತು ಭಕ್ತಶ್ರೇಷ್ಠನಾಗಿ ನಮ್ಮ ಮನಸ್ಸು ಸೆಳೆದಿರುವ ಆದಯ್ಯನೂ ಒಬ್ಬನು. ಅವನ ವ್ಯಕ್ತಿದ ಅರಿವು ನಮ್ಮ ಜೀವನದ ಆದರ್ಶಕ್ಕೂ ಬೇಕಾದ ಬೆಳಕಾಗಿರುತ್ತದೆ.

**ಜನನ–ಬಾಲ್ಯ:—** ಸೌರಾಷ್ಟ್ರದ ಪುರದೊಳಗೆ ದೋರದತ್ತನೆಂಬ ಶ್ರೀಮಂತಸೆಟ್ಟಿ, ಆತನಂಗನೆ ಪುಣ್ಯವತಿ. ಇವರಿಗೆ ಮಗನಾಗಿ ಜನಿಸಿದನು ಆದಯ್ಯ. ತನ್ನ ಭಕ್ತಿಗೆ ಕೂಲಿ ಬೇಡುವಂತಹ ಭಕ್ತನಾಗಿರಲಿಲ್ಲ ದೋರದತ್ತಸೆಟ್ಟಿ. ಪ್ರಾಣಲಿಂಗದಂತಿರುವದಂಪತಿಗಳಿಬ್ಬರೂ ಸೊಮನಾಥನಲ್ಲಿ ನಿಸ್ಸೀಮ ನಿಷ್ಠೆಯುಳ್ಳವರಾಗಿದ್ದರು. ಆಚಾರದಲ್ಲಿ ಬ್ರಹ್ಮನಂತೆ, ಚಾರಿತ್ಯದಲ್ಲಿ ಗಂಗೆಯಂತೆ ಸತ್ಕಲಾಪ್ರೌಥಿಮೆಯಲ್ಲಿ ಭಾರತಿಯಂತೆ ಇದ್ದ ತಂದೆ. ಪುರುಷ ಭಕ್ತಿಯಲ್ಲಿ, ಯುಕ್ತಿಯಲ್ಲಿ, ನೀತಿಯ ಶೀಲದಲ್ಲಿ, ಸೌಭಾಗ್ಯದಲ್ಲಿ, ಶಂಕರಾರ್ಚನೆಯಲ್ಲಿ ವಿಮಲ ವಿಖ್ಯಾತೆಯೂದ ತಾಯಿ. ಇವರ ವಾತಾವರಣದಲ್ಲಿ ಮಗುವಿನ ಬಾಲ್ಯ ಕಳೆಯಿತು. ಗುರುಭಕ್ತಿ, ಅರಿವಿನ ಸಾಧನೆ, ಶ್ರದ್ಧೆಯಮೂಲದಲ್ಲಿ ವಿದ್ಯಾ ಪರಿಣತನಾಗಿ ಉತ್ತಮ ಪಾಂಡಿತ್ಯ ಪಡೆದುಕೊಂಡನು ಆದಯ್ಯ. ತಂದೆಯಿಂದ ತೂಕ. ನೋಟ, ರತ್ನಪರೀಕ್ಷೆಗಳಲ್ಲಿ ಆದಯ್ಯ ಪಳಗಿದನು.

ತಾರುಣ್ಯ ಪಡೆದ ಆದಯ್ಯನಿಗೆ ಮುತ್ತು ಮಾಣಿಕ್ಯ ರತ್ನಗಳನ್ನು ಹೇರುಗಳಲ್ಲಿ ತೆಗೆದುಕೊಂಡು, ತೆಂಕನಾಡಿನಕಡೆಗೆ ಹೋಗಿ ಗಳಿಕೆ ಮಾಡಬೇಕೆಂದೆನಿಸಿತಂದೆಯನ್ನು ಬಿನ್ನೈಸಿಕೊಂಡನು. ದೋರದತ್ತಸೆಟ್ಟಿ ಎಲ್ಲಾ ಅನುಕೂಲಗಳನ್ನೂ ದೊರಕಿಸಿಕೊಟ್ಟು ಚಿತ್ತದಲ್ಲಿ ಸೋಮಯ್ಯನನ್ನು ಎಡವಿಡದಿರಬೇಕೆಂದು ಉಪದೇಶಿಸಿ ಹುಲಿಗೆರೆ (ಪುಲಿಗೆರೆ) ಅಣ್ಣಿಗೆರೆಗಳತ್ತ ಹೋಗಿ ವ್ಯವಹಾರದಲ್ಲಿ ತೊಡಗಲು ಅವಕಾಶಮಾಡಿಕೊಟ್ಟನು. ಸಂಪದ್ಭರಿತ ಕರ್ನಾಟಕ ದೇಶಕ್ಕೆ ವ್ಯವಹಾರಿಕನಾಗಿ ಸಾಗಿದನು ಆದಯ್ಯ.

**ವಿವಾಹ:—** ಆದಯ್ಯನು ದಾರಿಯಲ್ಲಿ ಬರುವ ಊರು, ನಗರ, ಅಗ್ರಹಾರಗಳಲ್ಲಿ ವ್ಯವಹಾರಮಾಡುತ್ತ ಚಂದ್ರಾದಿತ್ಯಚಕ್ರೇಶನಾಳುತ್ತಿದ್ದ ಹುಲಿಗೆರೆ, ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಜೈನ ಸಂಸ್ಕೃತಿಯ ಕೇಂದ್ರವಾಗಿದ್ದ ಹುಲಿಗೆರೆಯಲ್ಲಿ ಶಿವಭಕ್ತರ ಮನೆಗಳೇ ಅವನ ಕಣ್ಣಿಗೆ ಬೀಳಲಿಲ್ಲ. ಕೊನೆಗೆ ಹೋಜೇಶ್ವರ ಶಿವಾಲಯದಲ್ಲಿ ಬಿಡದಿ ಮಾಡಿದನು. ಕಾರ್ಯ ನಿಮಿತ್ತವಾದಲ್ಲಿ ತಿರುಗಾಡುತ್ತಿರುವಾಗ ಸುರಹೊನ್ನೆ ಬಸದಿಯ ಅರ್ಚಕ ಪಾರಿಶ ಪಂಡಿತನ ಮಗಳಾದ ಪದ್ಮಾವತಿ ಕಾಮನ ಕೈಯ ಸರಳಿನಂತೆ ಗೋಚರಿಸಿದಳು. ಈ ಇಬ್ಬರ ನೋಟ ಅನುರಾಗದ ಮಾಟವಾಯಿತು. ಗುಣದ, ಐಶ್ವರ್ಯದ ಗಣನೆಯಿಂದ ಆದಯ್ಯನ ಮನೋಬಯಕೆ ಫಲ ಕಾಣುವುದಾಯಿತು. ಶಿವಭಕ್ತ ಆದಯ್ಯ ತನ್ನ ಧರ್ಮದಂತೆ ಹೋಜೇಶ್ವರ ಶಿವಾಲಯದ ಹಿರಿಯ ಆಚಾರ್ಯರಿಂದ ಪದ್ಮಾವತಿಗೆ ಶಿವದೀಕ್ಷೆಯನ್ನು ಕೊಡಿಸಿ ಲಗ್ನವಾದನು. ಮಗಳು ಸುಖವಾಗಿದ್ದರೆ ಸಾಕೆಂದು ಪದ್ಮಾವತಿಯ ತಂದೆ–ತಾಯಿಗಳು ಸಮ್ಮತಿಸಿದ್ದರು. ಆ ನವದಂಪತಿಗಳೂ ಸೋಮನಾಥನಲ್ಲಿ ಅಚಲವಾದ ಭಕ್ತಿ-ನಂಬಿಕೆಗಳಿಂದಲೇ ಬಾಳನ್ನು ಬೆಳಗಬೇಕೆಂದು ನಿಶ್ಚಯಿಸಿ ನಡೆಯುತ್ತಿದ್ದರು.



ಕೆಲವು ದಿನಗಳಾದಮೇಲೆ ಅತಿಥಿಗಳಾಗಿ ಬಂದ ಶಿವಭಕ್ತರನ್ನು ತೃಪ್ತಿಪಡಿಸಲು, ಪತಿಯ ಅನುಮತಿಯಂತೆ ಪದ್ಮಾವತಿಯು ಭೋಜನಕ್ಕೆ ಸಿದ್ಧಪಡಿಸಿದಳು. ಇತ್ತ ಪಾರೀಶ ಪಂಡಿತನ ಮನೆಗೂ ಕೊಪಣನಗರದ ಕಡೆಯ ಹಲವರು ಸವಣರು ಉಂಬ ಹೊತ್ತಿಗೆ ಬರಲು, ಅಡಿಗೆ ಅತಿಥಿಗಳಿಗೆ ಕಡಿಮೆಯೆಂದು ತಂದೆ ತಾಯಿಗಳಿಬ್ಬರೂ ಪದ್ಮಾವತಿಯಲ್ಲಿಗೆ ಹೋಗಿ ಹರಭಕ್ತರಿಗಾಗಿ ಮಾಡಿಟ್ಟ ಸಮಸ್ತ ಭೋಜನವನ್ನು ಬಲಾತ್ಕಾರದಿಂದ ಕೊಂಡೊಯ್ದರು. ಶಿವಭಕ್ತರನ್ನು ಕರೆತಂದ ಆದಯ್ಯನಿಗೆ ನಡೆದ ಸಂಗತಿಯೆಲ್ಲಾ ತಿಳಿದು ಮರುಗಿದನ್ನು ಶರಣರಿಗೆ ಹಣ್ಣು ಹಂಪಲು ಹಾಲು ಉಣಬಡಿಸಿ ತಾಂಬೂಲವನ್ನಿತ್ತು ತೃಪ್ತಿಪಡಿಸಿದನು. ಧಾರ್ಮಿಕ ತಪಸ್ವಿಗಳ ತೃಪ್ತಿಗಾಗಿ ಹರ್ಷಿತನಾದರೂ ಮನದ ತಾಪ ಕಾಡಿತ್ತು. ತನ್ನ ಧರ್ಮದ ದರ್ಶನ ಕರೆಯಿತ್ತಿದ್ದಿತು ಆದಯ್ಯನಿಗೆ.

**ಸ್ಥಿರ ನಿಲುಮೆ:—** ಧರ್ಮದ ಸಂಕಟಕ್ಕೆ ಸಿಕ್ಕಿ ಸಂತಾಪಗೊಂಡು ಉಪವಾಸ ಮಲಗಿದ ಆದಯ್ಯನನ್ನು ಪಾರಿಶಸೆಟ್ಟಿ ಊಟಕ್ಕೆಬ್ಬಿಸಲು, ಮಾತಿಗೆ ಮಾತು ಬೆಳೆದು, ನೀತಿಯ ನೆಲೆಯನ್ನೂ ಭಕ್ತಿಯ ಮೂಲವನ್ನೂ, ಶಿವಶರಣರ ಆದರ್ಶವನ್ನೂ ತೋರಿಸುವ ನಿಲುಮೆಯಿಂದ ಆದಯ್ಯನು ನುಡಿದನು. "ಒಂದು ತಿಂಗಳಲ್ಲಿ ಸೌರಾಷ್ಟ್ರ ಸೋಮೇಶ್ವರನನ್ನು ತಂದು ಹುಲಿಗೆರೆಯ ಸುರಹೊನ್ನೆಯ ಬಸದಿಯಲ್ಲಿ ನಿಲ್ಲಿಸಿದ ತರುವಾಯವೇ ಊಟ ಮಾಡುವೆನೆಂದು ಪ್ರತಿಜ್ಞೆ ಮಾಡಿದನು." ನುಡಿಯೇ ಶಿವಭಕ್ತರ ನಡೆಯೆಂಬುದನ್ನು ತೋರಲು ಸೌರಾಷ್ಟ್ರ ಸೋಮನಾಥನಲ್ಲಿಗೆ ಕರೆತರಲು ನಡೆದನು ಸ್ಥಿರ ನಿಲುಮೆಯಲ್ಲಿ.

ನಾನಾ ವಿರೋಧದಿಂದ ಬರಿದೆ ಕೆಡುವ ಒಡಲನ್ನು ಈಶನಿಗೆ ಬಿಟ್ಟೊಡೆ ಅದೇ ಬದುಕು. ಎಂದು ನಂಬಿದ ಆದಯ್ಯನಿಗೆ, ಎಷ್ಟೆಷ್ಟೋ ಎಡರುಗಳು ಬಂದಾವರಿಸ್ಕಿದರೂ ಜಗ್ಗದೆ ಒಡಲನ್ನು ಉತ್ತಮ ಸಮಯಕ್ಕಿಕುವುದೇ ಗೆಲುವೆಂದು ನಂಬಿದ ನಿಲುವೆಯಲ್ಲಿ ನಡೆದಿದ್ದಾನೆ ಆದಯ್ಯ. ಆ ದಾರಿಯಲ್ಲೇ ಸೋಮಯ್ಯನನ್ನು ಒಲಿಸಿಕೊಂಡು ಹೇಳಿದ ಅವಧಿಯಲ್ಲಿ ಸುರಹೊನ್ನೆಯ ಬಸದಿಯಲ್ಲಿ, ನಂದಿವಾಹನ ಲೀಲೆಯಲ್ಲಿ ಸೋಭಿಸುವ ಸೋಮೇಶ್ವರನನ್ನು ಸ್ಥಾಪಿಸುವನು. ಹರನ ಭವನವಾದ ಬಸದಿಯನ್ನು ಸುತ್ತುಗಟ್ಟಿದ ಅಜ್ಞಾನಿಗಳಾದ ಹಗೆಗಳನ್ನು ಸೋಲಿಸಿ. ಶರಣಾಗತರನ್ನು ಕಾಯ್ದು ಹೋರಾಡಿದ ಆದಯ್ಯನ ಶಿವಭಕ್ತಿಗೆ ಜಯವಾಯಿತು. ಮುಂದೆ ಆದಯ್ಯನು ತನ್ನ ಸತಿ ಪದ್ಮಾವತಿಯೊಡನೆ ಸೋಮನಾಥನ ಬಲದ ಕಂಬದೊಳಗೆ ಐಕ್ಯವನ್ನು ಪಡೆದನು. ಚಂದ್ರಾದಿತ್ಯನೂ ಕೂಡ ಆದಯ್ಯನ ಭಕ್ತಿಗೆ ಬೆರಗಾಗಿ ಆ ಬಸದಿಯನ್ನೇ ಹರ ಮಂದಿರವಾಗಿ ಮಾಡಿದನೆಂದು ಕರೆದಿರುವರು.

**ಗದ್ದುಗೆ:—** ಶರಣ ಆದಯ್ಯನು ಸೌರಾಷ್ಟ್ರದ ಸೋಮನಾಥ ಲಿಂಗವನ್ನೇ ತಂದು ಲಕ್ಷ್ಮೇಶ್ವರದ (ಪುಲಿಗೆರೆ) ಲ್ಲಿ ನೆಲೆಗೊಳಿಸಿದ ವಿಚಾರದಲ್ಲಿ ಇತಿಹಾಸದ ಕಿರಿಕಿರಿಯ ಆಧಾರಗಳು ಕಾಣುತ್ತಿದ್ದರೂ ಆ ಮೂಲಾಗ್ರದ ಹಿರಿಯ ಆಧಾರಕ್ಕೆ ನೆಲೆಯಿಲ್ಲವು. ಈಗ ಲಕ್ಷ್ಮೇಶ್ವರದ ಸೋಮನಾಥ ದೇವಾಲಯದೊಳಗೆ ರಂಗಮಂಟಪದ ಬಲಕ್ಕಿರುವ ಒಂದು ಶಿವಲಿಂಗಕ್ಕೆ "ಆದಯ್ಯನ ಗದ್ದುಗೆ" ಎಂದು ಈಗಲೂ ಹೇಳುತ್ತಾರೆ. ಅನುಭವ ಮಂಟಪದಲ್ಲಿ ಆದಯ್ಯದ ಹೆಸರು ಬರುವುದಿಲ್ಲವು. ಆದ್ದರಿಂದ ವಿಚಾರಿಸಿದರೆ ಹುಲಿಗೆರೆಯ ಸಮೀಪದ ಅಬ್ಬಲೂರಿನ ಏಕಾಂತದ ರಾಮಯ್ಯನಂತೆ ವೀರಶೈವರ ಉದ್ಧರಣ ಪ್ರಸಾರಗಳಿಗಾಗಿ ತನ್ನ ಜೀವನವನ್ನೇ ಪಣವಾಗಿರಿಸಬೇಕೆಂದೂ ನಡೆದು ಗುರಿಮುಟ್ಟಿದ ಆದರ್ಶವೇ ಗದ್ದುಗೆಯಾಗಿ ಕಾಣುತ್ತಲಿರುವುದು ಎಲ್ಲರಿಗೆ. ಆದಯ್ಯನ ಅಭ್ಯುದಯ ಕಾಣುವುದು ಶಿವಶರಣರು ಗತಿಸಿದ ೪೦–೫೦ ವರ್ಷಗಳ ನಂತರವೆಂದೇ ಕಾಣಬರುತ್ತದೆ. ಪುರಾತನರ ೩೦೦೦ ವಚನ ಗ್ರಂಥದ ಕಟ್ಟಿನಲ್ಲಿ ಆದಯ್ಯನ ವಚನಗಳೇ ಕೊನೆಯವಾಗಿರುತ್ತವೆ.

ಈ ಮೇಲಿನ ಆಧಾರಗಳ ಅಳತೆಯಿಂದಲೂ, ಲಕ್ಷ್ಮೇಶ್ವರದ ದೇವಾಲಯದ ಮಾಟವು ಬಸದಿಯ ಕಲೆಯ ಕಟ್ಟಡದಂತೆ ಕಾಣುತ್ತಿರುವುದರಿಂದಲೂ, ಆದಯ್ಯನ ವಚನಗಳ ಅಂಕಿತದ ಆಧಾರದಿಂದಲೂ, ಯೋಚಿಸುವುದಾದರೆ ಆದಯ್ಯನು ಸೌರಾಷ್ಟ್ರದಿಂದ

ಬಂದು ಕರ್ನಾಟಕದಲ್ಲಿ ನೆಲಸಿ, ಶಿವಶರಣರ ಪಥದ ಧ್ವಜವನ್ನು ಎತ್ತಿ ಹಿಡಿದು ಜಗದ ಜೀವಿಗಳ ಉದ್ಧಾರಕ್ಕೆ ಆದರ್ಶನಾಗಿರುವುದನ್ನು ಮನಗಾಣ ಬಹುದಾಗಿರುತ್ತದೆ. ಸೌರಾಷ್ಟ್ರ ಕರ್ನಾಟಕಗಳ ಭಾವೈಕ್ಯಕ್ಕೂ, ಭಕ್ತಿಯ ಕಲಾಶಕ್ತಿಗೂ ಮತ್ತು ಭಕ್ತರ ದರ್ಶನದ ದಾರಿಗೂ, ದಿವ್ಯ ಜ್ಯೋತಿಗಯಾಗಿ ಬೆಳಗಿದ್ದಾರೆ ಆದಯ್ಯನವರು. ಇಂದು ಎಲ್ಲರೂ ಮನಗಾಣ ಬೇಕಾಗಿರುತ್ತದೆ ಅವರ ದಾರಿಯಲ್ಲಿ ನಡೆದು.

### ವಚನದ ಮಹತ್ವ:—

ವಚನಕಾರರ ವ್ಯಕ್ತಿತ್ವದ ವಿಕಾಸವನ್ನು ಅರಿಯ್ಯಬೇಕಾದರೆ ಅವರ ಅಂತರಂಗದ ರತ್ನದಂತಿರುವ ವಚನಗಳನ್ನೇ ಅಭ್ಯಸಿಸಬೇಕು. 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ' ಎಂಬ ಬಸವಣ್ಣನವರ ವಚನವು ಅವರ ನಿತ್ಯಜೀವನದ ಸಪ್ತ ಶೀಲದ ಸೂತ್ರವಾಗಿಯೂ ಮತ್ತು ಜಗದ ಜೀವಿಗಳ ಆಚಾರ ವಿಚಾರದ ಅಡಿಗಲ್ಲಾಗಿರುವುದನ್ನೂ ಸ್ಮರಿಸಲೇ ಬೇಕಾಗಿರುತ್ತದೆ. ವಚನಗಳಲ್ಲಿ ಅವರ ಅಂತರಂಗದ ಆಧ್ಯಾತ್ಮಿಕ ಸಾಧನೆಯ ಸಾರಸರ್ವಸ್ವವೂ ಅಲ್ಲಿ ನಮಗೆ ದೊರೆಕೊಳ್ಳುತ್ತದೆ. "ಸೌರಾಷ್ಟ್ರ ಸೋಮೇಶ್ವರಾ" ಎಂಬ ಅಂಕಿತದಲ್ಲಿ ಬರೆದ ಆದಯ್ಯನ ನಾಲ್ಕು ನೂರು ವಚನಗಳನ್ನು ಶ್ರೀ ಉತ್ತಂಗಿ ಚೆನ್ನಪ್ಪನವರು ಪರಿಶೋಧಿಸಿ ಪ್ರಕಟಿಸಿದ್ದಾರೆ. ಹಿಂದಿನ ವಚನಕಾರರ ಸರಣಿಯ ಸಾಲಿನಲ್ಲಿ ಆದಯ್ಯನ ವಚನಗಳಿಗೂ ಆದ್ಯತೆದೊರೆತ್ತ್ವ ಅವುಗಳ ಮಹತ್ವ ಮತ್ತು ಮಹಾಶಕ್ತಿಯ ಭಕ್ತಿಯನ್ನು ಸಾರಿ ಹೇಳುತ್ತಿವೆ.

ಆದಯ್ಯನ ನಿಷ್ಠೆಯಹೋರಾಟ ಅವನ ಆಧ್ಯಾತ್ಮಿಕ ಜೀವನದ ಅಡಿಗಲ್ಲಾಗಿದೆ. ಅವನ ವಚನಗಳು ಸುಸ್ಪಷ್ಟ ವಿಚಾರ ಸ್ಮರಣಿಯನ್ನು ನಮಗೆ ತಿಳಿಸುತ್ತಲಿವೆ. ತನ್ನ ವಾದವನ್ನು ಆಧಾರ ಪೂರ್ವಕ ಪಾಂಡಿತ್ಯದಿಂದ ಮಂಡಿಸಿದ್ದಾನೆ. ಆದಯ್ಯನ ಅನುಭವದ ಆಳವನ್ನೂ, ಜ್ಞಾನದ ಮೂಲವನ್ನೂ, ವ್ಯಕ್ತಿತ್ವದ ಘನತೆಯನ್ನೂ, ಭಕ್ತಿಯ ನೆಲೆಯನ್ನೂ, ಭಾವದ ಬೆಲೆಯನ್ನು ತಿಳಿದುಕೊಳ್ಳಲು ಕೆಲವು ವಚನಗಳನ್ನು ಇಲ್ಲಿ ಪರಿಶೀಲಿಸಬಹುದು.

### ಭಕ್ತಿಯದಾರಿ

"ಅಗಣಿತನದ್ವಯನನುಪಮನಪ್ಪ ಅಭವಂಗೆ-
ಭವರಹಿತನಾಗಿ ಭಕ್ತಿಯ ಮಾಡಬೇಕಲ್ಲದೆ
ತಾನುಭವದೊಳಿರ್ದು ಬಂಧನಕ್ಕೊಳಗಾಗಿ ಮರ್ತ್ಯರಿಗೆ ತೊತ್ತಾಗಿ

ಮಾಯಾ ಪಾಶದ ಕಾಲುಕಣ್ಣಿಯೊಳು ಸಿಲ್ಕಿ,
ಕಾಮಂಗೆ ಗುರಿಯಾಗಿ ಕಾಲಂಗೆ ಕೈವಶವಾಗಿ,
ಮಾಡುವ ಭಕ್ತಿಗೆ ಇವರು ನಾಚರು ನೋಡಾ!
ಮರ್ಮವರಿತು ಮಾಡದ ಭಕ್ತಿ ಸೊಣಗನ ಹಿಂದೆ
ಸೊಣಗಹರಿದಂತಾಯಿತ್ತಯ್ಯ ಸೌರಾಷ್ಟ್ರ ಸೋಮೇಶ್ವರಾ.

ಮನ ಮತಿಗಳ ಹಿಡಿತದಲ್ಲೂ, ಅರಿಷಡ್ವರ್ಗಗಳ ಕಡಿತದಲ್ಲೂ, ತ್ರಿಗುಣಗಳ ನೆಲೆಯನಿಲುಮೆಯಲ್ಲೂ ನಡೆದು, ಮಾನವಗಾಳಾಗದೆ ಮುಕ್ಕಣ್ಣನಿಗೆ ಮಣಿದು ಮಾಡಿದ ಭಕ್ತಿ ಭವ ಬಂಧನವ ಕಳೆಯಬಲ್ಲುದೆಂದು ಸಾರಿದ್ದಾರೆ. ಅರಿವಿನ ಗುರಿಯಿಲ್ಲದ ಭಕ್ತಿ ಸೊಣಗನ ಕೂಗಾಗಿರುವುದೆಂದೇ ಹೇಳಿದ್ದಾರೆ. ಆದಯ್ಯ ಮಾಯೆಯನ್ನು ಕುರಿತು ಒಡನುಡಿದ ನುಡಿಗಳು ಅಕ್ಕಮಹಾದೇವಿಯ ವಚನಗಳ ವಿಚಾರದ ದಾರಿಯಲ್ಲಿ ನಡೆದಿವೆ. ಸರಳವಾಗಿದ್ದು ಪರಿಣಾಮಕಾರಿಗಳೂ ಆಗಿವೆ.

### ಕಾಡಿತ್ತು

"ತನುಮಾಯೆ, ತನುವಿಂಗೆಮನಮಾಯೆ,
ಮನಕ್ಕೆ ನೆನಹುಮಾಯೆ, ನೆನಹಿಂಗೆ ಅರಿವುಮಾಯೆ;
ಅರಿವಿಂಗೆ ಕರುಹು ಮಾಯೆ;
ಇದನರಿಯದೆ ಹರಿಹರ ಬ್ರಹ್ಮಾದಿಗಳೆಲ್ಲರೂ
ಮಾಯೆಯಕಾಲ ಸರಮಾಲೆಗಳಾದರು.
ನಿನ್ನ ಮಾಯೆ ದೇವದಾನವ ಮಾನವರಿಗೆ ಸರಿದೊಡಕಾಗಿ
ಕಾಡಿತ್ತು ಸೌರಾಷ್ಟ್ರ ಸೋಮೇಶ್ವರಾ"

ಇಲ್ಲಿಯ ಪ್ರಭುದೇವರ-ಹೆಣ್ಣು, ಹೊನ್ನು, ಮಣ್ಣು ಮಾಯೆಯಲ್ಲ; ಮನದ ಮುಂದಣ ಆಸೆಯೇ ಮಾಯೆ" ಎಂಬುದನ್ನು ಹೇಳದಿದ್ದರೂ ತನು-ಮನ-ಮತಿಗಳೇ ಮಮತೆಯಾಗಿ, ಮೋಹವಾಗಿಕಾಡುತ್ತವೆ. ಅವು ಯಾರನ್ನು ಬಿಟ್ಟಿಲ್ಲವೆಂದೂ ಹೇಳಿದ್ದಾರೆ. ಮೋಹವೇ ಮಾಯೆ. ಮಾಯೆಯನ್ನು ಗೆದ್ದವನೇ



ಮಹೇಶ್ವರನೆಂದು ಕರೆದಿದ್ದಾರೆ, ಆದಯ್ಯನವರು.

**ಮುನ್ನವೆ....** ಕಾಮಧೇನು ಕಲ್ಪವೃಕ್ಷಗಳು ಬಯಸಿದಲ್ಲದೆ ಏನನ್ನೂ ಕೊಡಲರಿಯವು, ಆದರೆ ಸೋಮೇಶ್ವರ ಲಿಂಗ ಕೊಡುವ ಬಗೆಯನ್ನು ಆದಯ್ಯ ಸುಂದರವಾಗಿ ನಿರೂಪಿಸಿದ್ದಾನೆ.

"ಕಾಮಧೇನು ಕಾಮಿಸಿದಲ್ಲದೆ ಈಯಲರಿಯದು,
ಕಲ್ಪವೃಕ್ಷ ಕಲ್ಪಸಿದಲ್ಲದೆ ಈಯಲರಿಯದು,
ಚಿಂತಾಮಣಿ ಚಿಂತಿಸಿದಲ್ಲದೆ ಈಯಲರಿಯದು,
ನವನಿಧಿ ಬಯಸಿದಲ್ಲದೆ ಈಯಲರಿಯದು,
ತವನಿಧಿ ತೆಗೆದಲ್ಲದೆ ಕೊಡಲರಿಯದು,
ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಬಯಸದೆ,
ಎನ್ನ ನೀವುದಕ್ಕೆ ಮುನ್ನವೆ ತನ್ನ ನಿತ್ತ
ಸೌರಾಷ್ಟ್ರ ಸೋಮೇಶ್ವರ ಲಿಂಗವ ಕಂಡೆ."

ಬೇಡಿ ಮತ್ತು ಕಾಡಿ ಪಡೆಯುವುದು, ಚಿಂತಿಸಿ ಬಯಸಿ ಬರಿದಾಗುವುದು ಬೇಡ. ಭಾವದ ಭಕ್ತಿಯಲ್ಲಿಯೇ ಮೊದಲೇ ಕೊಟ್ಟಿರುವ ಲಿಂಗಕ್ಕೆ ಮರೆಹೊಕ್ಕರೆ ಮತ್ತಾವುದೂ ಕೊಡಲು ಬರದು ಮತ್ತು ಇರದು ಎಂದು ಆದಯ್ಯನವರ ಆದರ್ಶ ಅರಿವಿತ್ತಿದೆ.

### ತತ್ತ್ವಗಳು—

"ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತ ಸುಖಿ,
ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳುಮನಗೊಂಡು ಸುಳಿವಾತ ದುಃಖಿ,
ಮನಸು ಬಹಿರ್ಮುಖವಾಗಲು ಮಾಯಾಪ್ರಪಂಚ;
ಮನವಂತರ್ಮುಖನಾದರೆ ಅವಿರಳಜ್ಞಾನಿ,
ಮನವು ಮಹದಲ್ಲಿ ನಿಂದಿರಲಾತ ಮುಕ್ತನು
ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಭೇದ್ಯನು."

ಗಹನವಾದ ತಾತ್ತ್ವಿಕ ವಿಷಯಗಳನ್ನು ತಿಳಿಯಾಗಿ ತಿಳಿಸಬಲ್ಲ ಆದಯ್ಯನ ಜಾಣ್ಮೆ ತಲೆದೂಗಿಸುವಂತಿದೆ.

ಸುಖ-ದುಃಖ, ಜ್ಞಾನಿ-ಮುಕ್ತ ಮುಂತಾದವರ ಬಗ್ಗೆ ಅಲ್ಪದರಲ್ಲೇ ಮಾರ್ಮಿಕವಾಗಿ ತಿಳಿಸಿದ್ದಾನೆ. ಪ್ರೀತಿ-ಮೋಹಗಳ ನೀತಿ ನಿಲುಮೆಯನ್ನು ಸಾರಿದ್ದಾನೆ ಆದಯ್ಯ. ಚನ್ನಬಸವಣ್ಣನವರ ಮನೋ ತತ್ತ್ವಗಳನ್ನು ಮನಗಂಡಿದ್ದಾನೆ.

### ದೃಷ್ಟಾಂತಗಳು

ಆಲೋಚನೆಗಳನ್ನು ದೃಷ್ಟಾಂತಗಳನ್ನು ಕೊಟ್ಟು ತೊಡಕಾಗದಂತೆ ಬಿಡಿಸಿಟ್ಟು ಹೌದೆನ್ನುವಂತೆ ಹೇಳುತ್ತಾನೆ ಆದಯ್ಯ.

"ಘಟವ ಮಾಡಿದ ಕುಲಾಲನಾ ಘಟದೊಳಿಪ್ಪುದಿಲ್ಲವೆಂತಂತೆ,
ಬೆಳಸ ಬಿತ್ತಿದವನಾ ಬೆಳೆಯೊಳಿಪ್ಪುದಿಲ್ಲವೆಂತಂತೆ,
ರಥವ ಮಾಡಿದ ರಥಿಕ ತಾ ರಥದೊಳಿಪ್ಪುದಿಲ್ಲವೆಂತಂತೆ
ಸರ್ವವನಾಡಿಸುವ ಶರ್ವನು ಯಂತ್ರ ಯಂತ್ರಿಯಂತಿರ್ಪ
ನಾಗಿ ಸರ್ವವೂ ಶಿವನೆಂಬ ಅಜ್ಞಾನಿಗಳ ಮೆಚ್ಚುವನೇ
ನಮ್ಮ ಸೌರಾಷ್ಟ್ರ ಸೋಮೇಶ್ವರನು."

ಆದಯ್ಯ ಕಂಡ 'ಚೈತನ್ಯ ಜಂಗಮದ' ಚಿತ್ರ ಭವ್ಯ ಭಾವ ಕಲ್ಪನೆಯಿಂದ ಕೂಡಿದೆ. ಅದನ್ನು ಭಾವಿಸಿ ನೋಡಿದಂತೆ ಆ ಮೂರ್ತಿ ದಿವ್ಯವಾಗಿ ಕಾಣುತ್ತದೆ. ಭಾವನೆಯ ಬ್ರಹ್ಮವಪ್ಪ ನಮ್ಮ ಕೂಡಲ ಸಂಗಮದೇವ" ನೆಂಬುದನ್ನು ದಾಟಿದ ದಾರ್ಶನಿಕನಾಗಿದ್ದಾನೆ ಆದಯ್ಯ.

### ಚೈತನ್ಯ ಜಂಗಮ

"ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂ ಮೇಲೆ ಉತ್ತಮಾಂಗ
ಬ್ರಹ್ಮಾಂಡವೇ ಮಕುಟ, ಗಗನವೇ ಮುಖ;
ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳೇ ಬಾಹುಗಳು;
ಮಹದಾಕಾಶವೇಶರೀರ, ತನುಗಳೇ ತನೂರುಹ;
ಶೂನ್ಯವೇ ಕರಸ್ಥಲ ಲಿಂಗ, ನಕ್ಷತ್ರವೇ ಪುಷ್ಪ;
ನಿತ್ಯವೇ ಪೂಜೆ, ಮೇಘವೇ ಜಡೆ;
ಬೆಳದಿಂಗಳೇ ವಿಭೂತಿ, ಪರ್ವತಗಳೇ ರುದ್ರಾಕ್ಷಿಗಳು
ಪಂಚಬ್ರಹ್ಮವೇ ಪಂಚಾಕ್ಷರ, ತತ್ತ್ವಂಗಳೇ ಜಪಮಾಲೆ;
ಮೇರುವೇ ದಂಡಕೋಲು, ಸಮುದ್ರವೇ ಕಮಂಡಲು
ಋತುಗಳಾರು ಷಟಸ್ಥಲ, ಶೇಷನೇ ಕಟಿಸೂತ್ರ;
ಜಗವೇ ಕಂಥೆ, ಅನಂತವೇ ಕೌಪೀನ;
ತ್ರಿಗುಣ ಒಂದಾದುದೆ ಖರ್ಪರ;
ಚತುರ್ಯುಗವೇ ಗಮನ;

ಮಿಂಚೇ ಅಂಗರುಚಿ, ಸಿಡಿಲೇ ಧ್ವನಿ;
ವೇದಾಗಮವೇ ವಾಕ್ಯ, ಜ್ಞಾನ ಮುದ್ರೆಯುಪದೇಶ;
ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೇ ಅರಮನೆ;
ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ
ಇಂತಪ್ಪ ಚೈತನ್ಯ ಜಂಗಮಕ್ಕೆ, ಆನು ನಮೋನ್ನಮಃ
ಎನುತಿರ್ದೆನಯ್ಯ ಸೌರಾಷ್ಟ್ರ ಸೋಮೇಶ್ವರಾ"

ಈ ವಿಶ್ವವ್ಯಾಪಕ ಚೈತನ್ಯದದರಿವಿಗಾಗಿ ಸೊರ ನಿಶ್ರಮ ಲೆಕ್ಕಿಸದೆ, ಶ್ರದ್ಧೆಯಿಂದ ದೂರಾಗದೆ, ಭಾವದ ಭದ್ರತೆಯಲ್ಲಿ ಮೂಡಿದ, ಅಂತರಂಗದ ವ್ಯಾಪಕ ಚೈತನ್ಯವೇ ಜಂಗಮವೆಂದಿದ್ದಾರೆ. ಜನ್ಮದಿಂದ ದೂರ ಮಾಡಲು ಶಕ್ತವಾದ ಜಗದೀಶನ ಚೈತನ್ಯವೆಲ್ಲರಲ್ಲೂ ಇದೆ ಕಂಡು ಕೊಂಡಾಗ ಮಾತ್ರವೆಂದು ಸಾರಿದ್ದಾರೆ. "ಪೂಜಿಸುವರ ಕಂಡು ಪೂಜೆ ಗೈವರಲ್ಲಿದೆ, ಪೂಜೆ ರಹಿತವಾದ ಪೂಜ್ಯನನಾರೂ ಪೂಜಿಸುವರಿಲ್ಲ ನೋಡಯ್ಯ ಎಂಬಲ್ಲಿ ಇಂತಪ್ಪ ಚೈತನ್ಯ ಜಂಗಮ ನನ್ನೇ ಆದಯ್ಯ ಮನದಲ್ಲಿ ಇಟ್ಟರಬೇಕು. ದೇಹವೇ ದೇವ ಮಂದಿರ ಆತ್ಮನೇ ಚೈತನ್ಯ ಜಂಗಮನೆಂದು ಸಾರಿದ್ದಾರೆ. ಎಲ್ಲಾ ಕಡೆಯಿರುವ ನಿನಗೆ ನಾವೆನಿತು? ಚೈತನ್ಯ ಬ್ರಹ್ಮವೇ ಆತ್ಮ ಲಿಂಗುವಾಗಿರುತ್ತದೆ. ಆದಯ್ಯನನರುವಿನಲ್ಲಿ.

### ಹಿರಿಮೆ

"ಬಸವಣ್ಣನೆನ್ನ ಅಂಗ ಮಡಿವಾಳನೆನ್ನ ಮನ,
ಪ್ರಭುವೆನ್ನ ಪ್ರಾಣ, ಚೆನ್ನಬಸವಣ್ಣನೆನ್ನ ಕರಸ್ಥಲದ ಲಿಂಗ,
ಘಟ್ಟಿವಾಳನೆನ್ನ ಭಾವ, ಚಾಮರಸನೆನ್ನರಿವು,
ಮಹಾದೇವಕ್ಕನೆನ್ನರಿವು, ಮುಕ್ತಾಯಿಯೆನ್ನಕ್ಕರು
ಸತ್ಯಕ್ಕವೆನ್ನುಕ್ತಿ, ನಂಬಿಯಕ್ಕನೆನ್ನ ನಿಶಯ,
ನಿಜಗುಣನೆನ್ನ ಕ್ಷಮೆ, ರೇವಣಸಿದ್ದದೇವರೆನ್ನ ನೇತ್ರ.
ಸಿದ್ಧರಾಮ ತಂದೆಗಳೆನ್ನ ನೇತ್ರದ ದೃಕ್ಕು
ಪಂಡಿತಾರಾಧ್ಯರೆನ್ನ ಜಿಹ್ವೆ,
ಮರುಳಸಿದ್ಧರೆನ್ನ ಶ್ರೋತ್ರ, ಏಕೋರಾಮ್ಮನೆನ್ನ ನಾಸಿಕ;
ಅಸಂಖ್ಯಾತರೆನ್ನ ಅವಯವಗಳು ಪುರಾತನರೆನ್ನ ಪುಣ್ಯದ ಪುಂಜ;
ಏಳನೂರೆಪ್ಪತ್ತು ಅಮರಗಣಗಳೆನ್ನ ಗತಿ-ಮತಿ ಚೈತನ್ಯ
ಸೌರಾಷ್ಟ್ರ ಸೋಮೇಶ್ವರಾ ಆನು ಆ ನಿಮ್ಮ ಶರಣರ
ಪಡಿದೊತ್ತಯ್ಯ, ನಿಮ್ಮ ಧರ್ಮ, ನಿಮ್ಮ ಧರ್ಮ."



ಹೀಗೆಂದು ಹಿಂದಿನಶರಣರ ನಡೆನುಡಿಗಳ ಆದರ್ಶದಿಂದ ಆದಯ್ಯನ ವ್ಯಕ್ತಿತ್ವಕ್ಕೆ ಹಿರಿಮೆ ಬಂದಿದೆ. ಅವರೆಲ್ಲರ ತಾದಾತ್ಮ್ಯ ಭಾವನೆಯುಳ್ಳವನಾಗಿದ್ದನೆಂಬುದಕ್ಕೆ ಈ ವಚನವೇ ಸಾಕ್ಷಿಯಾಗಿದೆ. ಆದ್ಯರವಚನ ವಿರಲು, ಎನಗೇನು ವಿಚಾರಗಳ ಕೊರತೆಯೆಂಬುದೇ ಆದಯನ್ಯ ಅರಿವಿನ ಆದರ್ಶವಾಗಿರುತ್ತದೆ.

**ಅನುಭಾವ :—** ಆದಯ್ಯನ ಅನುಭಾವದ ಆಳಕ್ಕೆ ಅವನ ಬೆಡಗಿನ ವಚನಗಳೇ ನಿದರ್ಶನವಾಗಿವೆ. ಭಾವದ ಮರೆಯ ಅನುಭವವನ್ನು ಪ್ರಕಟಪಡಿಸುವಾಗ ಅದು ಬೆಡಗಿನರೂಪದಲ್ಲಿ ಒಡಪಿನ ಅಂದವನ್ನು ಪಡೆದು ಅಭಿವ್ಯಕ್ತ ಗೊಳ್ಳುವುದುಂಟು. ಕಷ್ಟದಿಂದ ಆ ಸಂಕೇತವನ್ನು ತಿಳಿದುಕೊಂಡರೆ ಅದರ ಅರ್ಥವ್ಯಾಪ್ತಿಯೂ ವಿಶಾಲ ಗೊಳ್ಳುವುದು. ವಿಚಾರಕೊಡುತ್ತಾ ವಿವೇಕವನ್ನು ಬೆಳಸಿ ಭಾವದ ಮರೆಯ ಬ್ರಹ್ಮವನ್ನು, ಬಯಲಿಗೆಳೆದು ಭವದ ಭಾರವನ್ನೇ ಕಳೆಯುವುದು.

ಕೊಡಗೂಸಿಗೆ ಕಡು ಬೇನೆಯಾದುದಕಂಡೆ,
ಹಡೆದಿರ್ದ ಶಿಶುವ ಕೊಡಗೂಸು ನುಂಗಿತ್ತಕಂಡೆ.
ಹಿಡಿದಿರ್ದ ಕೋಳಿ ಒಡನುಂಬುದ ಕಂಡೆ,
ಒಡನಿರ್ದ ನೀಲ ಬಿಡುಮುತ್ತಾದುದಕಂಡೆ
ಕೊಡನೊಳಗೊಂದುಕಡೆ ಇಲ್ಲದ ರತ್ನವ ಕಂಡೆ
ಸೌರಾಷ್ಟ್ರ ಸೋಮೇಶ್ವರ ನೆಡೆವಿಡದಿಲ್ಲದಿಪ್ಪ ಬೆಡಗ ಕಂಡೆ"

ಇಲ್ಲಿ. ಕೊಡಗೂಸಿಗೆ ಶರಣಸತಿಯೆಂದೂ, ಶಿವತತ್ತ್ವದಲ್ಲಿ ಬೆರಸಬೇಕೆಂಬ ತೂರ್ಯಧ್ವನಿಗೆ ಕಡುಬೇನೆಯೆಂದೂ, ಇಷ್ಟಲಿಂಗವನ್ನು ಹಡೆದಿರ್ದಶಿಶುವಿಗೂ, ಅಂತರಂಗದ ಅಜ್ಞಾನವನ್ನು ಒಡನಿರ್ದನೀಲಕ್ಕೂ, ಮುಕ್ತಿಸ್ವರೂಪವನ್ನು ಬಿಡುಮುತ್ತಿಗೂ ಸಂಕೇತಿಸಿ ನಿರೂಪಿಸಲಾಗಿದೆ. ಅವುಗಳು ಹೊಳೆದಾಗ ಪ್ರತಿನುಡಿಯೂ ಅರ್ಥ ವ್ಯಾಪ್ತಿಯಿಂದ ಅರಳಿ ಭಕ್ತಿ, ಜ್ಞಾನ, ವೈರಾಗ್ಯದರಿವಿನಿಂದ ಮುಕ್ತಿ ಎನ್ನುವ ಪರಿಮಳವನ್ನು ಕೊಡದಿರುವವೇ ಎಂದು ಆವಯ್ಯನ ಅನುಭಾವದ ಆಳವಾಗಿದೆ.

**ವ್ಯಕ್ತಿತ್ವ :—** ಸೌರಾಷ್ಟ್ರದಿಂದ ಪುಲಿಗೆರೆಗೆ ಬಂದು ತನ್ನ ನಿಷ್ಠಾವಂತಿಕೆಯ ಜೀವನದಿಂದ ವೀರ



ಶೈವದ ಉದ್ಧರಣ ಮತ್ತು ಪ್ರಸಾರಗಳನ್ನು ಕೈಗೊಂಡು ಅಸತ್ಯ, ಅನ್ಯಾಯಗಳೆದುರು ವೀರಸತ್ಯಾಗ್ರಾಹಿಯಾಗಿ ಪಾಂಡಿತ್ಯದಿಂದಲೂ, ಧೀ ಶಕ್ತಿಯಿಂದಲೂ ಆಧ್ಯಾತ್ಮಿಕ ತೇಜಸ್ಸಿನಿಂದಲೂ ಜನಮನವನ್ನು ಸೆಳೆದುಕೊಂಡು, ನಿಜದ ನಿಲುವನ್ನು ತೊರಿಸಿಕೊಟ್ಟು ನಡೆದ ಆದಯ್ಯನ ವ್ಯಕ್ತಿತ್ವಅಚ್ಚರಿಗೊಳಿಸುವಂತಿದೆ. ಆದಯ್ಯ ಬರಿಯ ವಾಣಿಯ ಹಂಗಿನಲ್ಲಿ ಉಲಿದಲೆದು ಹೋದವನಲ್ಲ. ನಡೆಯೇ ನುಡಿಯಾಗಿ ಸೋಮೇಶ್ವರನಲ್ಲಿ ಸೇರಿದವನು.

"ದೇಹಿಯಲ್ಲ, ನಿರ್ದೇಹಿಯಲ್ಲ, ನಿತ್ಯನು;
ಫಲಪದವ ಮೀರಿದ ಸ್ವತಂತ್ರನು;
ಆಗುಹೋಗಿಲ್ಲದ ಚರಿತನು;
ಅಚಲ ಲಿಂಗ ಸನ್ನಿಹಿತನು,
ನಿಜಲಿಂಗ ಘನತೇಜ ಹೆಸರಿಡಬಾರದ ಹಿರಿಯನಯ್ಯ,
ಸೌರಾಷ್ಟ್ರ ಸೋಮೇಶ್ವರ ನಿಮ್ಮ ಶರಣ!"

ಅಗಣಿತ ಶಿವಶರಣರ ಸಮೂಹದಲ್ಲಿ, ತನ್ನ ಸ್ವಶಕ್ತಿಯಿಂದ ಎಲ್ಲರ ಗಮನವನ್ನುಸೆಳೆದ ಆದಯ್ಯನ ವ್ಯಕ್ತಿತ್ವವು ಬಹುಮಹತ್ತರವಾದುದು. ಭವವ ದಾಟದಿದ್ದರೆ ಬಂಧಂನಗಳು ದೂರಾಗುವುದಿಲ್ಲವು. ಭಕ್ತರಾದಾಗಲೇಬಂಧನದಬಿಡುಗಡೆಯು.

ಸೌರಾಷ್ಟ್ರದಲ್ಲಿ ಹುಟ್ಟಿ, ಕರ್ನಾಟಕದ ಧರ್ಮ ಸಂಸ್ಕೃತಿಗಳ ಭಕ್ತಿ, ಜ್ಞಾನ, ವೈರಾಗ್ಯದ ಗುಟ್ಟಾದ ಆಧ್ಯಾತ್ಮದ ಅರಿವನ್ನು ಜಗತ್ತಿಗೆ ಕೊಟ್ಟು, ಮುಂದಿನವರ ಬಾಳಿನ ಬೆಳಕಿಗೆ ದಾರ್ಶನಿಕರಾಗಿ ಹೋದ ಆದಯ್ಯನವರ ಜೀವನದ ಅರಿವು ಎಲ್ಲರ ಅನುರತ್ವಕ್ಕೆ ಬೇಕೆಂಬುದನ್ನು ಮರೆಯದಿರಬೇಕಾಗಿರುತ್ತದೆ. ಮಾನವ ಜನಾಂಗ ನರಕಾಸುರನ ಅನುವಂಶಿಕವಾದ ಆ ಸುರೀ ಶಕ್ತಿಯನ್ನು ಗೆದ್ದು ಕವಿದಿರುವ ಕತ್ತಲನ್ನು ತೊಡೆದು ಜೀವನದ ಬೆಳಕನ್ನು ಕಾಣಬೇಕಾಗಿರುತ್ತದೆ. ಇಂತಹ ದಿವ್ಯ ಸಾಧನೆಯ ಹೊಸ್ತಿಲ ಮೇಲೆ ನಿಂತಿರುವ ನಮ್ಮನ್ನು ನಮ್ಮ ಆತ್ಮ ಶಕ್ತಿಯೇ ಕೈಹಿಡಿದು ನಡೆಸಬೇಕು. ಇನ್ನಾವ ಶಕ್ತಿಯೂ ರಕ್ಷಿಸಲಾರದು ನಮ್ಮನ್ನು. ನಾವು ಮಾಡುವ ಕಾರ್ಯಗಳಲ್ಲಿ, ನಾವು ನಡೆಸುವ ಜೀವನದಲ್ಲಿ ನಮ್ಮನ್ನು ಕೈ ಹಿಡಿದು ಕರೆದೊಯ್ಯುವ ಆ ಮಹಾ ಚೇತನಕ್ಕೆ ಬಾಗೋಣ. ಬಸವಾದಿ ಪ್ರಮಥರು ನಡೆದ ದಾರಿಯಲ್ಲಿ ನಡೆದ ನಮ್ಮನ್ನೂ ಬರಲು ಕರೆಯಿತ್ತ ಆದಯ್ಯನ ಆತ್ಮ ದರ್ಶನದ ದಾರಿಯಲ್ಲಿ ನಡೆದು ಶಾಂತಿಯ ಸುಖದ ನೆಲೆಯಾದ ಮುಕ್ತಿಯ ಬೆಲೆಯನ್ನು ಕಾಣಲು ಮುಂದಾಗ ಬೇಕೆಂಬುದೇ ಈ ಲೇಖನದ ಬಯಕೆಯೆಂಬುದನ್ನು ಬಯಸುತ್ತಲಿದ್ದೇನೆ.

## ತಿಳಿನೀ ಮನಸಿಟ್ಟು

ದೇಹವನು ಮಾರಿ ವೇಶ್ಯೆಯಾದಳು ಹೆಣ್ಣು
ಮೋಹದಾ ಮನ್ಮಥನ ಸುಟ್ಟಿತು ಈಶನಾಕಣ್ಣು
ಮೈಸುಟ್ಟು ಬೂದಿಯಾಯಿತು ತಾಕರ್ಪೂರ
ದಾನದಾ ಕೈಯದು ಎಂದೆಂದಿಗೂ ಅಮರ "೧"

ನೂರೆಂಟು ಗೃಹಗಳ ತೂರಿದನಿಂದು ಧನಿಕ
ಕೈನೀಡಿ ಬೇಡುವವನೆಂದಿಗೂ ತಿರುಕ
ಸತಿಸುತರ ದೂಡಿ ಸುರೆಯಲ್ಲಿ ತಣಿದವನೇ ಕುಡುಕ.
ಮಾನವನ ದೆಹವದು ಇಹದಲ್ಲಿ ಕ್ಷಣಿಕ. "೨"

ಗುರುಶಿಷ್ಯ ಬಾಂಧವ್ಯ ಕಡಿಯದಾ ಗಂಟು
ದೇಗುಲದ ದೇವನಿಗೆ ಭಕ್ತನಾ ನಂಟು
ಬಯಲಲ್ಲಿ ತೂರದಿರು ನಿನ್ನ ಸಂಸಾರದಾ ಗುಟ್ಟು
ನವೀನತೆಯ ನಾಂದಿ ಇದು ತಿಳಿನೀ ಮನಸಿಟ್ಟು

—ಪೇನಾ. ವೆಂಕಟೇಶ್

# “ಸ್ವತಂತ್ರ ಭಾರತದ ಪ್ರಥಮ ಕ್ರಾಂತಿಕಿಡಿ ಚೆನ್ನಮ್ಮ”

ಶ್ರೀ ಎಸ್. ವಿ. ಜೇವೂರ್, ಡಿ. ಪಿ. ಆಯ್., ಬೆಂಗಳೂರು.

ಭಾರತ ಸ್ವಾತಂತ್ರ್ಯ ಸಂಗ್ರಾಮದ ಪ್ರಪ್ರಥಮ ಕ್ರಾಂತಿಕಿಡಿ ಸಿಡಿದುದು ಕರ್ನಾಟಕದ ವೀರ ಭೂಮಿಯಲ್ಲಿ. ಅದು ಬ್ರಿಟಿಷ್ ಸಾಮ್ರಾಜ್ಯದ ಮಹಾಶಕ್ತಿ ವೃಕ್ಷಕ್ಕೊಂದು ಪ್ರಪ್ರಥಮ ಕೊಡಲಿಯ ಏಟು. ನಿರೀಕ್ಷಿಸಿದ ಗುರಿ ಸಾಧಿತವಾಗಿರಲಿಕ್ಕಿಲ್ಲ. ಆದರೆ ಆ ಕ್ರಾಂತಿಯ ಹಿನ್ನಲೆಯಲ್ಲಿರುವ ಅಗಾಧ ಮೊತ್ತದ ಸ್ವಾಭಿಮಾನ ಶ್ರೇಷ್ಠವರ್ಗದ ವೀರಜನೋಚಿತವಾದುದು. ಚೆನ್ನಮ್ಮಾಜಿಯು ಕೊನೆಯ ಸೆರೆಮನೆಯ ದಿನಗಳಲ್ಲಿ “ನನ್ನ ಕಿತ್ತೂರು ನನ್ನ ಕಿತ್ತೂರು” ಎಂಬ ರಾಷ್ಟ್ರಾಭಿಮಾನದ ಬಿಸಿಯುಸಿರಿನಲ್ಲಿಯೇ ಅಸುನೀಗಿದಳು. ಈ ವೀರ ವನಿತೆಯ ರಾಷ್ಟ್ರೀಯ ಪ್ರೇಮದ ಆದರ್ಶ, ಶ್ರೇಷ್ಠವರ್ಗದ ಆದರ್ಶವೇ ಸರಿ. ಕಿತ್ತೂರು ಚೆನ್ನಮ್ಮಾಜಿಯು ಕ್ರಾಂತಿಕಹಳೆಯೂದಿದುದು 1824 ನೆಯ ಅಕ್ಟೋಬರ್ 23ರಂದು. ಪ್ರತಿವರ್ಷ ಅಕ್ಟೋಬರ್ 23ನೆಯ ದಿನಾಂಕವನ್ನು “ಮಹಿಳಾ ದಿನಾಚರಣೆ” ಯೆಂದು ರಾಜ್ಯಸರ್ಕಾರವು ಘೋಷಿಸಿ ಆಚರಿಸುತ್ತಿದೆ. ನಮ್ಮ ಪತ್ರಿಕೆಗೆ ನಮ್ಮ ಬಿನ್ನಹದ ಮೇರೆಗೆ ಶಿಕ್ಷಣ ತಜ್ಞರೂ, ದಕ್ಷ ಆಡಳಿತಗಾರರೂ, ಶಾಂತಚಿತ್ತರೂ ಎನಿಸಿರುವ ನಮ್ಮ ರಾಜ್ಯದ D. P. I. ರವರಾದ ಶ್ರೀ S. V. ಜೇವೂರ ಸಾಹೇಬರು ಈ ಲೇಖನವನ್ನು ಸಿದ್ಧಪಡಿಸಿ ಕೊಟ್ಟು ನಮ್ಮ ಓದುಗರಿಗೆ ಮಹೋಪಕಾರ ಮಾಡಿದ್ದಾರೆ.

ಸಂ.

ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಕಿತ್ತೂರಿನ ರಾಣಿ ಚೆನ್ನಮ್ಮಾಜಿ 1824ರಲ್ಲಿ ಪೀಠಿಕೆಯನ್ನು ಹಾಕಿದಳಷ್ಟೆ. ಆ ವರ್ಷಕ್ಕೆ ಸರಿಯಾಗಿ ನೂರು ವರ್ಷಗಳು ಕಳೆದ ನಂತರ 1924ರಲ್ಲಿ ಬೆಳಗಾವಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನವು ಏರ್ಪಟ್ಟದ್ದರಲ್ಲಿ ಯಾವುದಾದರೂ ಸ್ವಾಭಾವಿಕ ನ್ಯಾಯವಿತ್ತೆ? ಎಂಬ ಬಗೆಗೆ ನಮಗೆ ಕೆಲವು ವೇಳೆ ಆಶ್ಚರ್ಯವಾಗುವುದು. ದೇಶ ಭಕ್ತರ, ಜ್ಞಾನಿಗಳ ಹಾಗೂ ಕಾರ್ಯಶೀಲರ ಮಹದುದ್ದೇಶಗಳನ್ನು ಗೌರವಿಸುವುದಕ್ಕೋಸ್ಕರವೇ ಎಂಬಂತೆ ಅನೇಕ ವೇಳೆ ಸ್ಮರಣೀಯ ಹಾಗೂ ಗಮನಾರ್ಹ ಸುಸಂಧಿಗಳು ಸಂಭವಿಸುವುವು. ಪ್ರಸ್ತುತದಲ್ಲಿ ಇದು ಒಂದು ನಿದರ್ಶನ. ನೇತಾರರು ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನವನ್ನು ನಡೆಸಬೇಕೆಂದು ತೀರ್ಮಾನಿಸಿದಾಗ, ಕರ್ನಾಟಕ ಕೇಸರಿ ದಿವಂಗತ ಶ್ರೀ ಗಂಗಾಧರ ರಾವ್ ದೇಶಪಾಂಡೆಯವರಾಗಲಿ ಅವರ ಸಹೋದ್ಯೋಗಿಗಳಾಗಲಿ, ಅಧಿವೇಶನದ ಕಾಲ ಹಾಗೂ ಸ್ಥಳ ನಿರ್ಣಯಗಳಲ್ಲಿ ಅಂತಹ ವಿಷಯಗಳ ಬಗೆಗೆ ಯೋಚಿಸಿರಲೇಬೇಕು. ರಾಣಿ ಚೆನ್ನಮ್ಮನ ಜನ್ಮಸ್ಥಳವು ಬೆಳಗಾವಿಯಾಚೆ ಕೇವಲ ಐದು ಮೈಲಿಗಳ ದೂರದಲ್ಲಿದೆ. ಆಕೆಯ ನಾಡಿನಲ್ಲಿ ಏರ್ಪಡಿಸಿದ್ದ ಅಖಿಲಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಲು ಪುಣೆ–ಬೆಂಗಳೂರು ಮೇಲ್ ರೈಲು ಗಾಡಿಯಿಂದ ಮಹಾತ್ಮಾ ಗಾಧಿಯವರು ಇಳಿದಾಗ, ಅವರನ್ನು ಸ್ವಾಗತಿಸಲು ನೆರೆದಿದ್ದ ಜನರಲ್ಲಿ ಮಹಿಳೆಯರೇ ಅಧಿಕಸಂಖ್ಯೆಯಲ್ಲಿದ್ದುದು ಸಹಜವೇ ಸರಿ.

ನಾನು ಆರು ವರ್ಷ ಬಾಲಕನಿದ್ದಾಗ ನನ್ನ ತಂದೆ ಹಾಗೂ ಅವರ ಮಿತ್ರರೊಡನೆ 1924ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ



ದಲ್ಲಿ ಹಾಜರಿದ್ದೆನು. ನಾವು ನಮ್ಮ ತವರೂರಾದ ಬೈಲಹೊಂಗಲದಿಂದ ಅಲ್ಲಿಗೆ ಹೋಗಲು ಕೇವಲ 27 ಮೈಲಿ ದೂರವನ್ನು ಎತ್ತಿನ ಬಂಡಿಯಲ್ಲಿ ರಾತ್ರಿಯಲ್ಲಿ ಪ್ರಯಾಣ ಮಾಡಬೇಕಾಯಿತು. ಬಹಳ ಮಸುಕಾದ ನನ್ನ ನೆನಪು ಆ ಹಿಂದಿನ ಕಾಲಕ್ಕೆ ಹೋಗಿ, ಅಂದಿನ ಕೆಲವು ಸಂಗತಿಗಳನ್ನು ನನ್ನ ಮನಸ್ಸಿಗೆ ತರುತ್ತವೆ. ಅವು ಯಾವುವೆಂದರೆ: ಅಂದಿನ ಅಗಾಧ ಜನಸ್ತೋಮ, ಪಂಪಾ ವಿರೂಪಾಕ್ಷ ದೇವಾಲಯವನ್ನು ಹೋಲುತ್ತಿದ್ದ ಗೋಪುರದಿಂದ ಶೋಭಿಸುತ್ತಿದ್ದ ವಿಸ್ತಾರ ಮಂಟಪ, ಮಹಾತ್ಮಾ ಗಾಂಧಿಯವರಿಗೆ ಕರುಳು ರೋಗಕ್ಕಾಗಿ ನಡೆದ ಶಸ್ತ್ರ ಚಿಕಿತ್ಸೆಯನ್ನೊಳಗೊಂಡ ವಸ್ತು ಪ್ರದರ್ಶನ, ಆಲಿ ಸಹೋದರರ ಗುಡಾರಗಳು, ವಿಜಯನಗರ ಪ್ರಿಯನಾಮಾಂಕಿತವನ್ನು ಹೊಂದಿದ್ದ ನೀರಿನ ತೊಟ್ಟಿಗಳಿದ್ದ ಕಾಂಗ್ರೆಸ್ ಜಲಾಶಯ (ಪಂಪಾಸರೋವರ) ಹತ್ತಿರವಿದ್ದ ಗುಡ್ಡ, ಸಂದರ್ಭಕ್ಕಾಗಿ ಅಧಿವೇಶನದ ಸ್ಥಳಗಳಲ್ಲಿ ಅನುಗೊಳಿಸಲ್ಪಟ್ಟಿದ್ದ ರೈಲುನಿಲ್ದಾಣ, ಮಹಾತ್ಮಾಗಾಂಧಿಯವರ ಚಿತ್ರವನ್ನೊಳಗೊಂಡಿದ್ದ ಎನ್ಯಾಮೆಲ್ ಬಿಲ್ಲೆ ಮತ್ತು ನನ್ನ ತಂದೆಯವರು ನನಗೆ ಕೊಂಡುಕೊಟ್ಟಿದ್ದ ಗಾಂಧಿ ಟೋಪಿ.

ರಾಣಿ ಚೆನ್ನಮ್ಮನ ನಾಡಿನಲ್ಲಿ ಹುಟ್ಟಿದವನಾಗಿ, ಕಿತ್ತೂರು ಹಾಗೂ ಅದರ ಸುತ್ತಮುತ್ತಲಿನಲ್ಲಿ ಕೆಂಡದಂತಹ ಮನೋ ಉದ್ವೇಗ ಪ್ರಜ್ವಲಿಸುತ್ತಿದ್ದುದನ್ನು ನಾನು ಅನೇಕವೇಳೆ ಅನುಭವಿಸಿರುತ್ತೇನೆ. ಈ ಪ್ರದೇಶ, ಅದರಲ್ಲೂ ಈ ಜಿಲ್ಲೆಯಲ್ಲಿ ಸ್ವಾಭಾವಿಕವಾಗಿ ಕಾಂಗ್ರೆಸ್ ಅನುಯಾಯಿಗಳು ಅಧಿಕ ಸಂಖ್ಯೆಯಲ್ಲಿದ್ದರು. ಇಲ್ಲಿ ಪೋಲಿಸರಿಂದ ಗುಂಡು ಹಾರಿಸುವುದು ರಾಜಕೀಯ ಬಂಧನ ಹಾಗೂ ಸೆರೆಗೆ ಹಾಕುವ ಪ್ರಸಂಗಗಳು ಅಧಿಕ ಸಂಖ್ಯೆಯಲ್ಲಿ ನಡೆದವು. ಇಷ್ಟಲ್ಲದೆ ನಿಜವಾಗಿಯೂ ಅನ್ವರ್ಥವಾದ “ಭಾರತದಿಂದ ತೊಲಗಿರಿ” ಚಳವಳಿಯ ಸಂದರ್ಭದಲ್ಲಿ ಈ ಜಿಲ್ಲೆಯಲ್ಲಿ ಬೆಂಕಿ ಹಚ್ಚುವುದು, ಸುಡುವುದು, ಇವೇ ಮುಂತಾದ ಘೋರ ಕೃತ್ಯಗಳು ಅಧಿಕ ಸಂಖ್ಯೆಯಲ್ಲಿ ಜರುಗಿದವು. ಆ ಸಮಯದಲ್ಲಿ ನ್ಯಾಯವಾದ ಕ್ರೋಧವು ಜನ್ಮತಾಳಿ ಅಂತಹ ಘೋರ ಕೃತ್ಯಗಳು ಅವಶ್ಯವಾಗಿ ನಡೆಯಬೇಕಾಗಿದ್ದವು, ಆದರೆ ಇವೆಲ್ಲಕ್ಕೂ ಕಾರಣಗಳು ಇಲ್ಲದಿರಲಿಲ್ಲ. ಹೊಳೆಯುವ ಮುಖ ನೇತ್ರಗಳಿಂದ ಕೂಡಿದ ಜನರು ಪ್ರಶಾಂತರಾಗಿ ಕಂಡು ಬಂದಾಗ್ಯೂ, ನ್ಯಾಯವು ಗಂಡಾಂತರಕ್ಕೆ ಸಿಕ್ಕಿದಾಗ ಅವರಿಗೆ ಇರಿದಂತಾಗುತ್ತಿತ್ತು. ಅವರ ವೈಯಕ್ತಿಕ ಹಿತಗಳನ್ನು ಗಾಳಿಗೆ ತೂರಿ ಒಂದು ಉದಾತ್ತ ಧ್ಯೇಯಕ್ಕಾಗಿ ಪ್ರಾಣಾರ್ಪಣೆ ಮಾಡಲು ಅವರು ಹಿಂಜರಿಯುತ್ತಿರಲಿಲ್ಲ.

ರಾಣಿ ಚೆನ್ನಮ್ಮನಿಗೆ ಕಿತ್ತೂರಿನ ಸ್ವತಂತ್ರಕ್ಕೆ ಸಂಚಕಾರ ಒದಗಿದೆಯೆಂದು ತಿಳಿದಾಗ ಆಕೆಯ ಮುಂದೆ ಈ ಪ್ರಶ್ನೆ ಉದ್ಭವಿಸಿತು: ತಾನು ಗೌರವಯುತ ಷರತ್ತುಗಳ ಮೇಲೆ ಶರಣಾಗತಳಾಗಿ ಒಪ್ಪಂದಕ್ಕೆ ಬರಬೇಕೆ? ಅಥವಾ ದೇಶಭಕ್ತಳಾಗಿ ತನ್ನ ಸ್ಥಾನಮಾನಗಳನ್ನು ಸಂರಕ್ಷಿಸಿ ಕೊಳ್ಳಬೇಕೆ ? ಆಕೆಗೂ ಗವರ್ನರನಿಗೂ ನಡೆದ ಪತ್ರವ್ಯವಹಾರವನ್ನು ವಿಚಾರ ಮಾಡಿದರೆ ಆಕೆಯ ಸದುದ್ದೇಶಗಳೆಲ್ಲವೂ ಕಡೆಗಣಿಸಲ್ಪಟ್ಟು ಆಕೆ ಹಾಗೂ ಆಕೆಯ ಪ್ರಜೆಗಳ ಮೇಲೆ ಅನಪೇಕ್ಷಣೀಯವಾದ ಪ್ರಭುತ್ವವು ಹೇರಲ್ಪಟ್ಟಿತೆಂಬುದು ವ್ಯಕ್ತವಾಗುವುದು· ಬ್ರಿಟಿಷರಿಂದ ಸಂಗತಿಗಳನ್ನು ಸುಗಮಗೊಳಿಸುವ ಬಗ್ಗೆ ಪ್ರತ್ಯುತ್ತರಗಳು ಬರಲಿಲ್ಲ. ಬ್ರಿಟಿಷ್ ಬಂದಿಗಳನ್ನು ಅವರ ಮಕ್ಕಳೊಡನೆ ಬಿಡುಗಡೆ ಮಾಡುವಂತಹ ಸದ್ಉದ್ದೇಶಪೂರಿತ ಪ್ರಯತ್ನಗಳಿಗೆ ಶ್ಲಾಘನೆ ದೊರೆಯಲಿಲ್ಲ. ಅರಮನೆಯ ಒಳಸಂಚುಗಳು ಹೆಚ್ಚಿದಂತೆ ಕಂಡು ಬಂದವು. ತೀವ್ರವಾದ ಕಠಿನ ಕ್ರಮಗಳಿಗೆ ಮಾರು ಹೋದ ಆಕೆಯ ಪ್ರಜೆಗಳು ಹತೋಟಿ ಮೀರಿದರು. ಯಾವುದೋ ಕುಂಟ ನೆವಕ್ಕಾಗಿ ನಾಡು ಹಾಗೂ ಅದರ ಸಂಪತ್ತನ್ನು ವಶಪಡಿಸಿಕೊಳ್ಳಲು ಉದ್ದೇಶಿಸಿದ ಬ್ರಿಟಿಷರಿಗೆ ಬಲವಾದ ಪೆಟ್ಟನ್ನು ಕೊಡಬೇಕೆಂಬ ಭಾವನೆಯನ್ನು ಜನರು ಇದುವರೆಗೂ ತಡೆದಿದ್ದರೂ ಮುಂದೆ ತಡೆಯಲಾರದೆ ಹೋದರು. ಬೆಂಕಿ ಹೊತ್ತಿಸಲ್ಪಟ್ಟಿತು ವ್ಯಾಪಿಸಿದ ಕಿಚ್ಚನ್ನು ಯಾರು ತಾನೆ ತಡೆದಾರು ?

## ಕರ್ನಾಟಕ ಜೋಹರ್

ಇಡೀ ದಕ್ಷಿಣ ಭಾರತದಲ್ಲೇ ಅಪಾರ ಸಾಧನ ಸಂಪತ್ತುಗಳನ್ನು ಗಳಿಸಿ, ಬ್ರಿಟಿಷರು ಕಿತ್ತೂರಿನ

ಕೋಟೆಯ ಮೇಲೆ ದಾಳಿ ಮಾಡಲು ಉದ್ವೇಗದಿಂದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಅದಾಗ್ಯೂ ರಾಣಿ ಚೆನ್ನಮ್ಮ, ಪ್ರಜೆಗಳು, ಸುತ್ತ ಮುತ್ತಿನ ರಾಜರು, ಹಾಗೂ ಕೊಲ್ಲಾಪುರದ ಮಹಾರಾಜ, ಇವರನ್ನು ನಂಬಿ ತನ್ನ ರಾಜ್ಯವನ್ನು ರಕ್ಷಿಸಿಕೊಳ್ಳಬಹುದೆಂದು ಕ್ಷಣಕಾಲ ಯೋಚಿಸಿದಳು. ಆಕೆಯ ಹೃದಯಾಂತರಾಳದಲ್ಲಿ ಆಕೆಯ ಪ್ರಜೆಗಳ ಸ್ಥಿರ ಸಂಕಲ್ಪ ಹಾಗೂ ಬ್ರಿಟಿಷರೊಡನೆ ಅವರು ದಿಟ್ಟತನದಿಂದ ಹೋರಾಡುವ ಬಗೆಗೆ ಆಕೆಗೆಪೂರ್ಣ ವಿಶ್ವಾಸವಿತ್ತು. ಇದನ್ನು ಅನುಲಕ್ಷಿಸಿ, ಎಲ್ಲಾ ಪ್ರಯತ್ನಗಳೂ ಸಿದ್ದತೆಗಳೂ ಅಳವಡಿಸಲ್ಪಟ್ಟದ್ಧವು.

ಕೆಲವರು ಕೇಳಬಹುದು: "ಇಡೀ ದೇಶದಲ್ಲಿ, ವಿಶೇಷತಃ ದಕ್ಷಿಣ ಭಾರತದಲ್ಲಿ ಬ್ರಿಟಿಷರ ಪರಮಾಧಿಕಾರ ಹೆಚ್ಚುತ್ತಿದ್ದಾಗ ರಾಣಿ ಚೆನ್ನಮ್ಮನು ಅವರ ಮುಂದೆ ನಿಲ್ಲುವುದಾದರೂ ಹೇಗೆ? ಬ್ರಿಟಿಷರೊಡನೆ ಯುದ್ಧ ಹೂಡುವುದೆಂಬ ಯೋಚನೆಯನ್ನು ಸಹ ಮಾಡುವುದು ಹುಚ್ಚುತನವಲ್ಲವೇ?" ಎಂದು. ಆದರೆ ಏನೇ ಆಗಲಿ ನಾವು ಒಂದಂಶವನ್ನು ಮನಸ್ಸಿನಲ್ಲಿಡಬೇಕು: ಎರಡನೆಯ ಯುದ್ಧದಲ್ಲಿ ಆಕೆಯು ಜಯಗಳಿಸಿದ್ದರೂ, ಬ್ರಿಟಿಷರ ಅಗಾಧ ಸೈನ್ಯ ಹಾಗೂ ಅವರ ಸೈನಿಕ ಮತ್ತು ಇತರ ತಂತ್ರಗಳನ್ನು ಅನುಲಕ್ಷಿಸಿದರೆ, ಆಕೆಯ ಪ್ರಜೆಗಳಿಗೆ ಅಸಾಧಾರಣ ಧೈರ್ಯ ಹಾಗೂ ಸ್ಥಿರ ಸಂಕಲ್ಪಗಳಿದ್ದರೂ, ಆಕೆಗೆ ಬ್ರಿಟಿಷರ ಮುಂದೆ ನಿಲ್ಲಲು ಬಹುಶಃ ಸಾಧ್ಯವಾಗುತ್ತಿರಲಿಲ್ಲ.

ಇಡೀ ಸನ್ನಿವೇಶವನ್ನು ವಿಶ್ಲೇಷಿಸಿದರೆ, ನಾವು ಹೀಗೆ ತೀರ್ಮಾನಿಸಬಹುದು: ನ್ಯಾಯಕ್ಕೆ ಲಕ್ಷ್ಯ ದೊರೆಯದಿದ್ದಾಗ ಹಾಗೂ ಜನರು ಆತ್ಮಗೌರವವುಳ್ಳವರಾಗಿದ್ದಾಗ, ಒಂದು ಮಹತ್ವಪೂರಿತ ಧ್ಯೇಯಕ್ಕಾಗಿ ಹೋರಾಡಿ ಅಸುನೀಗುವುದೊಂದೆ ಉಳಿದ ಮಾರ್ಗ. ಶತ್ರುಗಳು ಬಹುಸಂಖ್ಯಾತರಾಗಿದ್ದು ತಮ್ಮನ್ನು ಪರಾಭವಗೊಳಿಸುವುದು ಶತಸ್ಸಿದ್ಧವಾದಾಗ, ರಜಪೂತರು ಹಳದಿವಸ್ತ್ರಗಳನ್ನು ಧರಿಸಿ ಕೋಟೆಯಿಂದ ಹೊರಗೆ ಬಂದು ಹೋರಾಟ ನಡೆಸಿದ್ದನ್ನು ನಾವು ಕೇಳಿದ್ದೇವೆ. ಸಂಖ್ಯಾಬಲವುಳ್ಳ ನೀತಿನಿಷ್ಠೆಗಳಿಲ್ಲದ ಶತ್ರುವಿನ ದಾಳಿಗೆ ಜೋಹರ್ ಮತ್ತು ಸತಿಹೊಗುವಿಕೆಗಳೇ ಯೋಗ್ಯ ಪ್ರತ್ಯುತ್ತರ. ಇವುಗಳ ಮೂಲಕ ಯಾವ ಅನ್ಯಾಯ ಭೌತಬಲವಾಗಲಿ ಮಾನವಶಕ್ತಿಯಾಗಲಿ ತಮ್ಮ ಆತ್ಮಶಕ್ತಿಯನ್ನು ಬೆದರಿಸಲಾರದೆಂಬುದನ್ನು ರಾಜಪುತ್ರರು ಎತ್ತಿ ಹಿಡಿದರು. ಬಹು ಮಟ್ಟಿಗೆ ಅದರಂತೆಯೇ ರಾಣಿ ಚೆನ್ನಮ್ಮನು ಕೋಟೆಯ ಆಳವೇರಿಯ ಮೇಲೆ ನಿಂತು ಸಂಖ್ಯೆ ಹಾಗೂ ಸಾಧನ ಸಾಮಗ್ರಿಗಳೆರಡರಲ್ಲೂ ದುಸ್ಸಹರಾದ ಶತ್ರುಗಳ ವಿರುದ್ಧವಾಗಿ ತನ್ನ ಜನರನ್ನು ಹುರಿದುಂಬಿಸಿದಳು, ಮತ್ತು ಧ್ಯೇಯದ ಮಹತ್ಸಾಧನೆಯಲ್ಲಿ ಹೆಚ್ಚಳಪಡೆದಳು. ಆಕೆಯು ಒಂದು ಘನ ಉದ್ದೇಶಕ್ಕಾಗಿ ತನ್ನನ್ನೂ ತನ್ನ ಪ್ರಜೆಗಳನ್ನೂ ಅರ್ಪಣೆ ಮಾಡಲು ಸಿದ್ಧವಾಗಿದ್ದಳು. ಈ ಮೂಲಕವಾಗಿ ಭೌತಶಕ್ತಿಯೊಂದೇ ಒಂದು ಮಹಾನ್ ತತ್ತ್ವವನ್ನು ಅಡಗಿಸಲಾರದೆಂಬುದನ್ನು ಆಕೆ ವಿಶ್ವಕ್ಕೆ ತೋರಿಸಿಕೊಟ್ಟಳು. ಆಹುತಿಯಾದವನ ಮಹೋನ್ನತ ಧ್ಯೇಯಕ್ಕೆ ಎದುರಾಗಿ ಅಸುರೀಶಕ್ತಿಯು ವಿಜಯಿಯೆನಿಸಲಾರದೆಂಬುದನ್ನು ತೋರಿಸಲು ಇದು ಇನ್ನೂ ಒಂದು ನಿದರ್ಶನ. ಇಂತಹ ತತ್ವ ವಿಚಾರಧಾರೆಯು ಇಂದಿಗೂ ನಮ್ಮ ಪರಂಪರೆಯಲ್ಲಿ ಪ್ರವಹಿಸುತ್ತಿದೆ. ರಾಣಿ ಚೆನ್ನಮ್ಮ ಹಾಗೂ ಆಕೆಯ ಉದಾತ್ತ ನೀತಿ ನಿಷ್ಠೆಯುಳ್ಳ ಪ್ರಜೆಗಳ ಆದರ್ಶಕ್ಕೆ ಸಾಟಿಯಾದ ರಾಜಕೀಯ ಆತ್ಮತ್ಯಾಗದ ಮತ್ತೊಂದು ಉತ್ತಮ ಆದರ್ಶ ವಿಲ್ಲವೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

## ಸ್ಥಳೀಯ ಪರಂಪರೆ

ಕರ್ನಾಟಕದ ಜನತೆಯಲ್ಲಿ ಸುಪ್ತವಾಗಿರುವ ಒಂದು ಮಹಾನ್ ಶಕ್ತಿಯ ದೃಷ್ಟಾಂತವನ್ನು ಇಲ್ಲಿ ಕಾಣಬಹುದು. ಕರ್ನಾಟಕ ಮಹಿಳಾ ಇತಿಹಾಸದಲ್ಲಿ ಸಾಹಿತ್ಯ, ಲಲಿತಕಲೆ, ಆಡಳಿತ ಮುಂತಾದುವುಗಳಲ್ಲಿ ಔನ್ನತ್ಯ ಪಡೆದಿರುವ ನಿದರ್ಶನಗಳಿಗೇನೂ ಕೊರತೆಯಿಲ್ಲ. ಚಿತ್ರದುರ್ಗದ ಓಬವ್ವೆಯಿಂದ ಹಿಡಿದು ಬೆಳವಾಡಿ ಮಲ್ಲಮನವರೆಗೆ ಎಲ್ಲಾ ದರ್ಜೆಗಳ ಮಹಿಳೆಯರೂ ತಮ್ಮ ಸ್ಥಾನಮಾನಗಳನ್ನು ಲಕ್ಷಿಸದೆ ಅಸಾಧಾರಣ ಸಂದರ್ಭಗಳಲ್ಲಿ ತಾವು ಶತ್ರುಗಳಿಗೆ ಬಲವಾದ ಪೆಟ್ಟನ್ನು ಕೊಡಬಲ್ಲೆವೆಂದು ತೋರಿಸಿರುವರು. ಆದರೆ ಕಿತ್ತೂರು ರಾಣಿಯ ಜೀವನಾಂತ್ಯದಲ್ಲಿ ಕಂಡು ಬರುವ ಅಸಸ್ಪೃಶವಾಗಿ ಶೋಭಿಸುವ ಸಾಹಸ ಪೂರಿತ ಆದರ್ಶವನ್ನು ಮಹಿಳಾ ಹೋರಾಟಗಾರರ ಇಡೀ ಇತಿಹಾಸದಲ್ಲೇ ನಾವು ಕಾಣಲಾರೆವು.

## ಸ್ವಾತಂತ್ರ್ಯ ಹೋರಾಟದ ಮೂಲ

ಮುಂದೆ ಸರ್ವದಾಹಕಾಗ್ನಿಯ ರೂಪವನ್ನು ತಾಳುವ ಸ್ವಾತಂತ್ರ್ಯ ಹೋರಾಟದ ಪವಿತ್ರ ಪಾವಕನನ್ನು ಹೊತ್ತಿಸುವ ಕೆಲಸವು ಕಿತ್ತೂರು ರಾಣಿಯ ಪಾಲಿಗೆ ಬರುತ್ತದೆಂದು ನಾವು ಯೋಚಿಸಿರಲಿಲ್ಲ. ಭಾರತದಲ್ಲಿ 1824 ರ ನಂತರ ಸ್ವಾತಂತ್ರ್ಯ ಹೋರಾಟ ರಂಗದಲ್ಲಿ ನಡೆಯುವ ಘಟನೆಗಳ ಹಿನ್ನೆಲೆಯಲ್ಲಿ ರಾಣಿ ಚೆನ್ನಮ್ಮ ಅಧ್ಯಕ್ಷಪೀಠವನ್ನು ಅಲಂಕರಿಸಿದ್ದ ರುದ್ರ ದೇವತೆಯಂತೆ ಕಾಣುತ್ತಾಳೆ. ಆಕೆಯ ಕೃಪಾಶ್ರಯದಲ್ಲಿ ಸ್ವಾತಂತ್ರ್ಯದ ಮಹಾನ್ ಹೋರಾಟವು ಆರಂಭಿಸಿತು.

ಎಲ್ಲಾ ಮಾನವ ವಿಧ್ವಂಸ ಕಾರ್ಯಗಳನ್ನು ಪ್ರತಿಭಟಿಸಲು ತಲೆ ಎತ್ತಿಕೊಂಡಿದೆಯೋ ಎಂಬಂತಿರುವ ಎತ್ತರವಾದ ಗುಡ್ಡವನ್ನು ಬಿಟ್ಟರೆ ಕಿತ್ತೂರು ಪುಣೆ—ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಆಯಕಟ್ಟಿನ ಸ್ಥಳದಲ್ಲಿದ್ದಾಗ್ಯೂ ಅದು ಯಾರ ಗಮನವನ್ನೂ ಒಮ್ಮೆಲೆ ಸೆಳೆದಿಲ್ಲ. ಅಭೇದ್ಯ ಗೋಡೆ ಹಾಗೂ ಆಳವಾದ ಅಗಳು (ಕಂದಕ)ಗಳಿಂದ ಕೂಡಿದ (ಅದರ ಪರಿಸರದಲ್ಲೇ ಒಂದು ಇತಿಹಾಸ ನಡೆದಾಗ್ಯೂ) ಕಿತ್ತೂರಿನ ಕೋಟೆ ಅಷ್ಟಾಗಿ ಎದ್ದು ಕಾಣುವಂತಿಲ್ಲ. ತಮ್ಮ ಅದಮ್ಯ ಧೈರ್ಯ ಹಾಗು ಮಹೋನ್ನತ ಆದರ್ಶ ಜೀವನಗಳನ್ನು ಅವ್ಯಕ್ತವಾಗಿಟ್ಟುಕೊಂಡಿರುವ ಕಿತ್ತೂರಿನ ನಿವಾಸಿಗಳ ವ್ಯಕ್ತಿವಿನಯಭಾವವನ್ನು ಅಲ್ಲಿಯ ಕೋಟೆಯು ಪ್ರಾಯಶಃ ಸೂಚಿಸುತ್ತದೆ. ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಉತ್ಸಾಹವುಳ್ಳ ವಿದ್ಯಾರ್ಥಿಯು ಪ್ರಥಮಥಃ ಈ ಪವಿತ್ರ ಮಂದಿರಕ್ಕೆ ತಲೆಬಾಗಬೇಕು.

ರಾಣಿ ಚೆನ್ನಮನ ನಿಜವಾದ ಮಹತ್ವ ಹಾಗೂ ಆಕೆಯ ಮಹಾನ್ ತ್ಯಾಗಗಳನ್ನು ಗಮನಿಸಿ, ಮೈಸೂರುರಾಜ್ಯದ ಮಾಜಿ ಶಿಕ್ಷಣ ಸಚಿವರಾಗಿದ್ದ ದಿ|| ಶ್ರೀ ಎಸ್. ಆರ್. ಕಂಠಿಯವರು ಕಿತ್ತೂರನ್ನು ಜೀರ್ಣೋದ್ಧಾರಗೊಳಿಸಬೇಕೆಂದು ಯೋಚಿಸಿದರು. ಎಲೆ, ಮುಳ್ಳಿನ ಹೊದರು ಹಾಗೂ ಮರಗಳು ಮಿತಿಮೀರಿ ಬೆಳೆದಿದ್ದರಿಂದ ಕಿತ್ತೂರಿನ ಕೋಟೆಯೊಳಗಿನ ಅರಮನೆಯ ಪ್ರದೇಶಕ್ಕೆ ಹೋಗಲು ಮಾನ್ಯ ಶಿಕ್ಷಣ ಮಂತ್ರಿಗಳಿಗೆ ಕೆಲವು ವರ್ಷಗಳ ಹಿಂದೆ ಕಷ್ಟವಾಯಿತು ಎಂದು ಹೇಳಿದ್ದನ್ನೂ ನಾನು ಕೇಳಿದ್ದೇನೆ. ಈಗ ಈ ಅಡಚಣೆಗಳೆಲ್ಲವು ತೆಗೆದು ಹಾಕಲ್ಪಟ್ಟು, ಈ ಸ್ಥಳವು ಒಂದು ಪ್ರವಾಸಿ ಕೇಂದ್ರವಾಗಿದೆ.

ಕಿತ್ತೂರು ರಾಣಿ ಚೆನ್ನಮ್ಮ ಸ್ಮಾರಕ ಸಮಿತಿಯು 25 ಲಕ್ಷ ರೂಪಾಯಿಗಳ ನಿಧಿಯನ್ನು ಎತ್ತುವ ಒಂದು ಗುರಿಯನ್ನು ಪ್ರಥಮತಃ ಹೊಂದಿತ್ತು. ಈ ನಿಧಿಸಂಗ್ರಹದ ಉದ್ದೇಶ ಅರಮನೆಯ ಪ್ರದೇಶದಲ್ಲಿ ಒಂದು ವಸ್ತು ಸಂಗ್ರಹಾಲಯವನ್ನು ಕಟ್ಟಿಸುವುದಕ್ಕಾಗಿ ಮತ್ತು ಬೈಲಹೊಂಗಲದಲ್ಲಿ ರಾಣಿ ಚೆನ್ನಮ್ಮನ ಸಮಾಧಿಯ ಮೇಲೆ ಒಂದು ಕಟ್ಟಡವನ್ನು ಏರ್ಪಡಿಸುವುದಕ್ಕಾಗಿ ಹಾಗೂ ಚೆನ್ನಮ್ಮನು ಬಿಟ್ಟು ಹೋಗಿರುವ ಶಕ್ತಿ (ಸತ್ವ) ವರ್ಧನಕ್ಕೆ ಸಹಾಯಕವಾದ ಇತರ ಕೆಲಸಗಳನ್ನು ಕೈಕೊಳ್ಳುವುದಕ್ಕಾಗಿ. ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪನವರು 1966ನೇ ಅಕ್ಟೋಬರ್ 2 ರಂದು ಸಮಾಧಿಯ ಮೇಲ್ಚಪ್ಪರದ ಆಸ್ತಿಭಾರ ಶಿಲೆಯನ್ನು ಹಾಕುತ್ತಾ, ಹೀಗೆ ನುಡಿದಿರುವರು. "ಚೆನ್ನಮ್ಮನ ಉದಾತ್ತ ತ್ಯಾಗಕ್ಕಾಗಿ ಕೃತಜ್ಞರಾಗಿರಬೇಕಾದುದು ನಮ್ಮೆಲ್ಲರ ಕರ್ತವ್ಯ" ಈಗ ಪ್ರವಾಸಿಗಳಿಗಾಗಿ ಒಂದು ವಿಶ್ರಾಂತಿ ಗೃಹ ಹಾಗೂ ಕೋಟೆಯಲ್ಲಿ ಒಂದು ಸುಯೋಜಿತ ತೋಟ, ಇವುಗಳು ರೂಪಗೊಳ್ಳುತ್ತಿವೆ. ಉದ್ಯಾನ, ತೋಟ, ವ್ಯಾಯಾಮ ಶಾಲೆ, ಈಜುವ ಕೊಳ, ವಸ್ತು ಸಂಗ್ರಹಾಲಯ, ಯೋಗ್ಯ ಪ್ರತಿಮೆ, ಕಲಾವೇದಿಕೆ, ಕ್ರೀಡಾರಂಗ, ಸನ್ - ಎಟ್ - ಲೂಮಿಯರ್ ಜೋಡಣೆ, ಮುಂತಾದವುಗಳ ವಿಚಾರ ಭರದಿಂದ ನಡೆದಿದೆ.

ಹೆಣ್ಣು ಮಕ್ಕಳಲ್ಲಿರುವ ಸಹಜ ಶಕ್ತಿಗಳನ್ನು ಪೂರ್ಣವಾಗಿ ಬೆಳಕಿಗೆ ತರಲು ಅನುಕೂಲಿಸುವಂತೆ ಅವರಿಗಾಗಿಯೇ ಒಂದು ಸೈನಿಕಶಾಲಾ ಸಂಸ್ಥೆಯನ್ನು ಕಿತ್ತೂರಿನಲ್ಲಿ ಸ್ಥಾಪಿಸಲಾಗಿದೆ.

ಪ್ರಪ್ರಥಮವಾಗಿ ಬ್ರಿಟಿಷರನ್ನು ಪ್ರತಿಭಟಿಸಿ, ಭಾರತದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಅಗ್ರಗಾಮಿನಿಯಾದ ಕರ್ನಾಟಕದ ಪ್ರಖ್ಯಾತ ರಾಣಿಯ ನೆನಪಿನಲ್ಲಿ ಪ್ರತಿ ವರ್ಷವೂ ಅಕ್ಟೋಬರ್ 23 ರಂದು "ಮಹಿಳಾ ದಿನ" ವಾಗಿ ಇಡೀ ಮೈಸೂರು ರಾಜ್ಯದಲ್ಲೆಲ್ಲಾ ಆಚರಿಸಲಾಗುತ್ತಿದೆ. ರಾಣಿ ಚೆನ್ನಮ್ಮನು ಮುಂದಿನ ಎಲ್ಲಾ ಸ್ವಾತಂತ್ರ್ಯ ಹೋರಾಟಗಾರರಿಗೂ ಶಕ್ತಿಯನ್ನು ಕೊಡುವುದರ ಮೂಲಕ ಶಕ್ತಿದೇವತೆ ಹಾಗೂ ಕರ್ನಾಟಕ ರಾಜ್ಯವಾದ ಮೈಸೂರಿನ ಚಾಮುಂಡಾಂಬಿಕೆ ಎನಿಸಿರುವಳು. ಆದುದರಿಂದ ನಮ್ಮ ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಕಿತ್ತೂರಿನ ಕೋಟೆಗೆ ಭೇಟಿಕೊಟ್ಟು ಅಲ್ಲಿಯ ಯೋಜಿತ ವಸ್ತು ಸಂಗ್ರಹಾಲಯಕ್ಕೆ ಅಸ್ತಿಭಾರ ಶಿಲೆಯನ್ನು ಹಾಕಿದುದು ಯುಕ್ತವೇ ಸರಿ. ಪ್ರಖ್ಯಾತ ಪುರುಷನೊಬ್ಬನ ಪ್ರಖ್ಯಾತ ಪುತ್ರಿಯಾಗಿ ಭಾರತದ ಪ್ರಥಮ ಮಹಿಳಾ ಪ್ರಧಾನಮಂತ್ರಿಗಳು ಕಿತ್ತೂರಿನ ಐತಿಹಾಸಿಕ ಕೋಟೆಯಲ್ಲಿ ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಹೋರಾಟಗಾರ್ತಿ ರಾಣಿ ಚೆನ್ನಮ್ಮನಿಗೆ ಗೌರವಸಲ್ಲಿಸಿರುವುದು ಮತ್ತಷ್ಟು ಔಚಿತ್ಯ ಪೂರ್ಣವಾಗಿದೆ.



## ಆಡುವ ಭಾಷೆ ೨೭೯೬

**ನವದೆಹಲಿ ಜುಲೈ 5**

ಈ ಜಗತ್ತಿನಲ್ಲಿ ಒಟ್ಟು 2796 ಭಾಷೆಗಳನ್ನು ಮಾತನಾಡಲಾಗುತ್ತಿದೆ. ಲ್ಯಾಟಿನ್, ಪ್ರಾಚೀನ ಗ್ರೀಕ್, ಹಿಟ್ಟೈಟ್ ಮತ್ತು ಅರಾಮೈಕ್ ನಂತಹ ಮೃತಭಾಷೆಗಳು ಈ ಸಂಖ್ಯೆಯಲ್ಲಿ ಸೇರಿಲ್ಲ.

ವಿಶ್ವದ 65 ದೇಶಗಳಲ್ಲಿ 13 ಅಧಿಕೃತ ಭಾಷೆಗಳಿರುವ ಹಿಂದಿ, ಚೀನಿ, ಉರ್ದು, ಇಂಗ್ಲೀಷ್, ಸ್ಪಾನಿಷ್, ರಷ್ಯನ್, ಜರ್ಮನ್, ಜಪಾನಿ, ಪೋರ್ಚ್‌ಗೀಸ್, ಫ್ರೆಂಚ್, ಅರೇಬಿಕ್, ಬಂಗಾಳಿ ಮತ್ತು ಇಟಾಲಿಯನ್ ಭಾಷೆಗಳನ್ನು ಮಾತನಾಡುವವರ ಸಂಖ್ಯೆ ಹೆಚ್ಚಾಗಿದೆ.

ಈ ಹದಿಮೂರು ಭಾಷೆಗಳ ಪೈಕಿ 6 ಭಾಷೆಗಳನ್ನು ಬಲ್ಲವರು ವಿಶ್ವದ ಶೇ 30 ರಷ್ಟು ಜನರೊಡನೆ ಮಾತನಾಡಬಲ್ಲರು. ಎಲ್ಲ ಹದಿಮೂರು ಭಾಷೆಗಳನ್ನು ಬಲ್ಲವರು ವಿಶ್ವದ ಮೂರನೇ ಎರಡರಷ್ಟು ಜನರೊಡನೆ ಸಂಭಾಷಣೆ ನಡೆಸಬಲ್ಲರು ಎಂದು ರಷ್ಯದ ಪತ್ರಿಕೆಯೊಂದು ತಿಳಿಸಿದೆ.

ಯು. ಎನ್. ಐ



# ಪುರಂದರದಾಸರು ಮತ್ತು ಸೂರದಾಸರು

ಲೇಖಕರು : **ಹ. ಸು. ಸುಬ್ಬರಾವ್**

ಆರ್ಷೇಯ ಕಾಲದಿಂದಲೂ ಮಹರ್ಷಿಗಳ ತಪೋಭೂಮಿಯಾಗಿದ್ದು, ಸನಾತನ ಪರಂಪರೆಯನ್ನು ಹೊಂದಿರುವ ಭರತಭೂಮಿ ತನ್ನ ಹಿರಿಮೆಯನ್ನು ಸ್ಥಿರವಾಗಿ ಉಳಿಸಿಕೊಂಡಿದೆ. ಇಲ್ಲಿ ತಪಸ್ಸಿನಿಂದ ಸಿದ್ಧಿ ಪಡೆದವರುಂಟು; ಜ್ಞಾನ ಗಂಗೆಯನ್ನು ಈಸಿ ಗೆದ್ದವರುಂಟು ಭಕ್ತಿ ಯಮುನೆಯಲ್ಲಿ ಮಿಂದು ಪುನೀತರಾಗಿ ಸಾಮಾನ್ಯ ಜನರನ್ನೂ ಪುನೀತರನ್ನಾಗಿ ಮಾಡಿದ ಪಾವನಮಾತೆ! ಇಲ್ಲಿನ ಭಕ್ತಿಯ ಹಿರಿಮೆಯನ್ನು ಹಾಡಿ ಹೊಗಳದವರಾರು? ಭಕ್ತಿಯ ತನ್ಮಯತೆಯಿಂದ, ಪರಮಾತ್ಮನ ಲೀಲಾವಿನೋದಗಳನ್ನು ಹಾಡಿದ ಕವಿವರರಿಗೆ, ದಾಸವರೇಣ್ಯರಿಗೆ ದೇಶ, ಕಾಲ, ವಿಭಾಗಗಳಾಗಲೀ ಜಾತಿ ವೈಷಮ್ಯಗಳಾಗಲೀ ಅಡ್ಡಿ ಬರಲಿಲ್ಲ. ವಿವಿಧ ಮಾರ್ಗಗಳಲ್ಲಿ ಬಳಸಿದರೂ ಕಡೆಗೆ ಸಮುದ್ರವನ್ನೆ ಸೇರುವ ನೀರಿನಂತೆ ಭಕ್ತಿಯಮಾರ್ಗ ಭಿನ್ನಭಿನ್ನವಾಗಿದ್ದರೂ ಅದರ ಗುರಿ ಒಂದೇ ಆಗಿದೆ. ಇತಿಹಾಸ ಪುರಾಣೋಪನಿಷತ್ತುಗಳಾದಿಯಾಗಿ ಭಗವದ್ಗೀತೆಯವರೆಗೆ ಹರಡಿ ಹಬ್ಬಿರುವ ಭಕ್ತಿಯ ತತ್ತ್ವ ಒಂದೇ ಆಗಿದೆ. ಈ ದೃಷ್ಟಿಯಿಂದ ಹಿಂದಿನ ಸಾಹಿತ್ಯ ಪ್ರಕಾರಗಳನ್ನು ನೋಡಿದಾಗ ಭಿನ್ನ ಭಿನ್ನ ಭಾಷೆಯಲ್ಲಿನ ಕವಿಗಳ ರಚನೆಯಲ್ಲಿ, ಅಂತರಗಂಗೆಯಂತೆ, ಏಕೋಭಾವ ಹರಡಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಅವರಲ್ಲಿ ಕನ್ನಡ ಭಾಷೆಯಲ್ಲಿನ ಪುರಂದರದಾಸರ ರಚನೆಗಳನ್ನೂ ಹಿಂದೀ ಭಾಷೆಯಲ್ಲಿನ ಸೂರದಾಸರ ರಚನೆಯನ್ನೂ ತುಲನೆ ಮಾಡಿನೋಡಬಹುದು. ಇವರೀರ್ವರ ಕೃತಿಗಳಲ್ಲಿ ತೀರ ಅನುವಾದ ವೆನ್ನುವಷ್ಟು ಭಾವನೆ ಬರುವಂತೆ ಹೋಲಿಕೆಗಳನ್ನು ಕಾಣಬಹುದಾಗಿದೆ.

ಸೂರದಾಸರ ಕಾಲ ಕ್ರಿ. ಶ. ೧೪೮೩ ರಿಂದ ೧೫೬೩ ರವರೆಗಿರಬಹುದೆಂದುಕೊಂಡರೆ, ಪುರಂದರದಾಸರ ಕಾಲ ಸುಮಾರು ೧೫೫೦. ಕೃಷ್ಣಭಕ್ತಿ ಪರಂಪರೆಯನ್ನು ಬೆಳಗಿದ ವಲ್ಲಭಾಚಾರ್ಯರು ಸೂರದಾಸರ ಗುರುಗಳು; ವ್ಯಾಸರಾಯರು ಪುರಂದರದಾಸರ ಗುರುಗಳು.

ಶೃಂಗಾರ ಮತ್ತು ವಾತ್ಸಲ್ಯಗಳನ್ನು ಗೀತೆಗಳಲ್ಲಿ ಹಾಡಿದ ಸೂರದಾಸರು, ಅದರ ಪ್ರತಿಯೊಂದು ಅಂಶವನ್ನೂ ಆಳವಾಗಿ ಅಳವಡಿಸಿಕೊಂಡಿದ್ದಾರೆ. ಬಾಲಸುಲಭವಾದ ಭಾವನೆಗಳು ಮತ್ತು ಬಾಲಲೀಲೆಗಳನ್ನು ಬಹುಚೆನ್ನಾಗಿ ಮೂಡಿಸಿದ್ದಾರೆ. ಉದಾಹರಣೆಯಾಗಿ ಈ ಕೆಲವು ಸಾಲುಗಳನ್ನು ನೋಡಬಹುದು.

(1) ಕಾಹೇಕೋ ಅರಿ ಕರತ ಮೇರೇಮೋಹನ್;
ಯೋತುಂ ಆಂಗನ್ ಲೋಟೀ? ಜೋಮಾಂಗಹು ಸೋ
ದೇಹು ಮನೋಹರ್‌ಯಹೈಬಾತ್ ತೇರೀಖೋಟೀ।

ಸೂರದಾಸಕೋ ಠಾಕುರ್ ಠಾಢೋಹಾಥ್‌ಲಕುಟಿಲಿಯೆ ಲೊಟೀ

(ನನ್ನಮುದ್ದುಮೋಹನ! ಏಕೆ ಹಠ ಮಾಡುವೆ? ನೀನೇನು ಕೇಳಿದರೂ ಕೊಡುವೆನು ಎಂಬ ನಿನ್ನ ಮಾತು ಸುಳ್ಳುಮ್ಮಾ)

(2) ಸೋಭಿತಕರ ನವನೀತ ಲಿಯೇ

ಘುಟರುನ್‌ಚಲತರೇನು- ತನ- ಮಂಡಿತ, ಮುಖದಧಿ ಲೇಪಕಿಯೇ॥

(ಕೈಯ್ಯಲ್ಲಿ ಬೆಣ್ಣೆ ಶೋಭಿಸುತ್ತಿದೆ; ಮುಖಕ್ಕೆಲ್ಲಾ ಮೊಸರು ಬಳಿದು ಅಂಬೆಗಾಲಿನಿಂದ ನಡೆಯುತ್ತಿದ್ದಾನೆ).

(3) ಮೈಯಾ ಕಬಹಿ ಬಢೈಗೀ ಚೋಟೀ?
ಕಿತಿಕಬಾರ್ ಮೋಹಿದೂಧ ಪಿಯತಭಯೀ ಯಹ
ಅಜಹು ಹೈ ಛೋಟೀ ತೂಜೋಕಹತಿ 'ಬಲ' ಕೀಬೇನೀ
ಜ್ಯೋ ಹ್ವೈಹೈಲಾಂಬೀ ಮೋಟೀ॥

(ಅಮ್ಮಾ ನನ್ನ ಕೂದಲು ಉದ್ದವಾಗಿ ಬೆಳೆಯುವುದೆಂದಿಗೆ? ಎಷ್ಟೊಂದು ಹಾಲು ಕುಡಿದರೂ ಇನ್ನೂ ಚಿಕ್ಕದಾಗಿಯೇ ಇದೆ, ಆದರೆ ಬಲರಾಮನದು ಎಷ್ಟು ಉದ್ದವಾಗಿದೆ!)

ಬಾಲಕರ ಸ್ಪರ್ಧಾಮನೋಭಾವವನ್ನು ಈ ಪದ್ಯವು ಬಿಂಬಿಸುವ ಸನ್ನಿವೇಶ ಬಹುಶಃ ಬೇರೆಲ್ಲಿಯೂ ಸಿಗದು. ಹೀಗೆ ಮಕ್ಕಳು ಆದರಲ್ಲಿಯೂ ಬಾಲಕೃಷ್ಣನ ಮಧುರ ರೂಪನ್ನೂ, ಮುಗ್ಧಮಾತುಗಳನ್ನೂ ತಂದು ಕೊಡುವುದರಲ್ಲಿ ಸೂರದಾಸರ ಗೀತೆಗಳು ಯಶಸ್ವಿಯಾಗಿವೆ.

ಪುರಂದರದಾಸರೂ ಸೂರದಾಸರಂತೆಯೇ ಹಿರಿಯ ಭಕ್ತ, ಹಿರಿಯ ಹಾಡುಗಾರ. ಸೂರದಾಸರಂತೆಯೇ ಅವರ ಜೀವನವೆಲ್ಲ ಹರಿಸಮರ್ಪಿತವಾಗಿದ್ದಿತು. ನಾಮ ಮಹಿಮೆ, ಹರಿ ಗುರುಗಳ ಸ್ಮರಣೆ–ಸ್ತುತಿ, ಅಂತರಂಗ ನಿವೇದನೆ, ಕೃಷ್ಣಲೀಲೆ ಇವು ಪುರಂದರದಾಸರ ಕೀರ್ತನೆಗಳಲ್ಲಿ ಕಂಡು ಬರುವಂತೆಯೇ ಸೂರದಾಸರಲ್ಲೂ ಕಂಡು ಬರುತ್ತವೆ. ಕೃಷ್ಣಲೀಲೆಯ ಕೀರ್ತನೆಗಳಲ್ಲಿ ಭಾಗವತದ ಪೂರ್ಣಛಾಯೆ ಇವರ ಕೀರ್ತನೆಗಳಲ್ಲಿವೆ. ಶೃಂಗಾರ, ವಾತ್ಸಲ್ಯ, ಹಾಸ್ಯರಸಗಳೂ ಇವೆ. ಭಾರತ ಮತ್ತು ಭಾಗವತಗಳಲ್ಲಿ ಎಲ್ಲೆಲ್ಲಿ ಕೃಷ್ಣನ ಮಹಿಮೆ ವಿದಿತವಾಗಿರುವುದೋ ಅದನ್ನು ಸರಳ ರೂಪದಿಂದ ಒಳ್ಳೆಯ ಉಪಮಾನಗಳೊಡನೆ ಮನೋಹರವಾಗಿ ರಚಿಸಿರುವ ಇವರ ಕೀರ್ತನೆಗಳು ಪ್ರಸಿದ್ಧವಾಗಿವೆ.

(1) ಬಾರೆಗೋಪಮ್ಮ ನಿಮ್ಮ ಬಾಲಯ್ಯಗಳುತಾನೆ॥
ನೀರೊಳು ಮುಳುಗಿ ಮೈ ಒರಸೆಂದಳುತಾನೆ ಬಾರೆ
ಗೋಪಮ್ಮ।



ಮೇರುವ ಹೊತ್ತು ಮೈ ಭಾರವೆಂದಳು ತಾನೆ ಬಾರೆ
ಗೋಪಮ್ಮ॥

ಇಲ್ಲಿ ಬಾಲ ಲೀಲೆಯೊಂದಿಗೇ ಹಾಸ್ಯ, ವಾತ್ಸಲ್ಯ ರಸಗಳೂ ಹೊಮ್ಮಿವೆ.

(2) ಆಡಹೋಗಲು ಬೇಡವೋ। ರಂಗಯ್ಯ

ಮೇಲಿನ ಎರಡು ಕೀರ್ತನೆಗಳಲ್ಲಿಯೂ, ಶ್ರೀ ಕೃಷ್ಣಾವತಾರದ ವಿಷಯಗಳು ಬಾಲ ಲೀಲೆಯೆಂಬಂತೆ ಬಂದಿರುವುದನ್ನು ನೋಡಿದರೆ, ಪ್ರೀತಿಯ ಹಿರಿಮೆ ಎಷ್ಟೆನ್ನುವುದು ಗೋಚರವಾಗುತ್ತದೆ.

(3) ಗಜಗನಾಡುತಲಿರ್ದನು। ನಮ್ಮ ರಂಗ ॥ಪ॥
ವ್ರಜದ ಮಕ್ಕಳ ಕೂಡ ಹರುಷದಿಂದಲಿ ಬಲು॥...

ಈ ಕೀರ್ತನೆಯಲ್ಲಿ ಬಾಲ್ಯದ 'ಚೇಷ್ಟೆ' ಹುಡುಗಾಟಗಳ ವರ್ಣನೆ ಬಂದಿದೆ.

(4) ಕಂದ ಹಾಲು ಕುಡಿಯೋ। ಎನ್ನ ಗೋವಿಂ
ಹಾಲು ಕುಡಿಯೋ

ಈ ಕೀರ್ತನೆಯಲ್ಲಿ ವಾತ್ಸಲ್ಯ ಭಾವನೆಯ ಪರಾಕಾಷ್ಠತೆಯನ್ನು ಕಾಣಬಹುದು.

ಇನ್ನು ಸೂರದಾಸರಿಗೂ ಪುರಂದರ ದಾಸರಿಗೂ ಸಾಮ್ಯವಿದೆಯೆಂದು ಭಾವಿಸಬಹುದಾದ ಈ ರಚನೆಗಳನ್ನು ನೋಡಿ—

೧] ಸೂರದಾಸರು :—

ಛಾಂಡ ಮನ ಹರಿ ವಿಮುಖನಕೀ ಸಂಗ್।
ಜಿನಕೆ ಸಂಗ ಕುಬುದಿ ಉಪಜತಿಹೈ ಪರತ ಭಜನಮೆ
ಭಂಗ್॥
ಕಹಾಹೋತ ಪಯಪಾನ ಕರಾಯೇ ವಿಷನಹಿತಜತ
ಭುಜಂಗ್।
ಕಾಗಹಿ ಕಹಾಕಪೂರ ಚುಗಾಯೋ ಸ್ವಾನ
ನ್ಹವಾಯೇ ಗಂಗ॥
ಖರಕೋ ಕಹಾ ಅರಗಜಾ–ಲೇಪನ ಮರ್ಕಟ
ಭೂಷನ ಅಂಗ।



# ಕೌಪೀನ ವಂತಃ ಖಲು ಭಾಗ್ಯವಂತಃ

ಲೇಖಕರು : **ಪಂಡಿತ ಹನುಮಂತರಾಯ,** ಬೆಂಗಳೂರು.

ಸಾಮಾನ್ಯವಾಗಿ ಕೌಪೀನದ ಪರಿಚಯವಿಲ್ಲದ ಭಾರತೀಯನೇ ಇಲ್ಲ ಎನ್ನಬಹುದು. ಪ್ರತಿಯೊಬ್ಬ ಹಿಂದುವೂ ಒಂದಲ್ಲ ಒಂದು ಸಂದರ್ಭದಲ್ಲಾದರೂ ಕೌಪೀನವನ್ನು ಧರಿಸುವನು. ಕೌಪೀನ ಬಂಧವಾದ ಉಡಿದಾರವಂತೂ ಎಲ್ಲ ಕಾಲದಲ್ಲೂ ಎಲ್ಲ ಹಿಂದುವಿನ ಸೊಂಟದಲ್ಲೂ ಇದ್ದೇ ಇರುತ್ತದೆ. ಬ್ರಹ್ಮಚಾರಿಗಂತೂ ಕೌಪೀನ ಧಾರಣೆಯು ಕಡ್ಡಾಯ. ಬ್ರಹ್ಮಚಾರಿಯು ಪರಿಪಾಲಿಸ ಬೇಕಾದ ಸುಮಾರು ೪೧ ನಿಯಮಗಳಲ್ಲಿ ಕೌಪೀನ ಧಾರಣಾ ನಿಯಮವೂ ಒಂದು.

ಸಾಮಾನ್ಯವಾಗಿ ಕೌಪೀನ ಧಾರಣಾ ಪದ್ಧತಿಯು ಭಾರತದಲ್ಲಿ ಬಳಕೆಯಲ್ಲಿರುವಷ್ಟು ಮಟ್ಟಿಗೆ ಪ್ರಪಂಚದ ಮತ್ತಾವ ಭಾಗದಲ್ಲೂ ಇರುವಂತೆ ಕಾಣುವುದಿಲ್ಲ. ಇಂಗ್ಲೇಂಡ್, ಅಮೇರಿಕಾ ಮೊದಲಾದ ಪರ ರಾಷ್ಟ್ರಗಳಿಗೆ ವ್ಯಾಸಂಗಕ್ಕೆ ಹೋಗುವ ನಮ್ಮ ಗೆಳೆಯರು ಬಿಡಿಸಲಾರದ ಪ್ರಶ್ನೆಯೆಂದರೆ ಭಾರತೀಯರಾದ ನೀವು ಕೌಪೀನ ಧರಿಸುವುದೇಕೆ ? ಸೊಂಟಕ್ಕೆ ದಾರ ಬಿಗಿಯುವುದೇಕೆ ? ಪಾಶ್ಚಿಮಾತ್ಯರ ನಾಗರೀಕತೆಗೆ ಮಾರುಹೋಗಿ ಅವರ ಹಾದಿಯಲ್ಲೆ ಚಲಿಸುತ್ತಿರುವ ಹಾಗು ನಮ್ಮ ಸಂಪ್ರದಾಯಗಳನ್ನು ಪರಿಶೀಲಿಸದ ನಮ್ಮ ಗೆಳೆಯರು ಅವರ ಪ್ರಶ್ನೆಗಳನ್ನು ಬಿಡಿಸಲಾರದೆ ತೃಪ್ತಿಕರವಾದ ಉತ್ತರವನ್ನು ಈಯಲಾಗದೆ ಅವರ ವಾದವನ್ನೇ ಒಪ್ಪಿಕೊಂಡು ಇದ್ದುದೊಂದು ಉಡುದಾರವನ್ನು ಕಿತ್ತು ಹಾಕಿಕೊಳ್ಳುತ್ತಾರೆಂದರೆ ಅಂತಹವರಿಗೆ ಕೋಪ ಬರಲಾರದಷ್ಟೆ.

ಶಿಲಾಯುಗಕ್ಕೂ ಹಿಂದೆ ಮಾನವನು ಅನಾಗರಿಕನಾಗಿದ್ದು ಕಾಡುಪ್ರಾಣಿಗಳಂತೆ ಜೀವಿಸುತ್ತಿದ್ದ. ಗಿಡ ಮರಗಳ ಪೊದರು, ಪೊಟರು, ಗವಿಗಳು ಇವೇ ಅವನ ವಾಸ ಮಂದಿರಗಳಾಗಿದ್ದವು. ಮಾನವನ್ನು ಮುಚ್ಚಿಕೊಳ್ಳಬೇಕೆಂಬ ಪರಿವೆಯುಂಟಾದ ಕಾಲದಲ್ಲಿ ಮರದ ತೊಗಟೆ, ಪಕ್ಷಿಗಳಗರಿಗಳು, ಚರ್ಮ ಇವುಗಳನ್ನು ಸೊಂಟಕ್ಕೆ ಸುತ್ತಿಕೊಳ್ಳಲು ಪ್ರಾರಂಭಿಸಿದ. ಸೊಂಟಕ್ಕೆ ಚರ್ಮ ಗರಿಗಳನ್ನು ಸುತ್ತಿಕೊಂಡು ಮಾನವನ್ನು ಕಾಪಾಡುವ ಪದ್ಧತಿ ಜಗತ್ತಿನ ಎಲ್ಲ ಜನರಲ್ಲೂ ಇದ್ದುದು ಈಗಲೂ ಕೆಲವು ಮೂಲನಿವಾಸಿಗಳು ಬಳಸುತ್ತಿರುವುದು ತಿಳಿದು ಬರುತ್ತದೆ. ಜಗತ್ತಿನಲ್ಲಿ ಮೊಟ್ಟ ಮೊದಲಿಗೆ ನೇಯುವುದನ್ನು ಕಂಡು ಕೊಂಡ ಭಾರತೀಯ ಮಾನವನು ಕೌಪೀನ ಪದ್ಧತಿಯನ್ನು ಬಳಕೆಗೆ ತಂದನು.

ಪ್ರಪಂಚದ ಇತಿಹಾಸದಲ್ಲಿ ಭಾರತದ ಇತಿಹಾಸವು ವೈಶಿಷ್ಟ್ಯಪೂರ್ಣವಾದುದು ಮತ್ತು ಸುಸಂಸ್ಕೃತವಾದುದು. ಜಗತ್ತು ಅನಾಗರಿಕ ಸ್ಥಿತಿಯಲ್ಲಿದ್ದಾಗ ಭಾರತಒಂದೇ ನಾಗರೀಕತೆಯನ್ನು ಕಂಡಿತ್ತು. ಮನೆಮಠಗಳನ್ನು ಕಟ್ಟುವುದು ಬೇಸಾಯ ಮಾಡುವುದು, ಸುಧಾರಿಸಿದ ವಸ್ತುಗಳನ್ನು ಬಳಸುವುದು, ಕಚ್ಚಾವಸ್ತುವಿನಿಂದ ಸಿದ್ಧವಸ್ತುಗಳನ್ನು ತಯಾರಿಸುವುದು ಇವೇ ಮೊದಲಾದುವನ್ನು ನಮ್ಮವರು ಎಲ್ಲರಿಗಿಂತ ಮೊದಲು ತಿಳಿದು ಜಗತ್ತಿಗೆ ತಿಳಿಸಿದರು. ಕಚ್ಚಾ ವಸ್ತುವಿನಿಂದ ಸಿದ್ಧವಸ್ತುಗಳನ್ನು ತಯಾರಿಸುವುದರಲ್ಲಿ ನಮ್ಮ ಮೂಲ ಮಾನವರಲ್ಲಿ ವಸ್ತ್ರ ತಯಾರಿಸುವುದು ಮೊದಲನೆಯದು. ಕಿತ್ತನಾರನ್ನು ಬಳಸಿ ವಸ್ತ್ರಗಳನ್ನು ತಯಾರಿಸುವುದನ್ನು ಕಲಿತರು. ನಾರುಮಡಿ ಎಂದು ಇಂದು ನಾವು ಬಳಸುತ್ತಿರುವ ವಸ್ತ್ರಕ್ಕೆ ಆದಿ ಕಿತ್ತನಾರಿನ ವಸ್ತ್ರ. ಕ್ರಮೇಣ ನಾರಿನ

ನಯುವಾದ ಎಳೆಗಳಿಂದ ವಸ್ತ್ರಗಳನ್ನು ತಯಾರಿಸಿ ಸುಧಾರಣೆ ನಡೆದಿದೆ. ಈ ನಾರುಮುಡಿ ಉಗಮವಾದ ಕಾಲದಲ್ಲಿ ಆರು ಅಂಗುಲ ಅಗಲದ ಸಾಕಷ್ಟು ಉದ್ದ ಅಂದರೆ ೪೦-೫೦ ಅಡಿ ಉದ್ದದ ದಪ್ಪ ವಸ್ತ್ರ ತಯಾರಾಗುತ್ತಿತ್ತು. ಅದನ್ನು ದಿನಗಟ್ಟಲೆ ಕೈಯಿಂದ ಹೆಣೆಯುತ್ತಿದ್ದರು, ಚಾಪೆ ಹೆಣೆದಂತೆ. ಸಿದ್ಧವಾದ ಈ ಬಟ್ಟೆಯನ್ನು ತಮ್ಮ ಅಳತೆಗೆ ತಕ್ಕಂತೆ ಕತ್ತರಿಸಿ ಒಂದನ್ನೊಂದು ಜೋಡಿಸಿ ಹೊಲಿದು ಧರಿಸುವುದು. ಚೀಲಗಳನ್ನು ಮಾಡಿಕೊಂಡು ದವಸ ಧಾನ್ಯಗಳನ್ನು ತುಂಬಿ ಪ್ರಾಣಿಗಳ ಮೇಲೆ ಹೇರಿಕೊಂಡು ಸಾಗಿಸುವುದು ಮಾಡುತ್ತಿದ್ದನೆಂಬುದು ಇತಿಹಾಸದಿಂದ ತಿಳಿಯುವುದರ ಜೊತೆಗೆ ಈಗಲೂ ಗುಡ್ಡ ಗಾಡುಗಳಲ್ಲಿ ವಾಸಿಸುವ ಗಿರಿ ನಿವಾಸಿಗಳು ತಯಾರಿಸುವುದನ್ನು ನೋಡಬಹುದು. ಹೀಗೆ ನಮ್ಮಲ್ಲಿ ಬಳಕೆಗೆ ಬಂದ ಆರಂಗುಲದ ಸಿದ್ಧ ವಸ್ತುವು ಸ್ತ್ರೀ ಪುರುಷರ ಮಾನವನ್ನು ಸಂಪೂರ್ಣವಾಗಿ ಕಾಪಾಡುವುದರಲ್ಲಿ ನೆರವಾಯಿತು. ಹೀಗೆ ವಸ್ತ್ರಗಳನ್ನು ತಯಾರಿಸುವುದನ್ನು ಕಲಿತ ನಮ್ಮವರು ತಮ್ಮ ಆಕಾರಕ್ಕೆ ತಕ್ಕ ಹಾಗೆ ಚೆಡ್ಡಿ, ಅಂಗಿ ಮೊದಲಾದುವನ್ನು ಕತ್ತರಿಸಿ ಹೊಲಿಯುವುದನ್ನು ಹೆಚ್ಚು ಬಳಕೆಗೆ ತರಲಿಲ್ಲ. ನೇಯುವುದಕ್ಕೆ ಸಾಕಷ್ಟು ವೇಳೆಯಿಲ್ಲದಿರುವಾಗ ಅಂದ ಚಂದವಾಗಿ ಕತ್ತರಿಸಿ ಹೊಲಿಯಲು ವೇಳೆಯೆಲ್ಲಿ ಬರಬೇಕು? ಕೌಪೀನವನ್ನು ಧರಿಸಿ ಹಚ್ಚಡವನ್ನು ಹೊದಿಯುವುದು ಸುಲಭವಾಯಿತು. ಸ್ತ್ರೀಯರು ಮಾತ್ರ ಹೆಚ್ಚು ಉದ್ದದ ಬಟ್ಟೆಯನ್ನು ಸುತ್ತಿಕೊಳ್ಳುವುದು, ಅದಕ್ಕೆ ಕೆಲವು ಅಲಂಕಾರಗಳನ್ನು ಮಾಡಿಕೊಳ್ಳುವುದು ಇದ್ದರೂ ಕುಪ್ಪುಸ ಮೊದಲಾದುವುಗಳನ್ನು ಧರಿಸುವುದು ರೂಢಿಯಿರಲಿಲ್ಲ. ಅದೇ ಆರಂಗುಲ ಬಟ್ಟೆಯಿಂದ ಎದೆಯನ್ನು ಮಾತ್ರ ಮುಚ್ಚಿಕೊಳ್ಳುತ್ತಿದ್ದರು. ಈ ಉಡುಪು ಖರ್ಚಿಲ್ಲದ, ಶ್ರಮವಿಲ್ಲದ ಉಡುಪಾಗಿತ್ತು. ಭಾರತದಿಂದ ವಸ್ತ್ರ ಕೊಂಡು ಧರಿಸುತ್ತಿದ್ದ ಪಾಶ್ಚಾತ್ಯರು ತುಂಡುಲಂಗ, ಕಾಚಗಳನ್ನು ಧರಿಸಿ ಅಭಾವವನ್ನು ಪರಿಹರಿಸಿಕೊಳ್ಳಬೇಕಾಯಿತು.

ಕಾಲಕ್ರಮೇಣ ವಸ್ತ್ರಗಳ ಉತ್ಪಾದನೆ ಭಾರತದಲ್ಲಿ ಸುಧಾರಣೆ ಹೊಂದಿತು. ಹೆಚ್ಚು ಅಗಲದ ಹೆಚ್ಚು ಉದ್ದದ ಬಟ್ಟೆಗಳನ್ನು ತಯಾರಿಸಲು ಪ್ರಾರಂಭಿಸಿದರು. ಉತ್ಪಾದನೆಯಲ್ಲಿ ಹೆಚ್ಚಿನ ಲಾಭ ಸ್ತ್ರೀಯರಿಗೆ ಮೀಸಲಾಯಿತು. ಪುರುಷನು ಮಾತ್ರ ಆರಂಗುಲ ಕೌಪೀನವನ್ನು ಬಿಡಲಿಲ್ಲ. ಹೆಚ್ಚು ಮುಂದುವರಿದವರು ಮಾತ್ರ ಕಚ್ಚೆ ಪಂಚೆಗಳನ್ನು ಧರಿಸುತ್ತಿದ್ದರು. ಪರದೇಶಗಳೊಡನೆ ವ್ಯಾಪಾರ ಸಂಬಂಧ ಹೆಚ್ಚಿದ ನಂತರ ಹೊಲಿದ ಬಟ್ಟೆಗಳ ಬಳಕೆ ರೂಢಿಗೆ ಬಂದಿತಾದರೂ ೧೮-೧೯ ನೇ ಶತಮಾನಗಳು ಕಳೆದರೂ ಹೆಚ್ಚು ಬಳಕೆಯಲ್ಲಿರಲಿಲ್ಲ.

ಕೌಪೀನವನ್ನು ಬಿಗಿಯಾಗಿ ಕಟ್ಟಬೇಕಾದರೆ ಮತ್ತೊಂದು ದಾರದ ಸಹಾಯ ಬೇಕಾಯಿತು. ಅದಕ್ಕಾಗಿ ಒಂದು ಉಡುದಾರವನ್ನು ಕಟ್ಟಿಕೊಂಡರು. (ಉಡುವುದು + ದಾರ = ಉಡುದಾರ). ೨೦ನೇ ಶತಮಾನದ ಆದಿಭಾಗದಲ್ಲಿ ಬಹುತೇಕ ಭಾರತೀಯ ಹಳ್ಳಿಗರು ಕೌಪೀನ ಮತ್ತು ಒಂದು ಹಚ್ಚಡ ಇವುಗಳಷ್ಟನ್ನೇ ಧರಿಸುತ್ತಿದ್ದರು. ಈಗಂತೂ ನಮ್ಮ ನಾಗರೀಕತೆ ತುಂಬ ಬದಲಾಗಿ ಕೌಪೀನ ಧರಿಸುವುದು ಅನಾಗರಿಕವೆಂಬಂತಾಗಿದೆ. ಅಗಲವಾದ ತೋಳುಗಳನ್ನುಳ್ಳ ಚೆಡ್ಡಿಗಳು ಬಳಕೆಯಲ್ಲಿ ಬಂದಿವೆ. ಈ ಚೆಡ್ಡಿಗಳು ಎಷ್ಟರ ಮಟ್ಟಿಗೆ ಮಾನವನ್ನು ಕಾಪಿಡುತ್ತಿವೆಯೆಂದರೆ ನೆಲದ ಮೇಲೆ ನಿಂತಾಗ ಮಾತ್ರ. ಬರೀ ಚೆಡ್ಡಿಯನ್ನು ಧರಿಸುವ ಪುರುಷನು ತನ್ನ ಮಾನವನ್ನು ಎಲ್ಲ ಸಂದರ್ಭಗಳಲ್ಲೂ ಎಲ್ಲ ಕಾಲಗಳಲ್ಲೂ ಮುಚ್ಚಿಡಲು ಸಾಧ್ಯವಿಲ್ಲ. ಕೌಪೀನಧಾರಿಯನ್ನು ನೋಡಿ ಅಸಹ್ಯ ಪಡುವ ಕಾಲದಲ್ಲಿ ಚೆಡ್ಡಿ ಧರಿಸಬಾರದೆಂದು ಹೇಳುವುದು ಹಿತವಲ್ಲ. ಆದರೆ ನಮ್ಮ ವೇಷಭೂಷಣಗಳು ಕೇವಲ ಅಲಂಕಾರವಾಗದೆ ಮೂಲ ಉದ್ದೇಶವನ್ನು ಚ್ಯುತಿಗೊಳಿಸುವಂತಾಗಬಾರದು. ಅರ್ಧ ನಿತಂಬದ ಮೇಲೆ ಪ್ಯಾರ್ಶ ಸೀರೆ ಉಡುವ ಸುಂದರಿಯನ್ನು ನೋಡಿ ಗುಜು ಗುಟ್ಟುವ ಗೆಳೆಯರು ಮೊದಲು ತಮ್ಮ ಚೆಡ್ಡಿಯತ್ತ ಗಮನ ಕೊಡಬೇಕು. ಕೌಪೀನವನ್ನು ಧರಿಸಿ ನಂತರ ಚೆಡ್ಡಿಯನ್ನು ಧರಿಸಿದರೆ ಮಾನವೂ ರಕ್ಷಣೆ



ಯಾಯಿತು; ನಾಗರೀಕತೆಯೂ ಉಳಿಯಿತು. ಇಂದ್ರಿಯ ನಿಗ್ರಹ ಮತ್ತು ಆರೋಗ್ಯ ಸಂಪತ್ತುಗಳಲ್ಲೂ ಕೂಡಿ ಬರಬಲ್ಲವು.

ನಮ್ಮ ಭೂಮಿ ಬ್ರಹ್ಮಚರ್ಯೆಗೆ ಹೆಚ್ಚು ಮಹತ್ವವನ್ನು ಕೊಟ್ಟಿದೆ. ಬ್ರಹ್ಮಚರ್ಯೆಯನ್ನು ಪರಿಪಾಲಿಸಿಕೊಂಡು ವೀರ್ಯ ಸಂರಕ್ಷಣೆ ಮಾಡಿಕೊಂಡ ಪುರುಷನಿಗೆ ಅಸಾಧ್ಯವಾದುದು ಯಾವುದು ಇಲ್ಲ. ಅಂತಹ ವ್ಯಕ್ತಿಯಲ್ಲಿರುವಷ್ಟು ತೇಜಸ್ಸು, ಉತ್ಸಾಹ, ಶಕ್ತಿ ಸಾಮರ್ಥ್ಯಗಳು ಮತ್ತಾವ ವ್ಯಕ್ತಿಯಲ್ಲೂ ಕಂಡುಬರುವುದಿಲ್ಲ. ವೀರ್ಯಸಂರಕ್ಷಣಾರ್ಥವಾಗಿ ಕೌಪೀನವನ್ನು ಕಡ್ಡಾಯವಾಗಿ ಧರಿಸಲೇ ಬೇಕು. ಮಾನ ರಕ್ಷಣೆಗಾಗಿ ಧರಿಸುತ್ತಿದ್ದ ಕೌಪೀನ ವೀರ್ಯ ಸಂರಕ್ಷಣೆಯ ಮೂಲಕ ಪ್ರಾಣ ರಕ್ಷಣೆಯನ್ನು ಹೇಗೆ ಮಾಡಬಲ್ಲುದೆಂಬುದನ್ನು ನಮ್ಮವರು ಕಂಡುಕೊಂಡರು. ಕೌಪೀನದ ಮಹತ್ವ ಜನರಿಗೆ ಅರಿವಾದುದರಿಂದಲೇ ಸದಾಕಾಲ ಕೌಪೀನ ಇರಲೇಬೇಕೆಂದು ಸಾರಿದರು. ಕೊಬ್ಬಿದ ಹೋರಿಯೊಂದನ್ನು ಅಂಕೆಯಲ್ಲಿಡಲು ಹಗ್ಗ ಮೂಗುದಾರ ಎಷ್ಟು ಅವಶ್ಯಕವೋ ಹಾಗೆ ಕೌಪೀನವು ಪುರುಷೇಂದ್ರಿಯವನ್ನು ಅಂಕೆಯಲ್ಲಿಡಲು ಆವಶ್ಯಕ. ಕೊಬ್ಬಿದ ಹೋರಿಯನ್ನು ಸ್ವೇಚ್ಛೆಯಾಗಿ ಬಿಡುವುದು ಎಷ್ಟು ಅನರ್ಥಕಾರಿಯೋ ಪುರುಷನು ತನ್ನ ಇಂದ್ರಿಯವನ್ನು ಕೌಪೀನ ಬಂಧನದಿಂದ ಹೊರಗಿಡುವುದು ಅಷ್ಟೇ ಅನರ್ಥಕಾರಿ. ಪುರುಷೇಂದ್ರಿಯದ ತುದಿಭಾಗದಲ್ಲಿ ನೂರಾರು ಸೂಕ್ಷ್ಮತಂತು ಜಾಲವಿದೆ. ಅವು ತುಂಬ ಚುರುಕುಳ್ಳ (Sensitive) ತಾರುಣ್ಯದ ಪ್ರಥಮಾವಸ್ಥೆಯಲ್ಲಿಯಂತೂ ತುಂಬ ಅಪಾಯಕಾರಿಯಾದ ವಿಕಾರವನ್ನುಂಟು ಮಾಡಿ ಮನಸ್ಸಿನ ಪ್ರಶಾಂತತೆಯನ್ನು ಕದಡುತ್ತವೆ. ಆ ಕಾಲದಲ್ಲಿ ಆಕಸ್ಮಿಕವಾಗಿ ವಸ್ತ್ರ ತಾಡನವಾದರೂ ಮನಸ್ಸನ್ನು ಕದಡುತ್ತವೆ. ಆದ್ದರಿಂದ ನಮ್ಮ ಮನಸ್ಸು ನಿರ್ಮಲವಾಗಬೇಕಾದರೆ ಆ ಇಂದ್ರಿಯ ಅಚಲವಾಗಬೇಕು. ಇಂದ್ರಿಯ ಅಚಲವಾಗ ಬೇಕಾದರೆ ಕೌಪೀನ ಬಂಧನ ಅತ್ಯವಶ್ಯಕ. ಇದೊಂದೇ ಸರ್ವೋತ್ಕೃಷ್ಟ ಉಪಾಯ. ನಮ್ಮ ಈ ನಾಗರೀಕತೆಯು ಕೌಪೀನ ಧಾರಣೆಯನ್ನು ತಿರಸ್ಕರಿಸಿದುದರಿಂದ ನಮ್ಮ ಯುವಕರು ನಿರ್ವೀರ್ಯರಾಗುತ್ತ ಬಂದಿದ್ದಾರೆ. ನಮ್ಮ ಯುವಕರಲ್ಲಿ ಸ್ವಪ್ನ ಸ್ಖಲನ, ಶೀಘ್ರ ಸ್ಖಲನಗಳು ಹೆಚ್ಚಾಗುತ್ತಿವೆ. ಇದನ್ನು ಹೋಗಲಾಡಿಸಿಕೊಳ್ಳಲು ದುಷ್ಟ ಔಷಧಿಗಳನ್ನು ತಿಂದು ಮತ್ತಷ್ಟು ಶರೀರವನ್ನು ಗೊಂದಲಮಯವಾಗಿಸಿಕೊಳ್ಳುತ್ತಿರುವುದು ಕಾಣಬರುತ್ತದೆ:–

ಭಕ್ತ ವಾಮನರು ವೀರ್ಯ ಸಂರಕ್ಷಣೆ ಆಗಬೇಕೆಂಬುದಾಗಿ ಬೇಕಾದಷ್ಟು ಹೇಳಿದ್ದಾರೆ. ಕೌಪೀನ ಧಾರಣೆಗೂ ಅಷ್ಟೇ ಮಹತ್ವವನ್ನು ಕೊಟ್ಟಿದ್ದಾರೆ. ಅವರು ಈ ರೀತಿ ಹೇಳಿದ್ದಾರೆ.

"ವೀರ್ಯ ಸಂರಕ್ಷಣಾರ್ಥಾಯ ಕೌಪೀನಂ ಧಾರಯೇತ್ ಸದಾ।
ಸ್ವಪ್ನದೋಷೋಽಂಡ ವೃದ್ಧಿಶ್ಚ ನಭವೇತ್ ಕದಾಚನ॥

ವೀರ್ಯ ಸಂರಕ್ಷಣಾರ್ಥವಾಗಿ ಯಾವಾಗಲೂ ಕೌಪೀನವನ್ನು ಧರಿಸಿರಬೇಕು. ಇದರಿಂದ ಸ್ವಪ್ನದೋಷವಾಗಲಿ, ಅಂಡ ವೃದ್ಧಿಯಾಗಲಿ ಉಂಟಾಗುವುದಿಲ್ಲ. ಸ್ವಪ್ನದೋಷವು ಯಾರಿಗೂ ಯಾವ ಕಾಲದಲ್ಲೂ ಉಂಟಾಗಬಾರದು. ಅದು ಒಳಿತಲ್ಲ. ಈಗಿನ ವೈದ್ಯರು ಸ್ವಪ್ನದೋಷವು ಆಗುವುದರಿಂದ ಹಾನಿಯೇನು ಆಗುವುದಿಲ್ಲ. ಯೌವ್ವನದ ಧರ್ಮ. ತುಂಬಿದ ಕೆರೆ ಕೋಡಿ ಬೀಳುವುದು ಒಳ್ಳೆಯದಲ್ಲವೆ? ಮದುವೆ ಆದ ಮೇಲೆ ಎಲ್ಲ ಸರಿ ಹೋಗುವುದು. ಭಯಬೇಡ ಎಂದು ಹೇಳುವುದು ಉಚಿತವಾಗಿ ಕಾಣುವುದಿಲ್ಲ. ಹಗಲಲ್ಲಿ ತನ್ನ ಮನಸ್ಸಿನಲ್ಲುಂಟಾದ ವಿಕಾರ ಸ್ವಪ್ನದಲ್ಲಿ ಕಾರ್ಯಗತವಾಗಿ ಅದರಿಂದ ವೀರ್ಯ ಹಾನಿಯಾದರೆ ಪ್ರಕೃತಿ ನಿಯಮವೆಂದು ಹೇಳಬಾರದು. ಅಪಕ್ವಾವಸ್ಥೆಯಲ್ಲಿ ಉಂಟಾದ ವೀರ್ಯ ಹಾನಿಯು ದಿನೇ ದಿನೇ ನರಗಳ ದೌರ್ಬಲ್ಯವನ್ನುಂಟು ಮಾಡಿ ಸ್ವಪ್ನ ಸ್ಖಲನ, ಶೀಘ್ರ ಸ್ಖಲನಗಳನ್ನು ಹೆಚ್ಚು ಮಾಡುತ್ತದೆ. ಇದರಿಂದ ದೇಹ ನಿರ್ವೀರ್ಯವಾಗಿ ಬೇಗ ಶಿಥಿಲವಾಗುತ್ತದೆ. ಮುಪ್ಪು ಬೇಗ ಸಮೀಪಿಸುತ್ತದೆ. ಮುವ್ವತ್ತು ವರ್ಷದ ತರುಣ ೬೦ ವರ್ಷದ ಮುದುಕನಂತಾಗು

ತ್ತಾನೆ. ಮನೋದೌರ್ಬಲ್ಯ ಮತ್ತಷ್ಟು ಹೆಚ್ಚುತ್ತಾಹೋಗುತ್ತದೆ. ಯೌವನವು ಪಕ್ವವಾಗುವವರೆಗೂ ವೀರ್ಯ ಯಾವ ಕಾರಣದಿಂದಲೂ ಹಾಳಾಗಬಾರದು. ಸ್ವಪ್ನ ಸ್ಖಲನವಾಗುವುದಾದರೆ ಕೂಡಲೆ ಉತ್ತಮ ಔಷದೋಪಚಾರ ನಡೆದು ಕೌಪೀನ ಧಾ ರಿ ಯಾ ದ ರೆ ಖಂಡಿತ ನಿಲ್ಲುತ್ತದೆ. ಒಬ್ಬ ಗೆಳೆಯರು ಪ್ರಥಮ ದರ್ಜೆಯಲ್ಲಿ ಓದುತ್ತಿದ್ದ ವ್ಯಕ್ತಿ B. Sc. ಗೆ ಬರುವ ವೇಳೆಗೆ ಸ್ವಪ್ನ ಸ್ಖಲನ ಹೆಚ್ಚಿತು. ಸರಿಯಾದ ಔಷಧೋಪಾಚಾರ ದೊರೆಯಲಿಲ್ಲ. ಮೇಲೆ ಹೇಳಿದ ವೈದ್ಯೋಕ್ತಿಯನ್ನು ನಂಬಿ ಸುಮ್ಮನಾದರು. ಇದರ ಪರಿಣಾಮದಿಂದ ತುಂಬಿದ ಕಾಯ ಕೃಶಕಾಯವಾಯಿತು. ಕ್ಷಯ ಬಂತು; ಯಮ ಬಂದ; ಕರೆದು ಕೊಂಡುಹೋದ. ಪ್ರಥಮ ದರ್ಜೆ ವ್ಯಕ್ತಿಯ ಪುಣ್ಯ ಏನಾಯಿತು ?

ಕೌಪೀನವನ್ನು ಧರಿಸುವುದರಿಂದ ಇಂದ್ರಿಯದ ಮೇಲೆ ಯಾವ ಘರ್ಷಣೆಯೂ ಉಂಟಾಗುವುದಿಲ್ಲ. ಸೂಕ್ಷ್ಮ ತಂತುಗಳು ಪಟುತ್ವನಾಶಹೊಂದದೆ ಬೂದಿ ಮುಚ್ಚಿದ ಕೆಂಡದಂತೆ ನವಚೈತನ್ಯವನ್ನು ತುಂಬಿಕೊಂಡು ಗಂಭೀರವಾಗಿರುತ್ತವೆ. ಮನಸ್ಸು ಶಾಂತವಾಗಿರುತ್ತದೆ. ಮನುಷ್ಯನಲ್ಲಿ ಇತರ ಕೆಲಸ ಕಾರ್ಯಗಳಲ್ಲಿ ಉತ್ಸಾಹ ಹೆಚ್ಚುತ್ತದೆ.

ಧರಿಸುವ ಕೌಪೀನವು ಎರಡು ಪದರಿನಿಂದ ಕೂಡಿರಬಾರದು. ದಪ್ಪ ಬಟ್ಟೆಯಿಂದ ಮಾಡಿದುದಾಗಬಾರದು. ಎರಡು ಪದರಿನ ಅಥವಾ ದಪ್ಪ ಬಟ್ಟೆಯನ್ನು ಧರಿಸಿದರೆ ಅದರಿಂದ ಉಷ್ಣತೆ ಬೆಳೆದು ಸ್ವಪ್ನದೋಷ ಉಂಟಾಗಬಲ್ಲದು ಇದರಿಂದ ಉದ್ದೇಶ ಹಾಳಾಗುತ್ತದೆ. ತೆಳುವು ಬಟ್ಟೆಯಿಂದ ಕೂಡಿ ಒಂದೇ ಪದರುಳ್ಳದ್ದಾಗಿರಬೇಕು. ಬಿಗಿಯಾಗಿ ಎಳೆದು ಕಟ್ಟಿರಬೇಕು. ರಾತ್ರಿ ವೇಳೆಯಲ್ಲಿ ಮಾತ್ರ ಸಡಿಲಗೊಳಿಸಿರಬೇಕು. ಹಗಲು ರಾತ್ರಿ ಬಿಗಿಯಾಗಿ ಬಂಧಿಸಿದುದೇ ಆದರೆ ಪುರುಷತ್ವಕ್ಕೆ ಧಕ್ಕೆಯುಂಟಾಗುವ ಸಂಭವವುಂಟು. ಕೌಪೀನಕ್ಕೆ ರೇಷ್ಮೆ ಬಟ್ಟೆಯೇ ಸರ್ವಶ್ರೇಷ್ಠ. ಏಕೆಂದರೆ ವೀರ್ಯ ಸಂರಕ್ಷಣೆ ಮಾಡುವ ಶಕ್ತಿ ಅದರಲ್ಲಿ ಹೆಚ್ಚಿರುತ್ತದೆ. ವೀರ್ಯವನು ಶುದ್ಧಗೊಳಿಸುವ ಶಕ್ತಿಯೂ ಇದರಲ್ಲಿದೆ. ನಮ್ಮ ಹಿರಿಯರು ಸ್ನಾನ ಮಾಡಿದಮೇಲೆ ಪೂಜೆ ಮತ್ತು ಊಟ ಮುಗಿಯುವವರೆಗೂ ರೇಶ್ಮೆ ಮಡಿಯನ್ನು ಉಡುವ ಉದ್ದೇಶವೂ ಇದೆ. ಕೌಪೀನವೆಂಬುವುದು ಪುರುಷೇಂದ್ರಿಯವೆಂಬ ಅಶ್ವಕ್ಕೆ ಕಡಿವಾಣವಿದ್ದಂತೆ.

## ತಾಯಿಯ ಬಯಕೆ

ದೇಶಕಾಗಿ ಮಡಿಯೇ ನನ್ನ ಕಂದಾ
ನಿನ್ನ ಕೀರ್ತಿ ಬೆಳಗಲಿ ನನ್ನ ಕಂದಾ
ದೇಶಕಾಗಿ ಪ್ರಾಣತೆತ್ತ ನಿನ್ನ ಅಣ್ಣಾ
ದುಡಿಯ ಬೇಕು ನಮ್ಮ ದೇಶಕ್ಕಾಗಿ ||೧||

ನಮ್ಮ ದೇಶಕಾಗಿ ಪ್ರಾಣತೆತ್ತ ನಮ್ಮ ಗಾಂಧೀ
ಸರ್ವರಾ ಏಳ್ಗೆಗಾಗಿ ದುಡಿಯ ಬೇಕು ನಾಂವಿದು
ಲೋಕವೇ ತಮ್ಮದೆಂದು ತಿಳಿದಂಥ
ನೆಹರುವಾ ನಾವಿಂದು ನೆನೆಯಬೇಕು ||೨||

ಅವರ ಆತ್ಮಕಾಗಿ ನಾವಿಂದು ಕೋರಬೇಕು
ಬನ್ನೀ ನಾವಿಂದು ಶಾಂತಿ ಕೋರುವಾ
ಅಹಿಂಸೆಯೇ ನಮ್ಮ ತತ್ವವೆಂದು
ಸಾರಿದಂಥ ವೀರರ ದೇಶವಿದೂ ||೩||

—ಮ. ಚ. ಈಶ್ವರ್





# ಅಷ್ಟಾಂಗಯೋಗದಿಂದ ಶಿವಯೋಗಕ್ಕೆ

ಪಂಡಿತ ಚನ್ನಪ್ಪಎರೇಸೀಮೆ.

೧೨ ನೆಯ ಶತಮಾನದ ಜಗತ್ತಿನ ಇತಿಹಾಸದಲ್ಲೇ ಗಣ್ಯತೆ ಪಡೆದ ಪಟ್ಟಣ ಕಲ್ಯಾಣ. ಶರಣರು ಕಲ್ಯಾಣದಲ್ಲಿ ಶಿವಾನುಭವ ಮಂಟಪ ಸ್ಥಾಪಿಸಿದುದರ ಉದ್ದೇಶ ಆಳವಾಗಿ ಅಲೋಚಿಸಬೇಕಾದುದು. ಅದನ್ನು ರಾಜಕೀಯವಾಗಿ, ಸಾಮಾಜಿಕವಾಗಿ, ದಾರ್ಶನಿಕ ದೃಷ್ಟ್ಯಾ ಕೂಡ ಯೋಚಿಸಬೇಕಾದುದಲ್ಲದೆ ಧಾರ್ಮಿಕೈಕದೃಷ್ಟಿಯಿಂದಷ್ಟೇ ಯೋಚಿಸಿದರೆ ಅದರ ಸಮಗ್ರ ಸೌಂದರ್ಯದ ರೂಪರೇಖೆ ತಿಳಿಯದು.

ವಿಚಾರವಾದವು ಧಾರ್ಮಿಕ ವಿಷಯದಲ್ಲಿ ಕ್ರಮ ಕ್ರಮೇಣ ಹೆಚ್ಚುಗೊಂಡು ಬರಹತ್ತಿತು. ಹಳೆಯ ಸಂಪ್ರದಾಯಗಳು ಕೇವಲ ಸಂಪ್ರದಾಯಗಳಾಗಿ ಜನಾಂಗವು ಹೃದಯದ ಕಡೆ ಇಣುಕಿ ನೋಡುವ ಮನೋಭಾವ ಕಡಿಮೆಯಾಯಿತು. ಸೂಕ್ಷ್ಮ ವ್ಯವಹಾರಗಳ ಅರ್ಥವೇ ಆಗದೆ ಕೇವಲ ನಿಯಮ ಮಾತ್ರ ಎಂಬರ್ಥದಲ್ಲಿ ಹಲವಾರು ವ್ಯವಹಾರ ಪ್ರಯೋಗದಿಂದ ಸಮಾಜದ ದೊಡ್ಡ ಜೀವಹಾರಿತ್ತು. ಜೀವನವೆಲ್ಲ ಬರಡು ಬರಡಾಗಿ ಹೋಗಹತ್ತಿತು. ವಿಚಾರವಾದಿಗಳೂ ವಿಜ್ಞಾನವಾದಿಗಳೂ, ರಾಜಕೀಯವಾದಿಗಳೂ ಒಟ್ಟುಗೂಡಿ ಜೊಳ್ಳು ಹೊಳ್ಳುಗಳನ್ನು ಹೊರಗಚ್ಚುಮಾಡಿ ಗಟ್ಟಿಯನ್ನೇ ಬೇರ್ಪಡಿಸಿ ಸುಂದರ ಸಮಾಜ ನಿರ್ಮಾಣ ಮಾಡಬೇಕಾಯಿತು.

೧೨ ನೆಯ ಶತಮಾನದ ವಿಚಾರವಾದಿಯೂ, ವಿಜ್ಞಾನವಾದಿಯೂ, ರಾ ಜ ಕೀ ಯ ಧುರೀಣನೂ ಸತ್ಯತತ್ವಾರಾಧಕನೂ ಆದ ಬಸವಣ್ಣನವರ ಪರಿಶ್ರಮದ ಫಲವಾಗಿ ರೂಪುಗೊಂಡ ಶಿವಾನುಭವ ಮಂಟಪವು ಅನೇಕ ಸಮಸ್ಯಾಪರಿಹಾರಕ ಕಾರ್ಯಕ್ಕೆಗೊಂಡಿತು. ಚರ್ಚೆಗಳು ಹೃದಯವುಳ್ಳವರಿಂದ ಹಾರ್ದಿಕವಾಗಿ ನಡೆದು ಅತಿವ್ಯಾಪ್ತಿ ಅವ್ಯಾಪ್ತಿ ದೋಷಪರಿಹಾರಕಗಳಾದ ಶುದ್ಧ ಸತ್ಯತತ್ವಗಳು ೭೭೦ ಜನರಿಂದ ಹೊರಬಿದ್ದವು. ಈ ಶರಣರೆಲ್ಲ ಕಲ್ಯಾಣದಲ್ಲಿದ್ದರೂ ಭಾರತದ ಮೂಲೆ ಮೂಲೆಗಳಿಂದ ಅಲ್ಲಿಗೆ ಆಗಮಿಸಿ ಹಲವಾರು ಪಂಥ ರಾಷ್ಟ್ರಗಳನ್ನು ಪ್ರತಿನಿಧಿಸಿದಂತೆ ಇದ್ದರು.

ಇದರಂತೆಯೆ ಹಿಂದೆಂದೂ ನಡೆಯದೆಯಿಲ್ಲ. ಆದರೆ ಅವು ಈ ಮಾದರಿಯ ಕೂಟಗಳಲ್ಲ. ಬಹು ಪ್ರಾಚೀನ ಕಾಲದಿಂದಲೂ ಋಷ್ಯಾಶ್ರಮಗಳಲ್ಲಿ ಇದೇ ತರದ ತರ್ಕವಿತರ್ಕಗಳು ನಡೆದು ಭರತಖಂಡದ ಧರ್ಮ ತತ್ವ ಸ್ವರೂಪ ನಿರ್ಧಾರಕಗಳಾಗಿವೆ. ಒಂದೊಂದು ಋಷ್ಯಾಶ್ರಮವೂ ಒಂದೊಂದುಕೇಂದ್ರ. ಪ್ರತಿಯೊಬ್ಬ ಋಷಿಯೂ ತನ್ನ ಪ್ರೌಢ ಶಿಷ್ಯರೊಡನೆ ತರ್ಕವಿತರ್ಕ ಮಾಡಿ ಧರ್ಮಾಧರ್ಮ ಮಥನಮಾಡಿ ಶುದ್ಧತತ್ವ ನವನೀತದ ಉಂಡೆ ಕಟ್ಟಿದರು. ಅವೇ ಇಂದಿನ ಉಪನಿಷತ್ತುಗಳು. ಉಪನಿಷತ್ತುಗಳ ಆವಿರ್ಭಾವಕ್ಕೆ ಜ್ಞಾನವಾದಿಗಳಾದ ಋಷಿಗಳೇ ಕಾರಣರು. ವೇದಕಾಲದಿಂದಲೂ ಜನತೆಯಲ್ಲಿ ಬೆಳೆದುಬಂದು ಕರ್ಮಕೋಟಲೆಗಳ ಪರಂಪರೆಗಳನ್ನು ಮೂಢ ಧರ್ಮಗಳನ್ನು ಅಳಿಸಲು ಪಟ್ಟ ಪ್ರಯತ್ನವೇ ಇದು. ಒಮ್ಮೆ ಒಬ್ಬ ಋಷಿಯ ಹತ್ತಿರ ಶಿಷ್ಯನೊಬ್ಬನು ಬಂದು ಪ್ರಶ್ನೆ ಕೇಳುತ್ತಾನೆ. ಗಹನ ಪ್ರಶ್ನೆ ಅಷ್ಟೇ ಗಹನ ಉತ್ತರ "ಸ್ವಾಮಿ" ಪರಮ ತತ್ವದಲ್ಲಿ ಆತ್ಮನ ಪ್ರವೇಶವಾಗಿ ಅದ್ವೈತ ಭಾವವಳವಡ ಬೇಕಾದರೆ ಹೇಗೆ ಧರ್ಮ ತತ್ವಾಚರಣೆ ಮಾಡಬೇಕು? ಆಸ್ಥಿತಿ ಹೇಗೆ ಲಭ್ಯವಾಗುವುದು ? ಋಷಿ ಶಿಷ್ಯನ ಪ್ರಶ್ನೆಗೆ ಸಂತೋಷಗೊಂಡು ಹೇಳುತ್ತಾನೆ.

"ನಾಯಮಾತ್ಮಾ ಬಲಹೀನೇನ ಲಭ್ಯೋ। ನಚ ಪ್ರಮಾದಾತ್ ತಪಸೋವಾಪ್ಯಲಿಂಗಾತ್" "ಜಗತ್ತಿನಲ್ಲಿ ಯಾರಿಗೆ ಮನೋಬಲವಿಲ್ಲಲ್ಲವೋ, ಆತ್ಮಬಲವಿಲ್ಲವೋ ಆವನಿಗೆ ಅದ್ವೈತ ಭಾವವಳವಡುವುದಿಲ್ಲ. ಪ್ರಮಾದ ವಶದಿಂದ ಲಭ್ಯವಾಗುವ ಸ್ಥಿತಿಯಲ್ಲ ಅದು. ಲಕ್ಷ್ಯರಹಿತ ತಪಸ್ಸಿನಿಂದಲೂ ಸಾಧ್ಯವಿಲ್ಲ. ಮನೋಬಲದಿಂದ ಬೆಟ್ಟವನ್ನು ದಾರಿ ಬಿಡಿಸಬಹುದು. ಆದರೆ ಸಾಮಾನ್ಯ ಜನತೆಗೆ ಅದರಲ್ಲಿ ವಿಶ್ವಾಸವಿಲ್ಲ. ಮನೋಬಲಕ್ಕೆ ಪ್ರಬಲ ಶಕ್ತಿ ಬೇಕು ಆದಕ್ಕಾಗಿ ಲಿಂಗತಪಸ್ಸು ಪ್ರಾರಂಭವಾಗಬೇಕು. ಲಕ್ಷ್ಯ ರಹಿತ ತಪಸ್ಸಿನಿಂದ ಆ ಗುರಿಯನ್ನು ಸಾಧಿಸಲಿಕ್ಕೆ ಆಗುವುದಿಲ್ಲ" ಇತ್ಯಾದಿ ಇತ್ಯಾದಿಯಾಗಿ ಗುರುವು ಶಿಷ್ಯನಿಗೆ ಉತ್ತರಕೊಟ್ಟ.

### ......ಮನಸ್ಸಾಮರ್ಥ್ಯಬೇಕು......

ಯಾವದಕ್ಕೂ ಮನಸ್ಸು ಬೇಕು. ಅದರ ಪ್ರಬಲ ಶಕ್ತಿಯಿಂದ ಗುಡ್ಡವನ್ನು ದಾರಿಬಿಡಿಸಬಹುದು ಎಂದು ಹೇಳಿದ್ದಾಯಿತು. ಎಷ್ಟು ಜನ ಅದರ ಬಹುದೂರಕ್ಕೇರಬಲ್ಲ ಶಕ್ತಿಯ ಸದುಪಯೋಗಪಡಿಸಿಕೊಳ್ಳುತ್ತಾರೆ? ಆ ವಿಷಯದಲ್ಲಿ ಯಾರಿಗೆ ವಿಶ್ವಾಸವಿದೆ? ಎಲ್ಲರಿಗೂ ಅದು ಇದೆ. ದಿವ್ಯ ಶಕ್ತಿಯನ್ನು ಪಡೆಯಬಲ್ಲ ಆದರ ಸಾಮರ್ಥ್ಯದ ಆಕರ್ಷಣೆಯನ್ನು ಬಹುಜನರು ಅಳೆಯುವುದಿಲ್ಲ ಆಲೋಚನೆಯನ್ನೂ ಕೂಡ ಮಾಡುವುದಿಲ್ಲ. ಅದು ಅದ್ಭುತ ಸಾಮರ್ಥ್ಯವನ್ನು ಸಂಪಾದಿಸಿ ಪ್ರಕಟಿಸಬಲ್ಲುದು. ಇಂದಿನ ವೈಜ್ಞಾನಿಕ ಶಾಲೆಯ ಯಂತ್ರಗಳಿಂದಲೂ ಅದನ್ನೂ ಅಳೆಯಲಾಗುವುದಿಲ್ಲ. ಮನಶ್ಶಾಸ್ತ್ರಜ್ಞರು ಅದರ ಹಲ ಕೆಲವು ಸೂಕ್ಷ್ಮ ಸೂಕ್ಷ್ಮ ಚರ್ಯೆಗಳನ್ನು ಮಾತ್ರ ಬೈಲಿಗೆಶಬ್ದದ ಮೂಲಕ ಹೊರ ಎಳೆದಿದ್ದಾರೆ ಅಷ್ಟೇ. ಅದರ ಪೂರ್ಣ ಶಕ್ತಿ ಸಾಮರ್ಥ್ಯ ಸಂಕಲ್ಪ ವಿಕಲ್ಪಗಳ ಬಗೆಗೆ ಕಂಡು ಮುಗಿಸಿದ್ದಾರೆಂದು ಹೇಳಲಾಗುವುದಿಲ್ಲ. ಲೌಕಿಕ ವ್ಯವಹಾರದಲ್ಲಿ ಅದು ಹೇಗೆ ವ್ಯವಹರಿಸಬಲ್ಲದು; ಬೆಳವಣಿಗೆ ಹೇಗೆ ಮತ್ತು ಯಾವ ವಿಭಾವಾನುಭಾವ ಸಂಚಾರಿ ಭಾವಗಳನ್ನು ವ್ಯಕ್ತ ಪಡಿಸಬಲ್ಲದು ಎಂಬ ಬಗ್ಗೆಯೂ ಕೆಲವೊಂದು ಮೂಲಭೂತ ವಿಷಯ ಬೈಲಿಗೆಳೆದಿದ್ದಾರೆ. ಯೋಗ ಮಾರ್ಗದಲ್ಲಿ ಅದು ಹೇಗೆ ಮುಂದಿನ ಮೆಟ್ಟಲುಗಳ ಕವಾಟ ತೆರೆಯ ಬಲ್ಲದು ಅಲ್ಲಿ ಕಾಣುವ ಚಿತ್ರ ವಿಚಿತ್ರ ದೃಶ್ಯಗಳಾಗುವವು? ಇತ್ಯಾದಿಗಳ ಬಗ್ಗೆ ಅವರಿನ್ನೂ ಸಿದ್ಧಾಂತವನ್ನು ಪೂರ್ಣ ಬೈಲಿಗೆ ಹಾಕಿಲ್ಲ. ಹಾಗೆ ಸಿದ್ಧಾಂತ ಮಾಡಲು ಸ್ವಾನುಭಾವ ಸಂಪತ್ತಿ ಇದ್ದರೆ ಮಾತ್ರ ಸಾಧ್ಯ. ಪ್ರಭುದೇವ, ನಿಜಗುಣ, ಸರ್ಪ ಭೂಷಣರೇ ಮೊದಲಾದ ದಾರ್ಶನಿಕರು ಅದರ ಚರ್ಯೆಗಳನ್ನು ಬೈಲಿಗೆಳೆದಿದ್ದಾರೆ.

ಮನಸ್ಸಿನ ಸಾಮರ್ಥ್ಯದ ಶಿಕ್ಷಣಾಭಾವ ಎಲ್ಲಲ್ಲೂ ಇದೆ. ಆ ಮಾರ್ಗದಿಂದ ಜನತೆಯ ಅಭ್ಯಾಸ ಬಹು ದೂರ ದೂರ ತಿರೋಧಾನವಾಗುತ್ತಿದೆ. ಕೆಳಮಟ್ಟಕ್ಕೆ ಹರಿಯಹತ್ತಿದೆ. ಅದು ತನ್ನ ಸುತ್ತಲೂ ಕೋಪ ತಾಪಗಳ ಪ್ರಬಲ ಆವರಣವನ್ನು ಕಲ್ಪಿಸಿಕೊಂಡು ವಿರುದ್ಧ ಮಾರ್ಗದಲ್ಲಿ ಪ್ರವಹಿಸುತ್ತಿದೆ. ಆದ್ದರಿಂದಲೇ ತನ್ನ ಭವಿಷ್ಯದ ಉಜ್ವಲ ರಕ್ತಾರುಣ ಉಷ:ಕಾಲದ ಸುಂದರ ಪ್ರಕಾಶಕ್ಕೆ ಪ್ರತಿಯಾಗಿ ಕರಾಳ ಕಾರ್ಗತ್ತಲಿನ ಕಪ್ಪನ್ನು ಕಾಣುತ್ತಿದೆ. ಯೋಚಿಸಬಾರದುದನ್ನು ಯೋಚಿಸಿ ದುರ್ಬಲಗೊಳ್ಳುತ್ತಿದೆ. ಯೋಚಿಸಬೇಕಾದುದನ್ನೇ ಅದು ಯೋಚಿಸುತ್ತಿಲ್ಲ. ಇಂದಿನ ತಲೆಮಾರಿನಲ್ಲಂತೂ ಈ ವಿಚಾರದಲ್ಲಿ ಜನತೆ ತೀರ ಸತ್ವಹೀನವಾಗಿದೆ. ವೈಜ್ಞಾನಿಕ ಪ್ರಗತಿಸಾಧಿಸಿರಬಹುದು; ಜೀವನದ ಮಟ್ಟವನ್ನು ಹೆಚ್ಚಿಸಿಕೊಂಡಿರಬಹುದು. ಆದರೆ ಮನಸ್ಸಿನಮಟ್ಟ ಪಾತಾಳಕ್ಕಿಳಿದಿದೆ. ಆದುದರಿಂದ ಜಗತ್ತಿನ ಅನೇಕ ವಿಪ್ಲವಗಳೂ, ಅಶಾಂತಿಗಳೂ ದ್ವೇಷಗಳೂ ಪ್ರಭೂತಗೊಂಡು ಹೊಗೆಯಾಡುತ್ತಿವೆ. ಮನಸ್ಸು ಜ್ವಾಲಾಮುಖಿಯೂ ಆಗಬಹುದು ಅಮೃತ ರಸ ಬುಗ್ಗಿಯೂ ಆಗಬಹುದು. ನಾವು ದೇಹಬಲವನ್ನೂ, ಸೌಂದರ್ಯ ರಾಶಿಯನ್ನೂ ಪಡೆದಿರಬಹುದು ಮನಸ್ಸಿನಬಲವನ್ನೂ ಸೌಂದರ್ಯವನ್ನೂ ಕೃಶಗೊಳಿಸಿ ವಿರೂಪಮಾಡಿ ಬಿಸಾಡಿದ್ದೇವೆ. ತುಂಬು ಜೀವನಕ್ಕೆ ಇದು ಲಕ್ಷ್ಯವಲ್ಲ. ಪ್ರಗತಿಯ ಹೆಜ್ಜೆಯಲ್ಲ. ನಮ್ಮ ಪ್ರಗತಿ ಆಂತರೀಕವಾಗಿ ಹೊರಹೊಮ್ಮಿಲ್ಲ. ಕೇವಲ ಬುದ್ಧಿ ಶಕ್ತಿಯು ಅವಿಷ್ಕಾರವಾಗಿದೆ ಮಾತ್ರ. ಇಂಥ ಜೀವನದಲ್ಲಿ ದು:ಖವೇ ಹೆಚ್ಚು. ಕಾಲಾಂತರದಲ್ಲಿ ವಿನಾಶಕಾರಿ. ಹಾಗಾದರೆ ಈ ತಪ್ಪು ಯಾರದು? ನಮ್ಮದೆ? ಹಿಂದಿನ ಜನತೆಯದೆ? ಜನತೆ ಇಂದೇ ಈ ಗಳಿಗೆಯಲ್ಲೆ ಮನೋದೌರ್ಬಲ್ಯ ಹೊಂದಿಲ್ಲ. ತಲೆಮಾರಿನಿಂದ ತಲೆಮಾರಿಗೆ ಶಕ್ತಿಹೀನವಾಗಿದೆ. ತಂದೆಯಿಂದ ಮಗ, ಮಗನಿಂದ ಮೊಮ್ಮಗ, ಮೊಮ್ಮಗನಿಂದ ಮರಿಮಗ ಹೀಗೆ ಕಳೆದುಕೊಂಡು ಕಳೆದುಕೊಂಡು ಈಗ ತೀರಾ ಸತ್ವಹೀನವಾಗಿದೆಯೆನಬೇಕು. ಬುದ್ಧಿಯಿಂದಲೇ ಸುಖವನ್ನು ಪಡೆಯುತ್ತೇವಲ್ಲದೆ ಕಾಪಟ್ಯರಹಿತ ಮನಸ್ಸಿನಿಂದಲೂ ಶ್ರದ್ಧಾಭಕ್ತಿ ವಿಶ್ವಾಸಪೂರ್ಣ ನಡೆವಳಿಕೆಯಲ್ಲಿಯೂ ಸುಖವಿಲ್ಲವೆನ್ನುವ ಕಾಲವೀಗ ತಲೆದೋರುತ್ತಿದೆ. ಇದು ತಪ್ಪು. ನಾವು ಮಾಡುವ ಕರ್ತವ್ಯ ತಪ್ಪೆಂದು ಹೃದಯಕ್ಕೆ ಹೊಳೆದರೂ ಅಧಿಕಾರ ರಹಿತ ಮನಸ್ಸು ಹೃದಯವನ್ನು ತುಳಿದು ತುಳಿದು ಮುಂದೆ ಹೋಗುತ್ತಿದೆ.

ಇಂಥ ಕಾಲವಿಂದೇ ಬಂದಿದೆಯೆಂದು ತಿಳಿಯಬಾರದು. ಹಿಂದೆಷ್ಟೋ ಬಂದಿದೆ. ಪುರಾಣ ಚರಿತ್ರೆಗಳು ನಮಗೆ ಆ ಕಥೆ ತಿಳಿಸುತ್ತವೆ. ನಾವು ತಪ್ಪು ಮಾಡಿದ್ದಾಯಿತು. ಇನ್ನು ಮನೋವಿಕಾರಕ್ಕೊಳಗಾಗಿ ನಾಶಕ್ಕೆ ಬಾಗಿಲು ತೆರೆಯಬಾರದೆಂದು ಆ ಜನಾಂಗ ತಪ್ಪುಮಾಡುವದನ್ನು ನಿಲ್ಲಿಸುತ್ತ ಬಂದ ದೃಷ್ಟಾಂತ ನಮಗೆ ಕಾಣುತ್ತವೆ. ಹೀಗಾಗಲು ಸಮಾಜದ ತಪ್ಪಿರಬಹುದು, ವ್ಯಕ್ತಿಯ ಅಕಾಲ ಸ್ವಾತಂತ್ರ್ಯಾಭಿಲಾಷೆಯಿರಬಹುದು ರಾಜಕೀಯ ದೋಷವಿರಬಹುದು". ಏನೇಇರಲಿ. " ಮನಸ್ಸೆಂಬುದೊಂದು ಚಿಂತಾಮಣಿ ಎಂದೊಬ್ಬರು ಹೇಳಿದ್ದಾರೆ. ನಿಜಕ್ಕೂ ನಿಜ ಆ ಮಾತು. ಅದು ನಾವು ಚಿಂತಿಸಿದುದನ್ನು ಪೂರೈಸುತ್ತದೆ. ಬಸವಣ್ಣನೆಂದರೆ ಬಸವಣ್ಣ, ಪ್ರಭುವೆಂದರೆ ಪ್ರಭು. ಅಕ್ಕಮಹಾದೇವಿಯೆಂದರೆ ಅಕ್ಕ. ಅಥವಾ ರಾಮ ರಾವಣ ಕೌರವ, ಅಗಸ್ತ್ಯ ಯಾವ ಯಾವ ಪಾತ್ರಗಳನ್ನು ಕಟ್ಟಿಕೊಂಡು ಜಗಜ್ಜೀವನ ರಂಗಭೂಮಿಯಲ್ಲಿ ನಟಿಸಲು ಇಚ್ಛಿಸುತ್ತೇವೆಯೋ ಆ ವೇಷ ಭೂಷಣಗಳನ್ನು ನಮಗೀಯುತ್ತದೆ. ಲೋಕವೂ ಕೂಡ ನಮ್ಮ ಪಾತ್ರ ನಿರ್ವಹಣಾ ರೀತಿಯನ್ನು ನೋಡಿ ನಗುವುದೋ, ಬೈಯುವದೋ, ಸಂತೋಷ ಸಾಗರದಲ್ಲಿ ಮುಳುಗುವುದೋ ಒಂದು ಕರ್ತವ್ಯವನ್ನು ಮಾಡಿ ಮುಗಿಸಿ ಬಿಡುತ್ತದೆ. ಲೋಕದ ಜನಹೃದಯದಿಂದ ದೂರಕ್ಕೆ ನಾವು ಬಿಸಾಡಲ್ಪಡಬಹುದು, ಅಥವಾ ಮಣಿದೀಪದಂತೆ ಶಾಶ್ವತವಾಗಿ ಅಲ್ಲೇ ನೆಲೆಸಬಹುದು. ಆ ಚಿಂತಾಮಣಿಯ ಲಾಭ ಮಾಡಿಕೊಳ್ಳುವ ಭಾರ ನಮ್ಮ ಮೇಲೆ ಇದ್ದಹಾಗೆ.

ಮನಸ್ಸು ದುರ್ಬಲವಾದರೆ ನಮಗೆ ಪರವಸ್ತು ಪ್ರಾಪ್ತಿ ಹೇಗೆ? ಆ ಸೌಂದರ್ಯಸ್ವರೂಪ ಸಾಕ್ಷಾತ್ಕಾರವೆಂತು? ಮನೋಸಾಮರ್ಥ್ಯದ ಬಲದಿಂದಲೇ ದಿವ್ಯ ಸುಂದರ ವಸ್ತು ಪ್ರಕಾಶ ಗೋಚರವಾದೀತು; ಅದೇ ಮಹಾದ್ವಾರ ವಸ್ತುಸಿದ್ಧಿಗೆ. ಅದು ಬಹುದೂರ ಉತ್ತುಂಗ ಶೃಂಗವನ್ನೇರಿ ನಿಲ್ಲುವುದನ್ನು ಕಾಣುವವನಾರು? ನನ್ನಲ್ಲಿ ಮನಸ್ಸಿದೆ ನಾನು ಅದನ್ನು ಕೇಳುವುದೇನು? ಅಥವಾ ಚಿಂತಿಸುವುದೇನು? ಕೇವಲ ವೈಷಿಯಿಕ ಕಾಮನೆಗಳನ್ನೇ. ಹೀಗೆ ವೈಷಯಿಕ ಕಾಮನೆಗಳನ್ನು ಕೇಳುವುದೇ ಮನಸ್ಸಿನ ಪ್ರಧಾನ ಕಾರ್ಯವಾದಾಗ ಕೇವಲ ಪ್ರಕೃತಿ ಗುಣಕ್ಕೆ ಕಟ್ಟುಬಿದ್ದು ಅಲ್ಲಿಯೇ ಓಡಾಡುವುದು ಅಭ್ಯಾಸವಾಗಿ ಅಪ್ರಾಕೃತ ಸ್ಥಿತಿಯನ್ನು ಪಡೆಯಲಸಮರ್ಥವಾಗಿ ತಾನು ಸಾಧಿಸಬೇಕಾದ ಕಾರ್ಯದಿಂದ ದೂರಸಾಗಿ ಎಲ್ಲೆಲ್ಲೋ ನಿಂತುಬಿಡುತ್ತದೆ. ಸಾಮಾನ್ಯ ಮಟ್ಟದಲ್ಲಿ ಅಥವಾ ಕೆಳದರ್ಜೆಯಲ್ಲಿ ತನ್ನ ಎಲ್ಲ ಶಕ್ತಿ ಸಾಮರ್ಥ್ಯಗಳನ್ನೂ ವೆಚ್ಚಮಾಡಿ ತನ್ನನ್ನೇ ತಾನು ಜಜ್ಜಿಕೊಂಡು ಗಿಜಿ-ಗಿಜಿ ಗೊಳಿಸಿಕೊಂಡು ಸತ್ವಹೀನವಾಗಿ ಬಿಡುತ್ತದೆ. ಇದು ತಲೆಮಾರಿನಿಂದ ತಲೆಮಾರಿಗೆ ನಡೆದು ಬಂದ ಅಭ್ಯಾಸ. ಆದ್ದರಿಂದ ಮನಸ್ಸು ಇಂದೇ ನಷ್ಟವಾದುದೆಂದು ಹೇಳಿದರೂ ತಪ್ಪು. ಕೇವಲ ಹಂಬಲವೊಂದೇ ಅದರ ಕರ್ತವ್ಯವಾಗಿದೆ. ಕೋತಿಯ ಕೈಯಲ್ಲಿ ಚಿಂತಾರತ್ನ ಕೊಟ್ಟರೆ ಮೊದಲು ಅದರ ಬಣ್ಣಕ್ಕೆ ಮರುಳುಗೊಂಡು ಕಣ್ಣರಳಿಸಿ ಹೊರಳಿಸಿ ನೋಡುತ್ತದೆ. ಹಿಚುಕುತ್ತದೆ. ಬಾಯಿಯಲ್ಲಿ ಹಾಕಿ ರುಚಿನೋಡಿ ಕೊನೆಗೆ ಕಡಿಯುತ್ತದೆ ಏನುಮಾಡಿದರೂ ಆ ರತ್ನ ಬೇರೆ ಅದಕ್ಕೆ ಲಾಭಕೊಡದಿರಲು ಕೊನೆಗೆ ಬಿಸಾಡುತ್ತದೆ. ಅದರ ಇಂದ್ರಿಯಗಳಿಗೆ ಅದರಿಂದ ಯಾವ ಸುಖವೂ ಸಿಕ್ಕಲಿಲ್ಲ ಆದ್ದರಿಂದ ಉಪಯೋಗವಿಲ್ಲ ಇಷ್ಟೆ ಅದು ಯೋಚಿಸುವುದು. ಹಾಗೆಯೇ

ಜನಾಂಗ ಈಶದತ್ತ ಮನಸ್ಸೆಂಬ ಚಿಂತಾರತ್ನದ ಶಕ್ತಿಯರಿಯದೆ ಅದನ್ನು ಜಗಿ ಜಗಿದು ಬಿಸಾಕುತ್ತಿದ್ದೇವೆ. ಅದೊಂದು ಅನರ್ಘ್ಯ ಚಿಂತಾರತ್ನವೆಂದೂ ಅದರ ಲಾಭವನ್ನು ಹೇಗೆ ಪಡೆಯಬೇಕೆಂಬುದೂ ನಮಗೆ ಅರ್ಥವಾಗುತ್ತಿಲ್ಲ. ಅದರಿಂದ ಬೇಡಿ ಪಡೆಯಬೇಕಾದುದನ್ನು ಪಡೆಯಲಿಚ್ಛಿಸದೆ ಬೇಡಬಾರದುದನ್ನು ಬೇಡಿ ಕಾಲ ಪ್ರವಾಹದ ಸೆಳವಿಗೆ ಹರಿಯುತ್ತ ಹೊರಟಿದ್ದೇವೆ. ಕೊನೆಗೆ ಎಲ್ಲಿ ನುಚ್ಚು ನೂರಾಗುತ್ತೇವೋ ಆಗುತ್ತೇವೆ.

### "ಅದ್ಯರ ವಚನ ಪರುಷ"

ನಾವು ಹೆಜ್ಜೆಯನ್ನು ಎಲ್ಲಿ ಹೇಗೆ ಇಡಬೇಕೆಂಬುದನ್ನರಿಯದೆ ಇಡಬಾರದಲ್ಲಿ ಹೆಜ್ಜೆ ಇಟ್ಟು ಮುಗ್ಗರಿಸುತ್ತೇವೆ. ತಪ್ಪು ಹೆಜ್ಜೆಯಿಡುವುದನ್ನೇ ಅಭ್ಯಾಸಮಾಡಿ ಎಡವಿ ಬೀಳುತ್ತೇವೆ. ತಾಯಿಯ ಬೆರಳನ್ನಾದರೂ. ಹಿಡಿದು ನಡೆಯೋಣವೆಂದು ನಾವು ಇಚ್ಛೆಪಡುವುದಿಲ್ಲ ತಾಯಿಯಾದರೂ ತನ್ನ ಕೈಬೆರಳು ಹಿಡಿದ ಮಗುವನ್ನು ಬೀಳದಂತೆ ಎಚ್ಚರಿಕೆಯಿಂದ ನಡೆಯುವ ಅಬ್ಯಾಸ ಮಾಡಿಸುತ್ತಾಳೆ. ಕಲ್ಲು, ಮುಳ್ಳಿನ ನಿಮ್ನೋನ್ನತ ಪ್ರದೇಶ ಪರಿಚಯ ಮಾಡಿಸುತ್ತಾಳೆ. ನಡೆಯಬಾರದಾಗ ನಾನೇ ನಡೆಯುವೆನೆಂದು ಸ್ವಾತಂತ್ರವಹಿಸಿ ನಡೆದು ಬಿದ್ದು ಗಾಯ ಮಾಡಿಕೊಂಡು ಬೀಳುವ ಅಭ್ಯಾಸ ಮಾಡಿಕೊಂಡುಬಿಡುತ್ತೇವೆ.

ಮಹತ್ಮರಾಗಿ ನಮ್ಮ ಹಿಂದಿನ ಕಾಲದಲ್ಲಿ ಜೀವನ ಮಾಡಿಹೋದ ಅನಂತ ದಿವ್ಯ ಪುರುಷರು ಇದೇ ಭೂಮಿಯಲ್ಲಿ ಇದೇ ಗಾಳಿಯನ್ನು ಕುಡಿದು ತಮ್ಮ ತೇಜೋಮಯ ಶರೀರವನ್ನು ಬಿಟ್ಟು ಹೋಗಿದ್ದಾರೆ. ಅವರು ಹೇಗೆ ನಡೆದರು,? ಏನು ನುಡಿದರು? ಯಾವ ಯಾವ ಅಪಾಯಸ್ಥಾನವನ್ನು ಈ ಜೀವನ ನದಿಯಲ್ಲಿ ಗುರುತಿಸಿದರು ನಾವು ಹೇಗೆ ಈಸಬಹುದು ಜೈಸಬಹುದು? ಆ ಕಲ್ಪನೆಯನ್ನೂ ನಾವು ಮನಸ್ಸಿನಲ್ಲಿ ಆಳವಾಗಿ ಯೋಚಿಸುವುದಿಲ್ಲ. ಅವರ ದಿವ್ಯ ವಚನ ಸ್ಪರ್ಶಶಿಲೆಯಂತೆ ಎಂಬುದನ್ನು ನಾವು ಅರಿಯೆವು. ಅವರು ಇಲ್ಲಿ ಹುಟ್ಟಿ ಸತ್ತರೂ ಸಾಯುವ ವಿಧಾನವನ್ನರಿತು ಸತ್ತವರು. ಅವರ ಜೀವನವನ್ನು ಒಳಹೊಕ್ಕು ನೋಡಿದರೆ ಅವರೂ ನಮ್ಮಂತೆಯೇ ಮನಸ್ಸಿನ ಅನಂತ ಜಂಜಡಕ್ಕೆ ಸಿಕ್ಕುಬಿದ್ದು ಅದರಿಂದ ಯಾವುದನ್ನು ಬೇಡಿ ಪಡೆಯಬೇಕೊ ಅದನ್ನು ಬೇಡಿಪಡೆದು ಮಹತ್ಮರಾದರೆಂಬುದನ್ನು ಅರಿಯಬೇಕು. ಮನಸ್ಸು ಪ್ರಕೃತಿಯತ್ತ ಹರಿಸಿಕೊಂಡು ಹೋಗಿ ನುಚ್ಚುನೂರು ಮಾಡಲು ಯತ್ನಿಸಿದೆ. ಆದರೆ ಅವರು ಅದರ ಕಟ್ಟಿಗೆ ಬಿದ್ದು ಸೋಲದೆ ಅದನ್ನೆದುರಿಸಿ ಹೋರಾಟ ಮಾಡಿ ಗೆದ್ದು ಜಯಭೇರಿಯನ್ನು ಮೊಳಗಿಸಿದರು. ಅದನ್ನು ಪಾತಾಳಕ್ಕಿಳಿಯದಂತೆ ಅವರು ವಹಿಸಿದ ಶ್ರದ್ದೆ ಅವರ ಮಾತಿನಿಂದಲೇ ತಿಳಿಯುತ್ತದೆ. ಭವ್ಯನಾದ ಪರಮಾತ್ಮನ ತತ್ವಜ್ಞಾನದ ಗರಡಿಗಿಳಿದು ಸಾಧಿಸಿ ಸಾಧಿಸಿ ಪ್ರಾಕೃತಕ್ಕೆ ಅಪ್ರಾಕೃತಸ್ಥಿತಿಯ ಸುಂದರ ಬಣ್ಣ ಹಚ್ಚಿ ಆ ಸೌಂದರ್ಯದಲ್ಲಿಯೇ ನಿಬ್ಬೆರಗುಗೊಂಡಿದ್ದಾರೆ. ಇಂದು ನಾವು ಅವರನ್ನು ಪೂಜೆಮಾಡುತ್ತೇವೆ ಅಷ್ಟೆ. ಅಥವಾ ಶಿವನೋ ವೃಷಭನೋ ಅಥವಾ ಷಣ್ಮುಖನೋ ಯಾವುದಾದರೊಬ್ಬ ಪೌರಾಣಿಕ ವ್ಯಕ್ತಿಯ ಅವತಾರವೆಂಬ ಹೆಸರಿಟ್ಟು ಅವರೆಲ್ಲ ದಿವ್ಯ ಪುರುಷರಾದ್ದರಿಂದ ಭೂಮಿಯಲ್ಲಿ ಧರ್ಮಗ್ಲಾನಿಯಾದಾಗ ಕಾಲಕಾಲಕ್ಕೆ ಹುಟ್ಟುತ್ತಾರೆ. ಹಾಗೆ ಹೀಗೆ ಎನ್ನುತ್ತ ಹಲ ಕೆಲವು ಗ್ರಂಥಗಳ ಕಂಠ ಪಾಠ ಮಾಡಿದ ಶ್ಲೋಕಗಳನ್ನು ಹೇಳಿ ಲಕ್ಷಣವಾಗಿ ಕುಳಿತು ಬಿಡುತ್ತೇವೆ. ಇದೂ ಒಂದು ಅನುಚಿತ ನಮಗೆ. ನಾವೂ ಕೂಡ ಶಿವಾಂಶ ಸಂಭೂತರೇ ಶಿವನ ಇಚ್ಛೆಯಿಲ್ಲದೆ ನಾವು ಒಂದರಗಳಿಗೆ ಕೂಡ ಬಾಳಲಾಗುವುದಿಲ್ಲ, ಎಂಬುದು ಗೊತ್ತಿದ್ದರೂ ಮಾಯೆ ಮರಸಿ ಬಿಡುತ್ತದೆ. ಈ ದುರ್ಬಲತೆಯಿಂದಾಗಿ ನಾವು ಅದರ ತಂಟೆಗೆ ಹೋಗದೆ ವೈಷಯಿಕ ಕಾಮನಾ ಪರಂಪರೆಗಳನ್ನೇ ಸುರಿ! ಸುರಿ!! ಇನ್ನಷ್ಟು ಸುರಿ!!! ಎಂಬ ಮಂತ್ರವನ್ನೇ ಪಠಿಸುತ್ತೇವೆ. ಹೀಗಾಗಬಾರದು ಮನಸ್ಸಿನೊಡನೆ ಹೋರಾಟಬೇಕು. ಬಸವಣ್ಣನವರು ಅದರೊಡನೆ ಹೇಗೆ ಹೋರಾಡಿದ್ದಾರೆಂಬುದನ್ನು ಅವರ ವಚನಗಳಿಂದ ತಿಳಿಯಬಹುದಾಗಿದೆ.

"ಮನವೇ, ನಿನ್ನ ಜನ್ಮದ ಪರಿಭವವ ಮರೆದೆಯಲ್ಲಿ ಮನವೇ,
ಲಿಂಗವ ನಂಬು ಕಂಡಾ ಮನವೇ, ಜಂಗಮವ ನಂಬು ಕಂಡಾಮನವೆ,
ಕೂಡಲ ಸಂಗಮದೇವರ ಬಿಡದೆ ಬೆಂಬತ್ತು ಕಂಡಾಮನವೆ,"



—

ತೀವ್ರಾಪರಾಧವೆಸಗಿದ ಮಗನ ವಿಷಯದಲ್ಲಿ ಮರುಕಗೊಂಡು ತಾಯಿ ಬೋಳೈಸುವ ದುಃಖ ಸಂಕಟದ ಮರ್ಮರತೆಯ ಧ್ವನಿಯಿದೆ, ಮನಸ್ಸಿಗೆ ಬಸವಣ್ಣ ಹೇಳುವ ನುಡಿಯಲ್ಲಿ.

" ಸುರರ ಬೇಡಿದೊಡಿಲ್ಲ ; ನರರ ಬೇಡಿದೊಡಿಲ್ಲ;
ಬರಿದೆ ಧೃತಿಗೆಡಬೇಡಮನವೆ,
ಆರನಾದರೆಯೂ ಬೇಡಿ ಬೇಡಿ ಬರಿದೆ ಧೃತಿಗೆಡ ಬೇಡಮನವೇ,
ಕೂಡಲಸಂಗಮದೇವನನ್ನಲ್ಲದೆ ಆರ ಬೇಡಿದರೆಯೂ ಇಲ್ಲ ಮನವೆ,"

ಲೋಕವೃತ್ತದಲ್ಲಿ ಅಧೈರ್ಯಗೊಂಡ ಧೀರ ಮಗನೊಬ್ಬನನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು ತಂದೆ ಹಲವಾರು ಧೈರ್ಯೋಕ್ತಿಗಳನ್ನು ತಲೆಯಮೇಲೆ ಕೈಯಾಡಿ ವಾತ್ಸಲ್ಯ ಪರಂಪರೆ ಸುರಿಸಿ ಹೇಳಿ ಸಮಾಧಾನಗೊಳಿಸುವಂತಿದೆ. ಹೀಗೆಯೆ—

" ಆಡಿಅಳುಪದಿರಾ; ಲೇಸಮಾಡಿ ಮರುಗದಿರಾ ಎಲೆಮನವೆ,
ಕಬ್ಬು'ತಿಂದ ನರಿಯಂತೆ ಹಿಂದಕ್ಕೆ ಹಿಂದಕ್ಕೆ ಎಳಸದಿರಾ ಮನವೆ,
ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ ಮನವೆ,
ಕೂಡಲ ಸಂಗನ ಶರಣರನ್ನು ಕಂಡು ಲಿಂಗವೆಂದೇನಂಬು ಮನವೆ,

ಇಂಥ ನೂರಾರು ವಚನಗಳಿಂದ ಅವರು ತಮ್ಮ ಪ್ರಾಕೃತ ಮನಸ್ಸಿನೊಡನೆ ಹೇಗೆ ಹೋರಾಟ ಮಾಡಿದ್ದಾರೆಂಬಂಶ ಗೋಚರವಾಗುತ್ತದೆ. ಹುಚ್ಚೆದ್ದು ಕುಣಿಯುವ ಅದಕ್ಕೆ ಮೆಲ್ಲನೆ ಮುದ್ದು ನುಡಿಗಲಿಸಿ ಶಿವ ಶಿವ ಎಂದು ಓದಿಸಿ ಅಭ್ಯಾಸಗೊಳಿಸಿದ್ದಾರೆ. ಹುರಿಗೊಳಿಸಿದ್ದಾರೆ. ಅದು ಪ್ರಕೃತಿಯತ್ತ ಜಾರುವ ರೀತಿಯನ್ನು ವಿಶೇಷ ಸಾಧನಾಸಂಸ್ಕಾರ ಬಲದಿಂದ ಎಚ್ಚತ್ತು ಸಾವಧಾನವಾಗಿ ಶಿವನ ಕಡೆಗೆ ತಿರುಗಿಸಿದ ಕರಣಾ ಜನಕವಾದ ಹಂಬಲದನುಡಿ ಅಯ್ಯೋಪಾಪ! ಎನ್ನಿಸುತ್ತದೆ. ಅದರ ಪ್ರಾಪಂಚಿಕ ಮಾರ್ಗದತ್ತ ಮಿಥ್ಯಾಕಾಮನೆಗಳತ್ತ ಓಡುವ ಓಟವನ್ನು ಯಾವ ರಾಜಮಾರ್ಗದಲ್ಲಿ ಓಡಿಸಿದ್ದಾರೆ? ನಿಸರ್ಗಸತ್ಯದತ್ತ. ಜಗತ್ತಿನ ಸಾಮಾನ್ಯ ಹೊರಾಟವೆಲ್ಲ ಆಸೆ ಅಂಜಿಕೆಗಳಲ್ಲಿ ಸಾಗುತ್ತದೆ ಆಶೆ ಅಂಜಿಕೆ ಎರಡೂ ಮನಸ್ಸಿನಿಂದ ತೊಲಗಬೇಕು. "ಲೋಕದ ಚೇಷ್ಟೆಗೆ ರವಿಯು ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ" ಅದು ಓಡಿದತ್ತ ಇಂದ್ರಿಯಗಳು ಓಟಕೊಡುತ್ತವೆ. ಹಾಗಾಗಬಾರದು ಅದು ಸ್ವರ್ಗೀಯ ಚಿಂತಾರತ್ನವಾಗಬೇಕೆಂದು ಶಿವಶರಣರು ಯತ್ನಿಸಿ ಯತ್ನಿಸಿ ಹೊರಾಡಿ ಪಡೆದಿದ್ದಾರೆ. ಬಸವಣ್ಣನವರ ಇನ್ನೂ ಕೆಲವು ಮಾತು ಕೇಳಿ.

"ಒಡೆಯನ ಕಂಡು ಕಳ್ನಾಗದಿರಾ ಮನವೆ....," "ಅಹಂಕಾರಿಯಾಗದೆ ಶರಣೆನ್ನು ಮನವೆ,"...."ಕಿಂಕಿಲನಾಗಿ ಬದುಕುಮನವೆ...., "ಏನಿದ್ದರೇನಿದ್ದರೊಲ್ಲದು ನಿಮ್ಮನುಭಾವಕ್ಕೆ ಮನವು...." "ಮನದ ಕೋಪ ಅರುಹಿಗೆ ಹಾನಿ....," " ಕೆಲಕ್ಕೆ ಶುದ್ಧನಾದೆನಲ್ಲದೆ ಮನಕ್ಕೆ ಶುದ್ಧನಾಗೆನಯ್ಯ ...," "ಮನಮುಟ್ಟಿ ಪೂಜಿಸುವೊಡೆ ಎನ್ನಮನಸ್ಸು ಶುದ್ಧವಲ್ಲವಯ್ಯ...." "ಬೆಂದ ಮನವ ನಾನೆಂತು ನಂಬುವೆನಯ್ಯ ...," ಲೇಸ ಕಂಡು ಮನಬಯಸಿ ಆಸೆಮಾಡಿದಡಿಲ್ಲ ಕಂಡಯ್ಯ....," "ಅಂದಣವನೇರಿದ ಸೊಣಗನಂತೆ ಕಂಡಡೆ ಬಿಡದು ಮುನ್ನಿನ ಸ್ವಭಾವವನ್ನು; ಸುಡು ಸುಡು ಮನವಿದು ವಿಷಯಕ್ಕೆ ಹರಿಯುವದು. ಮೃಡ ನಿಮ್ಮ ನನುದಿನ ನೆನೆಯಲೀಯದು"

ಇದರಂತೆಯೆ ಎಲ್ಲ ಶರಣರ ನುಡಿಯಲ್ಲೂ ಮನಸ್ಸಿನ ಕೋಟಲೆಯಿಂದ ಮುಕ್ತರಾದ ಸ್ಥಿತಿಯರಿಯಬಹುದು. ದೇವಾವತಾರದ ಆವರಣವನ್ನು ನಾವು ಮುಚ್ಚಿದಾಗ ಅವರ ಈ ಸಾಧನೆಯೂ ಮುಚ್ಚಿಹೋಗುತ್ತದೆ. ನಾವು ಚಿಕ್ಕವರಾದರೂ ನಮ್ಮ ಮನಸ್ಸಿನ

ಯೋಚನ್ನೆಯನ್ನೆಯನೆಲ್ಲ ಮುಚ್ಚಿಹಾಕುತ್ತೇವೆ. ಅವರು ಹೊರಗೆಳೆದು ಉದ್ಘಾಟಿಸುತ್ತಾರೆ. ಶರಣರು ನಿರಭಿಮಾನಿಗಳು. ಬಸವಣ್ಣನವರಂತೂ ಪೂರ್ಣ ಹಣ್ಣಾದ ವ್ಯಕ್ತಿಯಾಗಿಯೇ ಕಾಣುತ್ತಾರೆ. ಅವರ ವಚನಾಭ್ಯಾಸದಿಂದ ಅವರು ಯಾವ ಒಂದು ತಪ್ಪನ್ನೂ ಮುಚ್ಚಿಟ್ಟುಕೊಂಡವರಲ್ಲ. ತಮ್ಮ ಕಡ್ಡಿಯಷ್ಟು ತಪ್ಪನ್ನು ಗುಡ್ಡಮಾಡಿ ಹೊರಗೆಹಾಗಿ ಈಶ್ವರ ಕಾರುಣ್ಯಕ್ಕೆ ಪಕ್ವಾದ ವ್ಯಕ್ತಿ. ಬೆಳೆದು ಬಂದಿರುವ ಯಾವ ಭಾಷೆಯಿಂದಲೂ ಬಸವಣ್ಣನ ಪೂರ್ಣ ವ್ಯಕ್ತಿತ್ವ ವ್ಯಕ್ತಪಡಿಸಲು ಸಾಧ್ಯವಿಲ್ಲವೆಂದು ನನ್ನ ಭಾವನೆ.

ಕಣ್ಣಿಗೆ ಕಾಣುವುದನ್ನೆಲ್ಲ ಪಡೆಯಲು ಮನಸ್ಸು ತವಕಪಡುತ್ತದೆ. ಅದಕ್ಕೆ ಕೊನೆಯಿಲ್ಲ. ವಿಶ್ರಾಂತಿಯೂ ಇಲ್ಲ. ಮಲಗಿದರೂ ಬಿಡುವುದಿಲ್ಲ. ಆಗೂ ಏನನ್ನೋ ಪಡೆಯುತ್ತಲೇ ಇರುತ್ತದೆ. ಬಡತನಕ್ಕೆ ಉಂಬುವ ಚಿಂತೆಯಾಗುತ್ತದೆ. ಊಟ ಮಾಡಿದರೆ ನಿಂತೀತೇ? ಉಡುವ ಚಿಂತೆ ಬಲವಾಗುತ್ತದೆ. ಅದೂ ಆಯಿತೆನ್ನಿ. ಆಗ ಇಡುವ ಚಿಂತೆ ಗಂಟುಬೀಳುತ್ತದೆ. ಇಡಲಾದರೆ ಹೆಂಡತಿಯ ಚಿಂತೆ. ಹೆಂಡತಿಯಾದೊಡನೆ ಪುನಃ ಮಕ್ಕಳು, ಮಕ್ಕಳಾದ ಮೇಲೆ ಬದುಕು. ಬದುಕೂ ಆಯಿತು ಅನಂತರ?.... ಹಾಗೆ ಹೋಗುತ್ತಿರುತ್ತದೆ ಸನ್ಯಾಸಿಯ ಸಂಸಾರದಂತೆ. ಕೊನೆಗೆಲ್ಲವೂ ಬೇಡವಾಗಿ ಎಲ್ಲ ಶಕ್ತಿಯನ್ನು ಕಳೆದುಕೊಂಡು ಸತ್ತರೆ ಸಾಕೆಂದು ಚಿಂತಿಸಿ ಸತ್ತೇಹೋಗುತ್ತದೆ. ಇದೆಯೇನು ಮಹಾ ಜ್ಞಾನ ಪಡೆಯಲು ಮನುಷ್ಯ ಶರೀರ ಪಡೆದು ಬಂದದಕ್ಕೆ ಮೂಲ್ಯ? ಇಂಥ ಜೀವನ ಮೂಲ್ಯ ತರುವುದಿಲ್ಲ. ಒಲಿಯುವ ಗಂಡನೇ ಕೊಲಿಯುತ್ತಿಲ್ಲ? ತಪ್ಪು ನನ್ನದು ಆತ ಎಡಪಾದದಿಂದೊದ್ದರೆ ಬಲದ ಪಾದ ಹಿಡಿಯುತ್ತಿಲ್ಲ. ತ್ರಾಹಿ! ತ್ರಾಹಿ!! ತಪ್ಪೆನ್ನದು ಕ್ಷಮೆ ನಿಮ್ಮದು ನಿಮ್ಮ ಕರುಣದ ಕಂದ ನಾನು ಎನ್ನುವಷ್ಟು ಮುಂದೆ ಹೋಗುವದಿಲ್ಲ. ಭೋಗೋನ್ಮಾದ ನಮ್ಮನ್ನು ದೇವನಲ್ಲೂ ಮೊರೆ ಬೇಡಲು ಮುಂದೆ ಬಿಡದಷ್ಟು ಮದಗೊಳಿಸಿಬಿಡುತ್ತದೆ. ಲೋಕ ಚರಿತ್ರೆ ತ್ರೈಗುಣ್ಯೋದ್ಭವವಾದುದು. ತ್ರಿಗುಣಗಳ ಒಡನಾಟವಿರುವವರೆಗೂ, ಮನಸ್ಸು ಹದಕ್ಕೆ ಬರುವದಿಲ್ಲ. ಅದನ್ನು ಕ್ರಮೇಣ ಕಳೆಯುತ್ತ ಕಳೆಯುತ್ತ ಹೋರಾಟ ನಡೆಯಿಸಿ ಶರಣ ಜಯಿಸಿ ನಿಲ್ಲುತ್ತಾನೆ. ಆಗಲೇ ಮನಸ್ಸು ಸ್ವರ್ಗೀಯ ಚಿಂತಾರತ್ನ.

### — ತಪಸ್ಸು ಬೇಕು —

ಯಾವಾತನಿಗೆ ಅಂಥ ಚಿಂತಾರತ್ನರೂಪ ಮನಸ್ಸಿನ ಲಾಭವನ್ನು ಪೂರ್ಣ ಮಾಡಿಕೊಳ್ಳಬೇಕೆಂಬಾಸೆಯಿದೆಯೋ ಆತನಿಗೆ ತಪಸ್ಸುಬೇಕು. ಯಾವುದು ದುರ್ಗಮವೂ, ದುರಾಪವೂ, ದುಸ್ತರವೂ ಎಂದು ನಾವು ತಿಳಿದಿಹೆವೋ ಅದೆಲ್ಲವೂ ತಪಸ್ಸಿನಿಂದ ಕರಗತವಾಗುವುದು. ನಾವು ಮಾಡುವ ದುಡಿಮೆಯೂ ತಪಸ್ಸೆ ಆಗಬೇಕು. ಯಾರು ಯಾವ ಕಾಯಕ ಮಾಡಿದರೂ, ಅದು ತಪಸ್ಸೆನಿಸಿಕೊಳ್ಳುವಷ್ಟು ಯೋಗ್ಯತೆಯನ್ನು ಪಡೆಯಬೇಕು- ಕಾಯಕ ತಪಸ್ಸಾಗಬೇಕು; ತಪಸ್ಸು ಕಾಯಕವಾಗಬೇಕು. ಎಡಬಿಡದೆ ಇವೆರಡೂ ಶಿವನನ್ನು ಅನುಸರಿಸಿ ನಡೆದಿರಬೇಕು. ಇಂದ್ರಿಯಭೋಗವನ್ನು ತಿರಸ್ಕರಿಸುವ ಅವಶ್ಯಕತೆಯೂ ಇಲ್ಲ. ಆದರೆ ಜೀವನೋದ್ದೇಶದ ಮೂಲ ಭೂತ ತತ್ವದಿಂದ ಅಪ್ರಮತ್ತನಾಗದಂತೆ ನೋಡಿಕೊಳ್ಳಬೇಕು. ಜೀವನಿಗೆ ಭೋಗ ಪ್ರವೃತ್ತಿಯುಂಟು ನಿಜ. ಆದರೆ ಅದರ ಸಾರ್ಥಕತೆಗೆ ಮೂಲನಾದ ಈಶ್ವರನೊಡನೆ ಸಮರಸಗೊಳ್ಳುವ ದುಡಿಮೆಬೇಕು. ಅದೇ ನಾವು ಸಾಧಿಸಬೇಕಾದ ತಪಸ್ಸು ನಾವು ದುಡಿಯುವ ದುಡಿಮೆ ತಪಸ್ಸಾಗದಿದ್ದರೆ, ಆತ್ಮನಿಧಿಯ ಸಂಪಾದನೆಯಲ್ಲಿ? ಎಷ್ಟೇ ಐಶ್ವರ್ಯವಿದ್ದರೂ ಈ ದೃಷ್ಟಿಯಿಂದ ನಾವು ತೀರಾದಟ್ಟದರಿದ್ರರೇ ಸರಿ. ತಪಸ್ವಿಯಾಗಬೇಕು. ದೇಹ ದಂಡಿಸಬೇಕು. ಇಂದ್ರಿಯಗಳನ್ನು ಹತೋಟಿಗೆ ತರಬೇಕು. ದೇಹವನ್ನು ದಂಡಿಸದೆ ಕರಣವನ್ನು ಖಂಡಿಸದೆ ತಪಸ್ಸೆಂಬುದು ಸಾಧ್ಯವಿಲ್ಲ. ‘‘ಕಡುದರ್ಪವೇರಿದ ಒಡಲೆಂಬ ಬಂಡಿಗೆ’’ ಕಡೆಗೀಲು ಇರಲಿ. ಅನುಭವಿಗಳು ಅಂತಃಕರಣದಿಂದ ನುಡಿದ ನುಡಿಯಲ್ಲಿ ಶ್ರದ್ಧೆ ಬಲಿತರೆ ಅವು ನಮ್ಮನ್ನು ಆ ಮಾರ್ಗದಲ್ಲಿ ಒಯ್ದು ನಿಲ್ಲಿಸುತ್ತವೆ. ತಪಶ್ಯಬ್ದ ಪ್ರಯೋಗಿಸಿದೊಡನೆ ಜನಕ್ಕೆ ಭಯ. ಪುರಾಣಗಳಲ್ಲಿ ಚಿತ್ರಿಸಿರುವ ಕೆಲವು ಋಷಿಗಳ ತಪಸ್ಸಿನ ಚಿತ್ರವನ್ನು ನೆನೆದು ಅದು ಎಲ್ಲರಿಗೂ ಸಾಧ್ಯವಿಲ್ಲವೆಂದು ಹೆದರಿ ಸಮ್ಮನಾಗಿ



ಬಿಡುವುದುಂಟು ಅದಲ್ಲ ನಾನು ಹೇಳುವ ತಪಸ್ಸೆಂಬುದು. ನಡೆಯಲ್ಲಿ, ನುಡಿಯಲ್ಲಿ, ನೋಟದಲ್ಲಿ, ಕೂಟ ಮಾಟದಲ್ಲಿ ತಪಸ್ಸಾಧನೆಯುಂಟು. ಅದನ್ನು ಬಿಡಬಾರದು ದನ್ನು ಬಿಟ್ಟು ಮಾಡಬಾರದು. ಆಹಾರಾದಿಗಳನ್ನು ಬಿಟ್ಟು ದೇಹವನ್ನು ದಣಿಸಿಯೂ ದಣಿಸಿಯೂ ಮಾಡಿ ಫಲವಿಲ್ಲ. ದೇಹ ಶುದ್ಧಿಗಾಗಿ ಬೇಕಾದರೆ ಆಹಾರ ಬಿಡಬಹುದು; ದೇವರಿಗಾಗಿ ಅಲ್ಲ. ತೆಗೆದು ಕೊಳ್ಳಬೇಕಾದುದನ್ನು ತೆಗೆದುಕೊ, ಪ್ರಸಾದಬಿಟ್ಟು ತಪಸ್ಸಾಚರಿಸಬೇಕೆಂಬುದು ತಪ್ಪು. ಓರ್ವ ಋಷಿಯನ್ನೊಮ್ಮೆ ಒಬ್ಬನು ಬಂದು ಕೇಳಿದನಂತೆ “ ಸ್ವಾಮಿ, ಯಾವಾಗ ತಪಸ್ಸು ಮಾಡಬೇಕು ” ಎಂದು ಅವನು “ತಪೋನಾಮ ಅಶನಾತ್ಪರಂ” ಎಂದನಂತೆ. ನೀನು ಊಟಮಾಡಿ ಪುನಃ ಊಟಮಾಡುವವರೆಗೆ ತಪಸ್ಸು ಮಾಡು. ಅದಕ್ಕಾಗಿ ಮನೆ ಮಠ ಬಿಡಬೇಡ. ಹೆಂಡಿರು ಮಕ್ಕಳನ್ನೂ ಬಿಡಬೇಡ. ಅವರೊಡನಿದ್ದು ತಪಸ್ಸುಮಾಡು. ತೀರ್ಥದಲ್ಲಿ ಪಾಪತೊಳೆದುಕೋ. ಅಲ್ಲಿ ಸ್ನಾನ ಮಾಡಿದಮೇಲೆ ವಿಲಕ್ಷಣ ಶಕ್ತಿಪಡೆ. ಭಾವಶುದ್ಧಿಯಿಲ್ಲದೆ ಸ್ನಾನಮಾಡಬೇಕಾದುದಿಲ್ಲ. ಇತ್ಯಾದಿ ಇತ್ಯಾದಿ ಹೇಳಿದನಂತೆ ಹೀಗೆ ಸಾಧನೆ ಬೆಲೆಗೊಂಡು ನಿಲವು ಕಂಡಾಗ ಮನಸ್ಸಿಗೆ ಪ್ರಬಲ ಶಕ್ತಿ ಬರುವುದು. ಆದ್ವೈತ ತತ್ವ ನೆಲೆಗೊಳ್ಳಬೇಕಾದರೆ ಮನಸ್ಸಿಗೆ ಪ್ರಬಲ ಶಕ್ತಿ ಬರಬೇಕು. ಉಪವಾಸದಿಂದ ತೀರ್ಥಕ್ಷೇತ್ರ ದರ್ಶನದಿಂದ ಹಿಂಡು ಹಿಂಡು ಧರ್ಮ ಗಂಥಗಳಿಂದ ಅದು ಅಳವಡದು. ತೀರ್ಥವೆಂಬುದು ಹರಿಯುವ ನೀರು. ಶರಣನಾದ ಸರ್ವಜ್ಞ ಕವಿ ಕೆಲವು ತೀರ್ಥ ಹೇಳಿದ್ದಾನೆ.

> ‘‘ ಸತ್ಯರಾನುಡಿ ತೀರ್ಥ ನಿತ್ಯರಾನಡೆ ತೀರ್ಥ ।
> ಉತ್ತಮರ ಸಂಗವದು ತೀರ್ಥ। ಹರಿವ ನೀ–।
> ರೆತ್ತಣದು ತೀರ್ಥ ಸರ್ವಜ್ಞ ”॥

ಶಂಕರಾಚಾರ್ಯರು ಸ್ವಮನೋ ಶುದ್ಧಿಯೇ ತೀರ್ಥವೆಂದಿದ್ದಾರೆ. ಭೀಷ್ಮರು ಶರಶಯ್ಯೆಯಲ್ಲಿದ್ದಾಗ ಧರ್ಮರಾಯನು ನೋಡಲಿಕ್ಕೆ ಹೋಗಿದ್ದಾನೆ. ಆಗ ಭೀಷ್ಮರು ಆತನಿಗೆ ಧರ್ಮಬೋಧೆ ಮಾಡುತ್ತಾರೆ. ಭರತ ಖಂಡದಲ್ಲಿ ತೀರ್ಥಗಳೆಷ್ಟೆಂದು ಕೇಳಿದ ಧರ್ಮರಾಯನ ಪ್ರಶ್ನೆಗೆ ೬೮ ತೀರ್ಥಗಳ ವರ್ಣನೆಯನ್ನು ವಿಸ್ತಾರವಾಗಿ ವಿವರಿಸುತ್ತಾರೆ. ಆಗ ಧರ್ಮರಾಯನು “ಅವುಗಳಲ್ಲಿ ಶ್ರೇಷ್ಠವಾದಗಳಾವು” ಎಂದು ಕೇಳುವನು. ಆಗ ಭೀಷ್ಮರು ‘‘ಧರ್ಮರಾಯ, ಕೇಳು ಐದು ಮಾತ್ರ ತೀರ್ಥಗಳು ಶ್ರೇಷ್ಠವಾದುವು; ಇದುವರೆಗೆ ನಾನು ವಿವರಿಸಿದ ೬೮ ತೀರ್ಥಗಳಲ್ಲಿ ಇವು ಇಲ್ಲ. ತಪಸ್ತೀರ್ಥಂ, ದಯಾತೀರ್ಥಂ, ಶೀಲಸ್ತೀಥಂ, ಶಾಂತಿಸ್ತೀರ್ಥಂ, ದಾಂತಿಸ್ತೀರ್ಥಂ ಈ ಐದು ತೀರ್ಥಗಳಲ್ಲಿ ಸ್ನಾನಮಾಡುವವನ ಮನೋಬಲ ಹೆಚ್ಚುವುದು. ಇದಕ್ಕಾಗಿ ಯತ್ನಿಸಿದರೆ ನಷ್ಟವಿಲ್ಲ. ಅವನು ಕೆಳಗೆ ಹೋಗುವುದಿಲ್ಲ. ಮೇಲಕೆ ಹೋಗುತ್ತಾನೆ.” ಇತ್ಯಾದಿ ವಿವರಿಸಿದನು.

ತಪಸ್ಸು ಹಲವಾರಿವೆ. ಮಾನುಸ್ಮೃತಿಕಾರರೇ ಮೊದಲಾದವರು ಅನೇಕ ತಪಸ್ಸು ಹೇಳಿದ್ದಾರೆ. ಅವೆಲ್ಲ ಕರುಹಿಲ್ಲದೆ ಅನುಷ್ಠಾನ ಮಾಡಿ ಬಹು ಕಷ್ಟದಿಂದ ಜ್ಯೋತಿಯನ್ನು ಕಾಣತಕ್ಕವುಗಳು. ಅನುಷ್ಠಾನಾಸಮರ್ಥನಾದ ವಾನಪ್ರಸ್ಥಾಶ್ರಮಿಯು ತಪೋವಿಮುಖತೆಯನ್ನು ಕಾಯ್ದು ಕೊಳ್ಳಲು ದುಸ್ಸಾಧ್ಯವಾಗುವುದು. ಏಕೆಂದರೆ ಉತ್ತರ ವಯಸ್ಸಿನ ದೈಹಿಕ ಶೈಥಿಲ್ಯ. ಕರ್ಮಾಚರಣೆಯ ಬೀಗವು ಹೆಚ್ಚಿನದು. ಅಂಥವರು ಅಗ್ನಿಯಲ್ಲಿ ಬಿದ್ದು ಪ್ರಾಣ ಬಿಡಬೇಕು ಅಥವಾ ಗುಡ್ಡದಿಂದುರುಳಿ ಸಾಯಬೇಕು. ಇತ್ಯಾದಿಯಾಗಿ ಮನುಸ್ಮೃತಿಯಲ್ಲಿ ಹೇಳಿದ ವಿಷಯಗಳು ಬರಬರುತ್ತ ವಿಚಾರ ವೇದಿಕೆಯಲ್ಲಿ ದೋಷದಿಂದ ಕೂಡಿದುವೆಂದೇ ತೀರ್ಮಾನಿಸಲ್ಪಟ್ಟವು. ಏಕೆಂದರೆ ದೇಹ ತ್ಯಾಗ ಮಾಡಿಕೊಳ್ಳುವಿಕೆಯು. ಆತ್ಮ ಹತ್ಯಾ ದೋಷದಿಂದ ಹೊರ ತಾಗುವದಿಲ್ಲ. ಆದ್ದರಿಂದಲೇ ಇವೆಲ್ಲ ತಪಸ್ಸಲ್ಲವೆಂದು ಹೇಳಬೇಕಾಗುತ್ತದೆ. ತಪಸ್ಸುಗಳಲ್ಲಿ ಲಕ್ಷ್ಯ ಮುಖ್ಯವಾಗಿ ಬೇಕೇಬೇಕು. ಅಲಿಂಗ ತಪಸ್ಸು ಕಷ್ಟ ಸಾಧ್ಯ. ಕೊನೆಯ ಹಂತ ದುಸ್ಸಾಧ್ಯ. ಆದ್ದರಿಂದ ಲಿಂಗಲಕ್ಷ್ಯವುಳ್ಳ ತಪಸ್ಸೇ ಶ್ರೇಷ್ಠವಾದ ತಪಸ್ಸು.

### —ಲಿಂಗತಪಸ್ಸು (ಇಷ್ಟಲಿಂಗ ಸ್ಥಾವರಲಿಂಗ)—

ವೀರಶೈವ ಧರ್ಮದ ಮುಖ್ಯ ಲಕ್ಷಣ ಇಷ್ಟಲಿಂಗ ಪೂಜಾಕಾರ್ಯದಲ್ಲಿ ವ್ಯಕ್ತವಾಗುತ್ತದೆ. ಇದು (ಇಷ್ಟಲಿಂಗ ಪೂಜೆ) ಶೈವ ಧರ್ಮದ ವಿವಿಧ ವಿಚಾರ ಮಥನಾನಂತರದ ಕೊನೆಯ ಹಂತದ ಸೂಕ್ಷ್ಮ ವಿಚಾರಧಾರೆ

ಯಾಗಿದೆ. ಶೈವ ಧರ್ಮದ ಹೆಗ್ಗುರುತು ಗುಡಿಗುಂಡಾರಗಳಲ್ಲಿರುವ ಸ್ಥಾವರಲಿಂಗ ಪೂಜೆ ಅಥವಾ ಮನೆಮನೆಗಳಲ್ಲಿಟ್ಟು ಪೂಜಿಸುವ ಲಿಂಗ ಪೂಜೆ. ವೀರಶೈವದ ಗುರುತು ಇಷ್ಟಿಗೆ ಯೋಗ್ಯವಾದ ಇಷ್ಟಲಿಂಗ ಪೂಜೆ. ಇದೊಂದೇ ಭೇದವಲ್ಲ ಅನೇಕಾಭಿಪ್ರಾಯಗಳು ಭಿನ್ನ ಭಿನ್ನವಾಗಿ ಶೈವದಿಂದ ವೀರಶೈವವು ಬೇರ್ಪಟ್ಟಿದೆ- ದೇಹವೇ ದೇಗುಲವಾಗಿ ಅದರಲ್ಲಿ ಪರಮಾತ್ಮನು ವಾಸಿಸಲು ಅದು ಯೋಗ್ಯವಾಗಬೇಕೆಂದು ಇಷ್ಟಲಿಂಗವನ್ನು ವೀರಶೈವನು ಎಂದೆಂದೂ ಅಗಲದಂತೆ ಅಂಗದ ಮೇಲೆ ಅದನ್ನಿಟ್ಟು ಕೊಳ್ಳುವನು. ಆ ಇಷ್ಟಲಿಂಗವನ್ನು ಇನ್ನೂ ತಾಯಿಯ ಗರ್ಭದಲ್ಲಿ ಭ್ರೂಣ ರೂಪದಿಂದಿರುವಾಗಲೇ ಭ್ರೂಣದ ಚಿತ್ಕಳೆಯನ್ನು ಕಿತ್ತು ಲಿಂಗರೂಪವಾಗಿ ತಾಯಿಯ ಕರಸ್ಥಲಕ್ಕೆ ಗುರು ಕೊಡುವನು. ಇಷ್ಟಲಿಂಗ ಭಕ್ತಿ ಸಂಸ್ಕಾರ ರೂಪವಾಗಿ ತಾಯ ಮೂಲಕವೇ ಉಂಟಾಗಲೆಂಬ ಸೂಕ್ಷ್ಮ ಭಾವನೆಯನ್ನು ವ್ಯಕ್ತಪಡಿಸುವ ದೃಷ್ಟಾಂತವಾಗಿದೆ. ಹೀಗೆ ಗರ್ಭಾಷ್ಟಮದಿಂದ ಪ್ರಾರಂಭಗೊಂಡ ಇಷ್ಟಲಿಂಗ ಸಂಗ ಸಾಯುವವರೆಗೆ ಎಡ ಬಿಡದಿರಬೇಕು. ಈ ಇಷ್ಟಲಿಂಗವನ್ನುಳಿದು ಬೇರೆ ಶಿವನು ಕೈಲಾಸದಲ್ಲಿಲ್ಲ, ವೀರಶೈವನಿಗೆ. ಇದು ದೇಹದಲ್ಲಿ ಆ ಪರಾಪರ ವಸ್ತುವಿರುವದನ್ನು ಸಾರುವುದಲ್ಲದೆ ಮಾನವ ದೇಹ ಘನತೆಯನ್ನೂ ಅದು ಸಾರುವದು. ಅದು ಅನಿಷ್ಟವನ್ನು ಹೋಗಲಾಡಿಸಿ ಇಷ್ಟಪ್ರಾಪ್ತಿಯನ್ನುಂಟುಮಾಡುವ ಮಂಗಲಕಾರಕವಾದ ಬಾಹ್ಯದ ಕುರುಹು. ಆದ್ದರಿಂದಲೇ ಇಷ್ಟಲಿಂಗ.

ಲಿಂಗಧಾರಣ ತತ್ವ ಘನೋದ್ದೇಶ ಪೂರ್ಣವಾದುದು. ಸ್ಥಾವರಲಿಂಗಕ್ಕೆ ವೀರಶೈವನ ದೃಷ್ಟಿಯಲ್ಲಿ ಈ ಘನತೆಯಿಲ್ಲ. ಏಕೆಂದರೆ ಶಿಲ್ಪಿಯೋರ್ವನು ಕಡೆದ ಲಿಂಗವನ್ನು ತಂದು, ದೇವಾಲಯದಲ್ಲಿಡುವರು. ಪುರೋಹಿತನು ಮಂತ್ರಾದಿಗಳಿಂದ ಅದನ್ನು ಪವಿತ್ರಗೊಳಿಸಿ ಪ್ರಾಣ ಪ್ರತಿಷ್ಠೆ ಮಾಡುತ್ತಾನೆ. ಅನಂತರ ಅದು ಪೂಜಾ ಯೋಗ್ಯವೆನಿಸಲ್ಪಟ್ಟು ಪ್ರತಿ ನಿಧಿ (ಪೂಜಾರಿ) ಯೋರ್ವನ ಮೂಲಕ ಜನ ಜಂಗುಳಿಗೆ ದರ್ಶನ, ಪೂಜೆಗಾಗಿ ಸಿದ್ಧವಾಗುತ್ತದೆ. ಯಾರಿಗೂ ಆ ಲಿಂಗವನ್ನು ಮುಟ್ಟಿ ಪೂಜೆ ಮಾಡುವ ಹಕ್ಕಾಗಲಿ ಪಾವಿತ್ರ್ಯವಾಗಲಿ ಇಲ್ಲ. ಪ್ರತಿನಿಧಿಯಿಂದ ನಮಗೆ ದರ್ಶನವಾದರೆ ಆಗಬೇಕು; ಅಲ್ಲವಾದರೆ ಇಲ್ಲ. ನಮ್ಮ ಪೂಜೆ ಅವನ ಮೂಲಕ ದೇವರಿಗೆ ಸಲ್ಲಬೇಕು. ವೀರಶೈವರ ಇಷ್ಟಲಿಂಗದ ಕಲ್ಪನೆ ಇದಕ್ಕೂ ಭಿನ್ನ ಮತ್ತು ಮಹೋದ್ದೇಶ ಪೂರ್ಣತೆಯದು. ಸ್ವಾತಂತ್ರ್ಯ ಪೂರ್ಣವಾದುದು. ಏಕೆಂದರೆ ಸದ್ಗುರುವು ವ್ಯಕ್ತಿಯಲ್ಲಿರುವ ಚಿಕ್ಕಳೆಯನ್ನು ಕಿತ್ತು ಲಿಂಗ ರೂಪಮಾಡಿ ಕರಸ್ಥಲಕ್ಕೆ ಬಾಹ್ಯದ ಕುರುಹೆಂದರುಹಿ ಕೊಟ್ಟು ಸ್ವಾತಂತ್ರ್ಯವನ್ನುಂಟುಮಾಡುವನು. ಇಷ್ಟಲಿಂಗವನ್ನು ಯಾರ ಹಂಗೂ ಇಲ್ಲದೆ ಎಲ್ಲ ಕಾಲದಲ್ಲಿ ಎಲ್ಲರೂ ಪೂಜಿಸಿ ದರ್ಶನ ಭಾಗ್ಯ ಪಡೆಯಬಹುದು. ಧ್ಯಾನಾದಿಗಳಿಗೆ ಲಕ್ಷ್ಯ ರೂಪವಾಗಿಟ್ಟುಕೊಳ್ಳಬಹುದು. ಸಾಧನೆಗೆ ಇಷ್ಟಲಿಂಗ ಸ್ಥಾವರ ಲಿಂಗಕ್ಕಿಂತಲೂ ಶ್ರೇಷ್ಠ ಸಹಕಾರಿಯೆಂಬುದು ಈ ಒಂದಂಶದಿಂದ ವ್ಯಕ್ತವಾಗದಿರದು. ಆದುದರಿಂದ ಇಷ್ಟಲಿಂಗಧಾರಿಗೆ ಸ್ಥಾವರ ಲಿಂಗಪೂಜೆ, ದರ್ಶನಾದಿಗಳು ನಿಷಿದ್ಧ. ಕಟ್ಟದ ಲಿಂಗದಲ್ಲಿ ಸಮಸ್ತವನ್ನು ಕಾಣುವ ದೃಷ್ಟಿಗೆ ಬೆಟ್ಟದ ಲಿಂಗದಲ್ಲಿ ಬೆಲೆಯಿಲ್ಲ. ಬೆಟ್ಟದ ಲಿಂಗವೂ ಇವನ ಇಷ್ಟಲಿಂಗದಲ್ಲಿಯೇ ಅಡಕವಾಗಿದೆ.

ಅಂತರಂಗದ ಸಾಧನೆ ದೇಹದ ಮೂಲಕ ಇಂದ್ರಿಯ, ಮನಸ್ಸು, ಪ್ರಾಣ, ಭಾವಗಳ ಸಹಕಾರದಿಂದಲೇ ಅಳವಡಬೇಕು. ಅಂಗವು ದೇವನ ಶಕ್ತಿಯ ಸಾಕ್ಷಾತ್ಕಾರದಿಂದ ನಾಟ್ಯರಂಗವಾಗಬೇಕು. ಅಂತೆಯೇ ಅಂಗಕ್ಕೆ ಲಿಂಗವನ್ನಳವಡಿಸುವಿಕೆಯು ಆ ಮಹಾವಿಜ್ಞಾನಿಯ ದಿವ್ಯ ಬುದ್ಧಿಗೆ ಹೊಳೆದು ಆ ತತ್ತ್ವವೇ ವ್ಯವಹಾರ ಯೋಗ್ಯವೆನಿಸಿ ವೀರಶೈವರಲ್ಲಿ ಬಳಕೆಗೆ ಬಂದಿದೆ. ಮನಸ್ಸಿನಿಂದ ಆ ವಸ್ತುವನ್ನು ನೆನೆಯುತ್ತೇವೆ. ಹಾಗೆಯೆ ದೇಹದಿಂದಲೂ ಅದನ್ನು ಧರಿಸಬೇಕು. ಕೇವಲ ದೇವಾಲಯಾದಿಗಳಲ್ಲಿರುವ ಸ್ಥಾವರ ಲಿಂಗದ ಪೂಜೆ ವ್ಯರ್ಥ ಶ್ರಮವೆಂದು ವೀರಶೈವನು ನಂಬುವನು.

“ ನೆನವುದರಿಂನಿರೀಕ್ಷಿಸುವದತ್ಯಧಿಕಂ ನೆನಹಿಂ
ನಿರೀಕ್ಷೆಯಿಂ |
ದನುದಿನಸಂ ಸಮರ್ಚಿಸುವುದತ್ಯಧಿಕಂ ನೆನಹಿಂ
ನಿರೀಕ್ಷೆಯಿಂ - |



ದನುದಿವಸಂ ಸಮರ್ಚಿಪುದರಿಂ ಶಿವಲಿಂಗಮನಂ
ಗದಲ್ಲಿ ಸು_|
ಮ್ಮನೆ ಧರಿಸಿರ್ಪುದತ್ಯಧಿಕಮತ್ಯಧಿಕಂ ಸತತಂ
ಶಿವಾಧವಾ”

ಮೊಗ್ಗೆಯಮಾಯಿ ದೇವರ ಈ ನುಡಿ ಅತ್ಯಂತ ಗಮನಾರ್ಹವಾದುದಾಗಿದೆ. ಇಷ್ಟಲಿಂಗಕ್ಕೂ ಸ್ಥಾವರ ಲಿಂಗಕ್ಕೂ ಇರುವ ಭೇದ ತಿಳಿಸುವುದೇ ಈ ಪದ್ಯದ ಉದ್ದೇಶವಾಗಿದೆ. ನೆನೆಯುವುದೂ, ನಿರೀಕ್ಷಿಸುವುದೂ, ಪೂಜಿಸುವುದೂ, ಮೊದಲಾದ ದೇವಾಲಯದ ಲಿಂಗದಲ್ಲಿನ ನಿಷ್ಠಾತಪಸ್ಸು ಸಿದ್ಧಿಯನ್ನು ಕೊಡುವುದಿಲ್ಲ. ಸ್ಥಾವರಲಿಂಗದ ಬಗೆಗಿರುವ ಈ ಮೂರು ಕ್ರಿಯೆಗಳಿಗಿಂತ ಅಂಗದಮೇಲೆ ಲಿಂಗವನ್ನು ಸುಮ್ಮನೆ ಧರಿಸುವುದೇ ಅಧಿಕವೆಂದು ಸಾರಬೇಕಾಯಿತು. ಆದರೆ ಕೇವಲ ಧರಿಸುವಿಕೆಯಿಂದಲೇ ಉದ್ದೇಶ ಪೂರ್ಣವಾಯಿತೆಂದು ಯಾರೂ ತಿಳಿಯಬಾರದು. ಧರಿಸಿದ ನಂತರ ಅದರ ಪ್ರಯೋಜನ, ಉದ್ದೇಶ ಘನತೆಗಳನ್ನರಿತು ತಪಸ್ಸು ಪ್ರಾರಂಭವಾಗಬೇಕು. ಗೋವಿನ ದೇಹದಲ್ಲಿ ತುಪ್ಪವಿರಬಹುದು. ಅದು ನೇರವಾಗಿ ತುಪ್ಪದ ರೂಪದಿಂದಲೇ ಸಿಕ್ಕುವುದಿಲ್ಲ. ಹಾಲು ಕರೆಯುವ, ಕಾಸುವ, ಹೆಪ್ಪಿಡುವ, ಕಡೆವ, ಕಾಸುವ ಕ್ರಿಯಾ ನಿಷ್ಪತ್ತಿಯ ನಂತರವೇ ಅಲ್ಲವೆ ಅದು ಸಿಕ್ಕುವುದು. ಅದರಂತೆ ಲಿಂಗ ಧರಿಸಿ ಸಾಧಿಸಿ ಪ್ರಕಾಶ ಕಾಣಬೇಕು. ನಮ್ಮ ಅಂಗದ ಮೇಲೆ ಲಿಂಗವೂ ಇರಬಹುದು. ಉದ್ದೇಶವೂ ಘನತೆಯನ್ನು ಸಾರಬಹುದು. ಅರಿಯುವ ಶಕ್ತಿಯೂ ಸಾಧಿಸುವ ಶಕ್ತಿಯೂ ಇರಬಹುದು. ಆದರೆ ಜ್ಯೋತಿಯ ಅವಿಷ್ಕರವಾಗುವುದು ಆ ಮಾರ್ಗವಿಡಿದು ಕ್ರಿಯೆ ನಡೆದರೆ ಅಥವಾ ತಪಸ್ಸು ನಡೆದರೆ ಮಾತ್ರ. ಇಲ್ಲದಿದ್ದರೆ ಗೋವಿನ ದೇಹದಿಂದಲೇ ನೇರವಾಗಿ ತುಪ್ಪವನ್ನಪೇಕ್ಷಿಸುವ ಮೂರ್ಖನಂತಾದೀತು.

ಇಷ್ಟಲಿಂಗವೆಂಬುದು ಅರುಹಿನ ಕುರುಹೆಂದು ತಿಳಿಸಿದೆ. “ಅಚ್ಚ ಪೊಚ್ಚ ಬರಿಯರವಿನ ಸೈವರೆಗಿನ ಕುರುಹಿನ” ಸ್ವರೂಪ ಚಿತ್ ಶಕ್ತಿಯೇ ಇದು. ಅದು ನಮಗಾಗಿ ಎಳಸಿ ಕರಕಂಜದೊಳು ಕಾಣಿಸಿದೆ. ಯಜನೆ ನಮ್ಮನು. ನೆನೆಯುವುದೇ ಮೊದಲಾದ ಕ್ರಿಯೆಗಳು ಬಹು ಪ್ರಾಚೀನ ತಪೋವಿಧಾನಗಳೆಂದು ಹಿಂದೆಯೇ ಹೇಳಿದೆ. ಇಂಥ ಕ್ರಿಯೆಗಳು ಇಷ್ಟಲಿಂಗದಷ್ಟು ಸಮೀಪವಾಗುವುದಿಲ್ಲ. ಅವನ್ನು (ಸ್ಥಾವರ ಲಿಂಗಾದಿಗಳನ್ನು) ಬಹುದೂರ ಕಾಣುತ್ತೇವೆ. ಈ ವಸ್ತುವಾದರೊ ಅತ್ಯಂತ ಸಮೀಪದ್ದು. ನಮ್ಮ ಮೈ ಮನ ಇಂದ್ರಿಯಗಳಲ್ಲೆಲ್ಲ ಓತಪ್ರೋತವಾಗಿ ಬೆಸುಗೆಗೊಂಡು ಜಗತ್ತಿನ ಯಾವ ವಸ್ತುಗಳೂ ಸಮೀಪವಲ್ಲದಷ್ಟು ಸಮೀಪ ಈ ಲಿಂಗ. (ಇಷ್ಟಲಿಂಗ) ಆದುದರಿಂದ ಇದನ್ನು ಬಿಟ್ಟು ದೂರದ ಜ್ಯೋತಿರ್ಲಿಂಗದಲ್ಲಿ ಅಥವಾ ಸ್ಥಾವರ ಲಿಂಗದಲ್ಲಿ ವಸ್ತುಸಿದ್ಧಿಗಾಗಿ ಹೋಗಿ ಬಳಲಿ ಬರಿಗೈಯಿಂದಲೇ ಬರುತ್ತೇವೆ. ಲಿಂಗವಿರುವ ಸ್ಥಳವನ್ನು ಬಿಟ್ಟು, ಈಚೆಗೆ ಬಂದೊಡನೆ ಲಿಂಗಾಲಯದಿಂದ ದೂರ ಬಂದೆವೆಂಬ ಭಾವ ತಳೆಯುತ್ತೇವೆ. ಮೊದಲಿನ ಸ್ಥಿತಿಯಿಂದ ತಿರೋಧಾನರಾಗಿ ಬಿಡುತ್ತೇವೆ. ಜೋತಿರ್ಲಿಂಗಾದಿಗಳನ್ನು ನೋಡಲು ಹೋಗುವುದಾದರೋ ಆರ್ಥಿಕ ಸಂಪತ್ತಿಯಿದ್ದರೆ ಮಾತ್ರ. ಇಲ್ಲವಾದರೆ ನೆನೆಯಬೇಕು. ನೆನದರೂ ದೂರ. ನಾವು ನೋಡಿದ ವಸ್ತುವನ್ನು ನೆನೆಯಬಹುದು. ದೂರದಲ್ಲಿದ್ದರೂ ನೆನೆಯುವ ಕಾರ್ಯವೇನೋ ನಡೆಯುತ್ತದೆ. ಹೀಗೆ ನೆನೆಯುವವನು ಸುಮ್ಮನೆ ಇರುವವನಿಗಿಂತ ಅಧಿಕನು. ನೆನೆಯುವುದು ಎಲ್ಲಕಾಲದಲ್ಲೂ ಆಗಲಿಕ್ಕಿಲ್ಲ. ಏನಾದರೂ ತಡೆಬಂದಿತೆಂದರೆ ನಿಂತು ಹೋಗುತ್ತದೆ. ಅದ್ದರಿಂದ ನಿರೀಕ್ಷಿಸುವವನು ನೆನೆಯುವವನಿಗಿಂತಲೂ ಅಧಿಕನು. ಅರ್ಚನೆ ಮಾಡುವವನು ನಿರೀಕ್ಷಿಸುವವನಿಗಿಂತಲೂ ಸಮೀಪವಾದನು. ಆದ್ದರಿಂದ ನಿರೀಕ್ಷಿಸುವವನಿಗಿಂತ ಅರ್ಚಿಸುವವನು ಮೇಲ್ಮಟ್ಟದವನು. ಈ ಮೂರು ವಿಧದ ಜನರಿಗಿಂತ “ಶಿವಲಿಂಗಮನಂಗದಲ್ಲಿ ಸುಮ್ಮನೆ ಧರಿಸಿರ್ಪದತ್ಯಧಿಕಂ.”

ಲಿಂಗ ಕಟ್ಟುವುದೂ ದೊಡ್ಡ ಅರ್ಥವುಳ್ಳದೆಂದು ಹಿಂದೆ ತಿಳಿಸಿದೆ. ಮಾಯಿಕ ಪ್ರಪಂಚದ ವ್ಯವಹಾರಗಳಿಂದ ನಮಗೇನಾಗಬೇಕು. ? ಆ ವ್ಯವಹಾರಪ್ರಯೋಜನವೆಷ್ಟರದು. ಅರ್ಥವಾದರೂ ಆಗಬಹುದು ಅನರ್ಥವಾದರೂ ಆಗಬಹುದು. ಸಿಹಿಯಾದರೂ ಆಗಬಹುದು ಕಹಿಯಾದರೂ ಆಗಬಹುದು. ಅನುಭವಿಸಲು ತಕ್ಕ ಸಿದ್ಧತೆ ಪಡೆಯಬೇಕು. ಅಂಥ ಕೊನೆಯ ಪರಿಸ್ಥಿತಿಯ ಪರಿಣಾಮವನ್ನು ಲಿಂಗವಿಡಿದು ತಿಳಿಯುತ್ತೇವೆ. ಪ್ರತಿಯೊಬ್ಬರೂ ವ್ಯವಹಾರ ಪ್ರಪಂಚದ ಕೊನೆಯ ಪರಿಣಾಮವನ್ನು ಹೊಂದಲು ಸಿದ್ಧನಾಗಬೇಕು. ಲಿಂಗದ ಮೂಲಕ ಅಂಗಕ್ಕೆ ಅಂಥ ಪರಿಣಾ

ಮವನ್ನುಂಟುಮಾಡಿಕೊಳ್ಳಲು ಸಾಧ್ಯ. ತೋರಿಕೆಯ ಸಮಸ್ತ ಪ್ರಪಂಚದಲ್ಲಿ ಬಿಚ್ಚಿಬೇರಾಗದ ಕೂಡಿ ಒಂದಾಗುವ ಸ್ಥಿತಿಯಲ್ಲಿ ಬೆರೆತಿರುವ ಮಹಾ ವಸ್ತುವಿನ ಅನುಸಂಧಾನ ಕ್ರಿಯೆಯು ನಾಡಿ ನಾಡಿಗಳಲ್ಲಿ ಪ್ರಸರಣೆಗೊಳ್ಳಹತ್ತಿದಾಗ ಅದೆಲ್ಲ ಲಿಂಗಮಯವಾಗಿಯೇ ತನ್ನ ಪ್ರಾಕೃತತ್ವವನ್ನು ನೀಗುವುದು. ಆದುದರಿಂದ ಕಾಯವನ್ನು ಲಿಂಗವೆಂದು ತಿಳಿದು ಅಥವಾ ಲಿಂಗಕಾಯವಾಗಬೇಕೆಂದು ವಿಚಾರಿಸಿ ಅಂಗಕ್ಕೆ ಇಷ್ಟಲಿಂಗಾನುಸಂಧಾನಗೊಳಿಸುತ್ತೇವೆ. ಪ್ರಾಣಲಿಂಗವೆಂದು ಪ್ರಾಣಕ್ಕೆ ಆಧಾರಗೊಳಿಸುತ್ತೇವೆ. ಭಾವಕ್ಕೆ ಭಾವಲಿಂಗವೆಂದು ಅನುಸಂಧಾನಗೊಳಿಸುತ್ತೇವೆ.

ಹಾಗೆ ಮಾಡದಿದ್ದರೆ ಅವು ಶೂನ್ಯಗಳಾಗಿ ಕಾಣುತ್ತವಾದ್ದರಿಂದ. ಲಿಂಗಭಾವ ಬಲಗೊಳ್ಳಲು ಇದು ಮುಖ್ಯ ಸಾಧನ. ಇಂದ್ರಿಯಗಳಲ್ಲಿ, ಪ್ರಾಣದಲ್ಲಿ, ಭಾವದಲ್ಲಿ ಹೀಗೆ ದೇಹದ ಎಲ್ಲಲ್ಲೂ ಆ ದಿವ್ಯಲಿಂಗದ ಅರಿವು ಎಲ್ಲವನ್ನೂ ಪವಿತ್ರಗೊಳಿಸಿ ದೇಹಶುದ್ಧಿ, ಪ್ರಾಣಶುದ್ಧಿ ಮನಶ್ಶುದ್ಧಿ ಇಂದ್ರಿಯಾದಿಗಳ ಶುದ್ಧಿಪಡೆದು ಮನುಷ್ಯ ಉದ್ಧಾರವಾಗಬೇಕು. ಇಂದ್ರಿಯಾದಿಗಳು ಶುದ್ಧವಾಗದಿದ್ದಲ್ಲಿ ಮನಸ್ಸು ಶುದ್ಧವಾಗದು. ಮನಸ್ಸು ಶುದ್ಧವಾದಲ್ಲದೆ ಇಂದ್ರಿಯ ಶುದ್ಧಿಯೂ ಇಲ್ಲ. ಮನಶ್ಶುದ್ಧಿಯಿಲ್ಲದೆ ಭಾವ ಶುದ್ಧಿಯಿಲ್ಲ. ಆಗ ಕಶ್ಮಲಪೂರ್ಣ ಇಂದ್ರಿಯ, ಮನ, ಭಾವಗಳಿಂದ ಕಾಮಿತಾರ್ಥ ಸಿದ್ಧಿಯಿಲ್ಲ. ಅರ್ಥಾತ್ ಜೀವಿತಕ್ಕೆ ಮೂಲ್ಯವಿಲ್ಲ. "ಚಕ್ಷುರ್ದಗ್ಧಃ ಪರಸ್ತ್ರೀಭಿಃ" ಅಪಕ್ವ ಮನೋವ್ಯಾಪಾರದಿಂದ ಹೋಗಬಾರದೆಡೆಯಲ್ಲಿ ಕಣ್ಣು ಹೋಗುವುದು. ಕೇಳಬಾರದುದನ್ನು ಕಿವಿಕೇಳಿ, ಆಡಬಾರದುದನ್ನು ನಾಲಿಗೆ ಆಡಿ ಅಥವಾ ಸೇವಿಸಬಾರದುದನ್ನು ಸೇವಿಸಿ, ಸ್ಪರ್ಶಿಸಬಾರದುದನ್ನು ತ್ವಕ್ಕು ಸ್ಪರ್ಶಿಸುವುದು. ಮನೋವ್ಯಾಪಾರದಿಂದ ಇಂದ್ರಿಯ ವ್ಯಾಪಾರ ಸಾಗುವುದು. ಲಿಂಗದ ಅಂತರ ಬಾಹ್ಯಸ್ವರೂಪ ಶುದ್ಧಿಯಲ್ಲಿ ಈ ಬಾಧೆಯಿಲ್ಲ. ಜೀವಪರಮರನ್ನೊಂದುಗೊಳಿಸುವ ಈ ಇಷ್ಟಲಿಂಗಾನುಸಂಧಾನ ವಿವೇಚನೆಯೂ ಈ ದೃಷ್ಟಿಯಿಂದ ತತ್ವಬದ್ಧವಾದುದಾಗಿದೆ.



## —ಅಂಗತ್ರಯದಲ್ಲಿ ಲಿಂಗತ್ರಯದ ಆವಶ್ಯಕತೆ—

ಇನ್ನು ಕೆಲವರು ಅಂಗತ್ರಯದಲ್ಲಿ ಲಿಂಗತ್ರಯದ ಅವ್ಯಕತೆಯೇನು? ಎನ್ನುವುದುಂಟು. ನಾವು ಯಾವ ವಸ್ತುವನ್ನು ತಿಳಿಯಲಿಚ್ಛಿಸುತ್ತೇವೊ ಅದನ್ನು ಶ್ರವಣ, ಮನನ, ನಿಧಿಧ್ಯಾಸಾದಿಗಳಿಂದ ತಿಳಿಯಬೇಕು. ಕುರುಹನ್ನಿಟ್ಟು ತಿಳಿಯುವುದೇನು? ಇತ್ಯಾದಿಯಾಗಿಯೂ ಪ್ರಶ್ನಿಸುವುದುಂಟು. ಏಕೆಂದರೆ– "ಯತೋವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ" ಎಂಬ ಉಪನಿಷದ್ವಾಕ್ಯಾಧಾರಗಳಂತೆ ವಾಙ್ಮನಸ್ಸುಗಳಿಂದ ವಸ್ತುಸಿದ್ಧಿಯಾಗುವುದಿಲ್ಲ. ಮನಸ್ಸಿನಲ್ಲಿ ವಸ್ತುವನ್ನು ಸಾಧಿಸುವುದು ಹೇಗೆ? ಬುದ್ಧಿ ಶಕ್ತಿಯಿಂದಲೇ ಸಾಧಿಸಿದರೆ ಅಪರೋಕ್ಷ ಸಾಕ್ಷಾತ್ಕಾರವಿಲ್ಲ. ಪರೋಕ್ಷ ಸಾಕ್ಷಾತ್ಕಾರವಾಗಬಹುದು. ಪರಾವಸ್ತುವನ್ನು ಹೀಗೆಯೇ ಶಾಸ್ತ್ರದಿಂದ, ಬುದ್ಧಿ ಶಕ್ತಿಯಿಂದ ಕಂಡುಹಿಡಿಯುವುದಕ್ಕೆ ಮನಸ್ಸಿನ ಮತ್ತು ಹೃದಯದ ಸಹಕಾರಗಳುಂಟಾಗಿಯೂ, ತಪಸ್ಸು ಅಂಥ ತಪಸ್ಸಾಗುವುದು. ಏಕೆಂದರೆ ಮನಸ್ಸಿನ ಹೃದಯದ ಸಹಕಾರ ಸಾಲವು. ಪ್ರಾಣದಿಂದ, ಭಾವದಿಂದ ಎಲ್ಲ ಕಡೆಯಿಂದಲೂ ಸಹಕಾರ ಒದಗಿ ಬರಬೇಕು. ಒಂದೊಂದೂ, ಒಂದೊಂದು ಕುರುಹು ಹಿಡಿದು ಕುರುಹನ್ನು ನಷ್ಟಗೊಳಿಸಿ ಅರುಹಾಗಬೇಕು- ಅಂದರೆ ಲಿಂಗಮಯವಾಗಬೇಕು. "ನಡೆವೆಡೆಯಲ್ಲಿ, ನೋಡುವೆಡೆಯಲ್ಲಿ, ರಮಿಪ್ಪೆಡೆಯಲ್ಲಿ, ವಸ್ತುವಂ ಪಿಡಿವೆಡೆಯಲ್ಲಿ, ಭೋಗಿಪೆಡೆಯಲ್ಲಿ, ಸುಖಂಬಡೆವಲ್ಲಿ, ದೇಹಮಂ ಬಿಡುವೆಡೆಯಲ್ಲಿ" ಲಿಂಗಕಳೆ ಲಿಂಗ ಗುಣಗಳು ಅಂಗವಿಸಿದಾಗಲೇ ದಿವ್ಯಾತ್ಮನ ಇರುಹಿನಿಂದ ಬೆರೆತ ಸಮಸ್ತ ಬಾಳು ಸೀಮಾ ರಹಿತ ಆನಂದವಾಗುವುದು. ಅದನ್ನೆ ನಿಜಗುಣರು "ನಿರುಪಾಧಿಕ ನಿರ್ಮಳ ಜ್ಯೋತಿ ಬೆಳಗುತಿದೆ" ಎಂದು ಹೇಳಿದುದು.

ಲಿಂಗಮಾರ್ಗದಲ್ಲಿಯೇ ನಮ್ಮ ಸರ್ವಚೇಷ್ಟೆಗಳ ಸುಳಿವು ಇಲ್ಲದಿದ್ದರೆ ತಾನಾಗಿ ಕತ್ತಲೆ ಕವಿಯುತ್ತದೆ. ಅಖಂಡ ಮೂರ್ತಿಯ ಚೈತನ್ಯದಲ್ಲಿ ಪ್ರಾಣವಿದೆಯೆಂದು ತಿಳಿದುನೋಡಿ ಭಾವದಲ್ಲಿ ಅಖಂಡ ಪ್ರಕಾಶಕಾಣಬೇಕು, ಆದ್ದರಿಂದ ಹೊರಗಿನ ಮೂರನ್ನು (ಗುರು ಲಿಂಗ



ಜಂಗಮ ತ್ರಯವನ್ನು) ಒಳಗಿನ ಮೂರರ (ಇಷ್ಟ, ಪ್ರಾಣ, ಭಾವಗಳ) ಪ್ರಕಾಶಕ್ಕೆ ಗುರಿಗೊಳಿಸಿದ್ದಾರೆ.

ಸ್ಥೂಲ – ಸೂಕ್ಷ್ಮ – ಕಾರಣ
ಇಷ್ಟ – ಪ್ರಾಣ – ಭಾವ
ಗುರು – ಲಿಂಗ – ಜಂಗಮ
ಆಚಾರ – ವಿಚಾರ – ಆಚಾರ ವಿಚಾರ ಸಾಮರಸ್ಯ.

ಹೀಗೆ ಹೊಯ್ದಾಡದಂತೆ ಹೊರಗಿನ ಆಧಾರಗಳಿಂದ ಒಳಗಿನ ಸ್ಥಿತಿಯನ್ನು ಹದಗೊಳಿಸುವುದು ಲಿಂಗ ತಪಸ್ಸಿನ ಮುಖ್ಯಗುರಿಯಾಗಿದೆ. ಶರೀರದಿಂದ ಇಷ್ಟಲಿಂಗ ಧರಿಸಿದಮೇಲೆ ಮುಂದಿನ ತಪಸ್ಸು ಪ್ರಾರಂಭವಾಗುವದು. ಗುರುಬೋಧ ರೂಪವೇ ಕ್ರಿಯಾಚಾರ ಸ್ಥಳ. ಲಿಂಗಕ್ರಿಯೆಗಳೇನು? ಅದರ ಅನುಸಂಧಾನ ಹೇಗೆ? ಪರವಸ್ತುವನ್ನು ಬೆರಸುವ ಬಗೆಯಾವುದು ಮುಂತಾದ ಮಾರ್ಗಗಳನ್ನು ಶಿಷ್ಯೋತ್ತಮನಲ್ಲಿ ಕೃಪೆಮಾಡಿ ಪೇಳುವನು. ಶಿಷ್ಯನಲ್ಲಿ ಅಪೂರ್ವ ಜ್ಯೋತಿಯನ್ನೂ, ಕಳೆಯನ್ನೂ ಉಂಟುಮಾಡುವನು. ಲಿಂಗವನ್ನುಳಿದು ಅನುಸಂಧಾನಾದಿಗಳು ಗೊತ್ತಾಗವು. ಆದ್ದರಿಂದಲೇ ಲಿಂಗತಪಸ್ಸಿಗೆ ಮಹತ್ವ ಬಂದಿರುವುದು.

ಪ್ರಾಚೀನ ಅದ್ವೈತ ಸಿದ್ಧಾಂತದ ರೀತ್ಯಾ ಬ್ರಹ್ಮ ಚಿಂತನೆಯೆಂಬುದು ಸಾಮಾನ್ಯರಿಗೆ ದುಸ್ಸಾಧ್ಯ ವಿಷಯವಾಗಿರುವುದು. ಗುರುವೊಬ್ಬನು ಬ್ರಹ್ಮ ಚಿಂತನೆ ಮಾಡುವಾಗ ಶಿಷ್ಯನು ಬಂದು "ಸ್ವಾಮಿ, ಈ ಚಿಂತನೆ ಹೀಗೆ ಎಲ್ಲಿಯವರೆಗೆ ಎಂದನಂತೆ, ಗುರುವು 'ಆ ಸುಪ್ತೆರಾಮೃತೇಃ ಕಾಲಂ' ಎಂದು ಉತ್ತರ ಕೊಟ್ಟನಂತೆ. ಸಾಮಾನ್ಯರಿಗೆ ಇದು ಹೇಗೆ ಸಾಧ್ಯವಾದೀತು. ಬ್ರಹ್ಮ ಚಿಂತನಾಧಿಕಾರ ಪಡೆದವರೆಷ್ಟು ಜನ ಸಿಕ್ಕಾರು? ಸಾಯುವವರೆಗೆ ಹೀಗೆ ಮಲಗಿ ಎದ್ದೆದ್ದು ಚಿಂತನೆ ಮಾಡುತ್ತಾ ಕುಳಿತರೆ ಹೇಗೆ? ಕರಣಗಳ ಉಪಟಳವು ಬಹಳ. ಅವು ಮನಸ್ಸಿನಮೇಲೆ ಆಗಾಗ ಪ್ರಭಾವಬೀರಿ ಧ್ಯಾನ ಕೆಡಿಸುವುವು. ಮನಸ್ಸಿನಲ್ಲಿ ದೇಹದಲ್ಲಿ ಮೊದಲೇ ಕುರುಹಿಲ್ಲ. ಲಕ್ಷ್ಯದತ್ತ ಮನಸ್ಸನ್ನು ಬಹು ದುಸ್ಸಹ ರೀತಿಯಲ್ಲಿ ಹಿಡಿಯಬೇಕಾಗುತ್ತದೆ. ಭಾವದಲ್ಲೂ ಆ ಕುರುಹಿಲ್ಲ. ಆಗ ವಸ್ತುವು ನಮ್ಮನ್ನು ಬಿಟ್ಟು ಬಹುದೂರ ಸಾಗಿಬಿಡುವುದುಂಟು. ಜಾಗೃತ ಜಗತ್ತಿನ ಅನಂತ ಕಾರ್ಯಗಳೂ ತಮ್ಮ ಪ್ರಭಾವ ಮುದ್ರೆಯನ್ನು ಹಠತ್ತಾಗಿ ಒತ್ತಿ ಯೋಗಚಿಂತನೆ ತಿರೋಧಾನವಾಗ ಹತ್ತುವುದು. ಶರೀರದ ಮತ್ತು ಮನಸ್ಸಿನ ಉಪಯೋಗಗಳನ್ನು ಅತ್ಯಂತ ಪ್ರಿಯವಾದ ಲಿಂಗಸಂಬಂಧ ಗೊಳಿಸುವ ವ್ಯವಹಾರದಲ್ಲಿ ಉಪಯೋಗಿಸಬೇಕು. ಇಷ್ಟ ಪ್ರಾಣ ಭಾವಲಿಂಗಾನುಸಂಧಾನದಿಂದಲೂ, ಗುರು ಲಿಂಗ ಜಂಗಮ ಸಹಕಾರದಿಂದಲೂ, ಹೃದಯದ, ಪ್ರಾಣದ, ದೇಹದ ಲಾಭ ಮಾಡಿಕೊಳ್ಳಬೇಕು. "ಮನದ ಕಾಲಿತ್ತ ತನುವಿನ ಕಾಲತ್ತ" ಆಗಬಾರದು. ವಿಷಯಗಳಲ್ಲಿ ಅನಾಸಕ್ತಿ ಬಲಿಯುತ್ತ ಬರಬೇಕು. ಚೆನ್ನಬಸವಣ್ಣನವರು ಹೇಳುವ ಮಾತುಗಳನ್ನಿಲ್ಲಿ ಗಮನಿಸಬಹುದು—

"ಶ್ರೀ ಗುರು ಕರುಣವೇ ಲಿಂಗ, ಲಿಂಗದ ನಿಜವೇ ಜಂಗಮ; ಇಂತು ಬಹಿರಂಗದ ವರ್ತನೆ. ಇನ್ನು ಅಂತರಂಗದ ಸುಜ್ಞಾನವೇ ಜಂಗಮ, ಆ ಜಂಗಮದ ನಡೆವ ಸತ್ಕ್ರಿಯೆಯೇಲಿಂಗ. ಆ ಉಭಯದ ಏಕತ್ವ ಸಿದ್ಧಿಯೇ ಗುರು. ಇದು ಕಾರಣ ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾದಲ್ಲಿ ಜಂಗಮ ದಾಸೋಹ. ಇಲ್ಲದೆಡೆ ಲಿಂಗತೃಪ್ತಿಯಿಲ್ಲ."

"ಅಂಗದಮೇಲೆ ಲಿಂಗವಿಲ್ಲದಿದ್ದಡೆ ಜಂಗಮ ಸೇವೆಯ ಕೈಕೊಳ್ಳ ಆದಕಾರಣ ಒಂದಬಿಟ್ಟೊಂದರಲ್ಲಿ ನಿಂತರೆ ಅಂಗವಿಲ್ಲದಾತ್ಮನಂತೆ. ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವಹೀನನು ರಾಯಪಟ್ಟಕ್ಕೆ ಸಲ್ಲುವನೇ? ಲಿಂಗಹೀನನು ಭಕ್ತ್ಯಾಚಾರಕ್ಕೆ ಸಲ್ಲುವನೇ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ತ್ರಿವಿಧ ಸನ್ಮತವೇ ಚರ ಸೇವೆಯಯ್ಯಾ"

ಪ್ರಭುದೇವರೂ ಕೂಡ ಈ ವಿಚಾರದಲ್ಲಿ—

"ತ್ರಿವಿಧದ ನಿತ್ಯವ ತ್ರಿವಿಧದ ಅನಿತ್ಯವ ಬಲ್ಲವರಾರು? ತ್ರಿವಿಧಕ್ಕೆ ತ್ರಿವಿಧವನ್ನಿತ್ತು ತ್ರಿವಿಧ ಪ್ರಸಾದವ ಕೊಳ ಬಲ್ಲರೆ ಆತನ ತ್ರಿವಿಧನಾಥನೆಂಬೆನು. ಆತನ ವೀರ

ನೆಂಬೆನು ಅತನ ಧೀರನೆಂಬೆನು. ಗುಹೇಶ್ವರ ಲಿಂಗದಲ್ಲಿ
ಆತನೇ ಅಚ್ಚ ಪ್ರಸಾದಿಯೆಂಬೆ"

ಹೀಗೆ ಹೇಳಿದ್ದಾರೆ. ಸ್ಥೂಲ ಸೂಕ್ಷ್ಮ ಕಾರಣ
ವೆಂಬ ಅನಿತ್ಯವನ್ನು ಕೆಡಿಸಿ ಆ ಕಾಯತ್ರಯದಮೇಲೆ
ಗುರು ಲಿಂಗ ಜಂಗಮವೆಂಬ ತ್ರಿವಿಧವನ್ನು ನಿತ್ಯಗೊಳಿಸ
ಬೇಕು. ಇಲ್ಲಿಗೆ ಮುಗಿಯಲ್ಲಿಲ್ಲ. ಆ ಲಿಂಗತ್ರಯಕ್ಕೆ
ತನು ಮನ ಧನವನ್ನು ಸಮರ್ಪಿಸಿ ಶುದ್ಧ ಸಿದ್ಧ ಪ್ರಸಿದ್ಧ
ಪ್ರಸಾದ ತ್ರಯವನ್ನು ಸ್ವೀಕರಿಸಬೇಕು. ಇಂಥವನನ್ನೇ
ವೀರಧೀರ ಅಚ್ಚ ಪ್ರಸಾದಿಯೆಂದು ಪ್ರಭು ಕರೆದಿದ್ದಾರೆ.
ನಿರವಯವ ಸಾವಯವವಾಗಲು, ಸಾವಯವ ನಿರವ
ಯವವಾಗಲು ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧ
ಬೇಕೇಬೇಕು. ಚೆನ್ನಬಸವಣ್ಣನವರ ಮಾತಿನಲ್ಲಿ ಗುರು
ಲಿಂಗ ಜಂಗಮಗಳಿಂದ ಹೊರಗಿನ ತ್ರಿವಿಧದಿಂದ ಇಷ್ಟ
ಪ್ರಾಣ ಭಾವ ಸಂಪತ್ತಿಯ ಸರ್ವಸ್ವವು ಚೆನ್ನಾಗಿ ನಿರೂ
ಪಿತವಾಗಿದೆ. ತ್ರಿವಿಧಲಿಂಗ ಹೀನನು ಭಕ್ತ್ಯಾಚಾರಕ್ಕೂ
ಭೃತ್ಯಾಚಾರಕ್ಕೂ ಯೋಗ್ಯನಾಗನೆಂದೇ ಶಿವಶರಣರ
ನಂಬುಗೆ. ತ್ರಿವಿಧ ಭಕ್ತಿಯು ಬೆಳೆ ಬೆಳೆದಷ್ಟು ದಿವ್ಯ
ಶಕ್ತಿಯಬೇರು ಹೃದಯದಲ್ಲಿಳಿದು ನೆಲೆಗೊಳ್ಳುವುದು.
ಮರವಿಲ್ಲದೆ ಹಣ್ಣಿಲ್ಲ. ಹಣ್ಣಿಲ್ಲದೆ ಸ್ವಾದವಿಲ್ಲ. ವಿಷಯ
ಗಳಲ್ಲಿ ನಮಗೆ ಸಮಯೋಚಿತ ವೈರಾಗ್ಯ ಬರುವು
ದಾದರೂ ಪುನಃ ಸಂಸ್ಕಾರ ದೋಷದಿಂದ ಮನಸ್ಸು
ವಿಷಯಾಧೀನವಾಗಿ ಅನ್ಯತ್ರ ಎತ್ತಲೋ ನಮ್ಮನ್ನೆಳೆ
ದೊಯ್ಯುವುದು. ಇಂಥದೆಲ್ಲವನ್ನು ಮಿಕ್ಕಲು ಆಧಾರ
ಪಿಡಿದು ಮನಸ್ಸು ಗೆಲ್ಲಬೇಕು. ಭಾವಗೆಲ್ಲಬೇಕು.
ದೇಹವೂ ಗೆಲ್ಲಬೇಕು. ಗುರುಕೊಟ್ಟ ಲಿಂಗವನ್ನು ಹಿರಿ
ದುಮಾಡಬೇಕು ; ಕಿರಿದು ಮಾಡಬಾರದು. ಕಿರಿದು
ಮಾಡುವುದೇ ಸ್ಥಾವರ ಲಿಂಗಪೂಜೆ, ಹಿರಿದು ಮಾಡು
ವುದೇ ತ್ರಿವಿಧ ದಾಸೋಹವಾಗುವುದು. ಅದರಿಂದ
ಪ್ರಭುಕಾರುಣ್ಯ ಪಡೆಯಬೇಕು. ಕೊನೆಗೆ ಕುರುಹು
ನಷ್ಟಗೊಂಡು ಅರಿವು ತಾನೇ ತಾನಾಗುವುದು.
ಘನೋದ್ದೇಶ ಪೂರ್ಣವಾದ ಇಷ್ಟಲಿಂಗದ ಮಹಿಮಾತಿ
ಶಯದ ಮೂಲವನ್ನಿಲ್ಲಿ ಪ್ರಭುದೇವರ ವಿಚಾರ
ಧಾರೆಯಲ್ಲಿನೋಡಿ—

"ಚಿತ್ತುವೆಂಬ ಬಿತ್ತು ಬಲಿದು ಎರಡಾದಲ್ಲಿ ಲಿಂಗ
ವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು; ಆ
ಮೂರ್ತಿಯ ಘನತೆಯನೇನೆಂದು ಉಪಮಿಸಬಾರದು.
ನೋಡಿದಡೆ ಮೂರ್ತಿ, ಹಿಡಿದಡೆ ಬಯಲು, ಆ ಮೂರ್ತಿ
ಯೊಳಗಿದೆ ಈ ರೇಳುಲೋಕದ ಪ್ರಾಣಕಳೆ. ಆ ಕಳೆಯ
ಬೆಳಗುತಾನೆ ನಮ್ಮ ಗುಹೇಶ್ವರ ಲಿಂಗದ ಲೀಲಾಮೂ
ಲದ ಪ್ರಥಮ ಭಕ್ತಿ"

## — ಸಿದ್ಧರಾಮನ ಲಿಂಗ ತಪಸ್ಸು —

ಸಿದ್ಧ ಸಂಪ್ರದಾಯದಲ್ಲಿದ್ದು ಸ್ಥಾವರ ಪೂಜೆ
ಯಲ್ಲಿ ತೊಡಗಿದ್ದ ಸಿದ್ಧರಾಮನನ್ನು ಖಂಡದಿಂದ
ಅಖಂಡದೆಡೆಗೆ ಒಯ್ಯಲು ಪ್ರಭು ಚಿಂತಿಸಿದ್ದಾನೆ. ಸಿದ್ಧ
ರಾಮನ ಘನತೆಯನ್ನು ಕೇಳಿದ್ದ ಪ್ರಭುವು ಅವನನ್ನು
ಬಸವಣ್ಣನು ಕಲ್ಯಾಣದಲ್ಲಿ ನಡೆಯಿಸಿದ ಕ್ರಾಂತಿಯಲ್ಲಿ
ಭಾಗವಹಿಸುವಂತೆ ಮಾಡಬೇಕೆಂಬ ಘನೋದ್ದೇಶ
ವಿಟ್ಟುಕೊಂಡೇ ಆತನಲ್ಲಿ ತ್ರಿವಿಧ ಲಿಂಗಪೂಜೆಯನ್ನು
ಪ್ರಾರಂಭಿಸಬೇಕೆಂದು ಸೊನ್ನಲಾಪುರಕ್ಕೆ ಬಂದನು.

ಸೊನ್ನಲಾಪುರದಲ್ಲಿ ಶಿವಸಿದ್ಧಕುಲ ಚಕ್ರವರ್ತಿ
ಸಿದ್ಧರಾಮನು ಇಷ್ಟಪೂರ್ತಾದಿ ಕಾರ್ಯಧುರಂಧರ
ನಾಗಿ ಪ್ರಾಣಿಗಳ ದುಃಖ ನಿವಾರಣೆ ಮಾಡಬೇಕೆಂಬ
ಪೇಕ್ಷೆಯಿಂದ ಕಷ್ಟಪಟ್ಟು ಕೆಲಸಮಾಡುತ್ತಿದ್ದಾನೆ.
ಆ ತಪಸ್ಸಿನಿಂದ ಅವನಿಗೆ ಮೋಕ್ಷ ಸಿದ್ಧಿಯಾಗುವುದು
ಬೇಡ, ಮೋಕ್ಷದ ಹತ್ತಿರಕ್ಕೆ ಹೋಗಿದ್ದಾನೆ. ತಾನು
ಮಾಡುವ ಕರ್ತವ್ಯಗಳನ್ನೆಲ್ಲ ಈಶ್ವರ ತೃಪ್ತ್ಯರ್ಥವಾಗಿ
ಸಾಗಿಸಿದ್ದಾನೆ. ಶ್ರೀ ಶೈಲ ಮಲ್ಲಿಕಾರ್ಜುನನ ನಚ್ಚಿನ
ಭಕ್ತನೆನಿಸಿ ಸ್ಥಾವಲಿಂಗ ಪೂಜಾ ಧುರಂಧರನಾಗಿ
ದ್ದಾನೆ. ಶ್ರೀಶೈಲ ಮಲ್ಲಿಕಾರ್ಜುನನನ್ನೇ ಶೈಲದಿಂದ
ಕರೆತಂದು ಕಪಿಲಸಿದ್ಧ ಮಲ್ಲಿಕಾರ್ಜುನನೆಂಬಭಿಧಾನ
ದಿಂದ ಸೊನ್ನಲಿಗೆಯಲ್ಲಿ ನೆಲಸುವಂತೆ ಮಾಡಿ ದೇವಾ
ಲಯ ನಿರ್ಮಿಸಿದ್ದಾನೆ. ಅಖಂಡದ ಬೆಳಕಿಲ್ಲ; ಖಂಡದಲ್ಲಿ
ತೊಳಲುತ್ತಿದ್ದಾನೆ. ಅಖಂಡ ಸಾಕ್ಷಾತ್ಕಾರವಾಗದಿ
ದ್ದರೂ ಆದರ ಸಮೀಪ ಸಮೀಪಕ್ಕೆ ಹೋಗಿದ್ದಾನೆಂಬ
ಮಾತು ಸತ್ಯ. ಇಂಥ ದಿವ್ಯ ಶಕ್ತಿಯ ಶಿಷ್ಯನನ್ನು
ಹುಡುಕಿಕೊಂಡು ವಿಲಕ್ಷಣ ಶಕ್ತಿಯ ಗುರುವೊಬ್ಬನು
ಬರಬೇಕಾಗಿತ್ತು. ಪ್ರಭು ದೇವರೇ ಬಂದರು. ಪುಟ
ಕೊಟ್ಟ ಮಾತ್ರಕ್ಕೇ ಶುದ್ಧವಾಗುವ ಸ್ಥಿತಿಗೆ ಬಂದಿತ್ತು.
ಸಿದ್ಧರಾಮನೆಂಬ ಬಂಗಾರ. ಸಿದ್ಧರಾಮನು ಅಲಿಂಗ್ಯ



ತಪಸ್ಸಾಚರಿಸುತ್ತಿದ್ದರೂ ಲಿಂಗ ತಪಸ್ಸಿನ ಸಮೀಪ
ಸಮೀಪಕ್ಕೆ ಬಂದಿದ್ದನು. ಇಷ್ಟ ಪ್ರಾಣ ಭಾವಲಿಂಗ
ತಪೋಧಿಕಾರಿಯಾಗದಿದ್ದರೂ ಅಧಿಕಾರ ಪಡೆಯಲು
ಸಂಪೂರ್ಣ ಅರ್ಹನಾಗಿದ್ದನು. ಮನಸ್ಸು ಪರಿಪಾಕವಾ
ಗಿದ್ದರೂ ಸಿದ್ಧಿ ಸಂಪಾದನೆಯ ಹಮ್ಮು ಬಿಮ್ಮುಗಳೂ
ಇದ್ದವು. ಆತನ ಈ ಕೀರ್ತಿಯನ್ನು ಕೇಳಿಯೇ ಆತ
ನನ್ನು ಹುಡುಕಿಕೊಂಡು ಪ್ರಭುದೇವರು ಅಲ್ಲಿಗೆ
ಬಂದದ್ದು.

"ಸಿದ್ಧರಾಮನಿಗೆ ಲಿಂಗತತ್ತ್ವ ಭೂಮಿಕೆಯನ್ನು
ಹೇಳಬೇಕು. ಕಲ್ಯಾಣಕ್ಕೊಯ್ದು ಶರಣ ಜನ ಸಂದೋ
ಹದಲ್ಲಿ ಬಿಟ್ಟು, ಕರಸ್ಥಲಕ್ಕೆ ಲಿಂಗಕೊಡಿಸಿ ಶಿವಾನುಭ
ವೆಯನ್ನಾಗಿ ಮಾಡಿ ಬಸವಾದಿ ಪ್ರಮಥರ ಘನ ಕೀರ್ತಿ
ವಿತ್ತ ಸಂದೋಹದಲ್ಲಿ ಬಿಡಬೇಕು" ಎಂದು ಯೋಚಿಸಿ
ಆತನಲ್ಲಿಗೆ ಬಂದು ಆತನನ್ನು ಕೆಣಕಿ ನೋಡಿದನು.
ಪರಸ್ಪರ ತೀವ್ರ ವಾಗ್ವಾದಗಳೂ ಆದವು. ಅಷ್ಟಾಂಗ
ಯೋಗ ಮಾರ್ಗದಲ್ಲಿ ವಿಹರಿಸುವ ಸಿದ್ಧ ಸಂಪ್ರದಾಯದ
ಸಿದ್ಧರಾಮನಿಗೂ, ಶಿವಾದ್ವೈತ ತತ್ತ್ವಾನುಭವಪೂರ್ಣ
ಶಿವಯೋಗಿಗೂ, ಘರ್ಷಣೆಗಳು ನಡೆಯದಿರಲಿಲ್ಲ. ಈ
ಸಂದರ್ಭವನ್ನು ಚಾಮರಸನು ಪ್ರಭು ಲಿಂಗ ಲೀಲೆ
ಯಲ್ಲಿ ಸವಿಸ್ತೃತ ವರ್ಣನೆ ಮಾಡಿದ್ದಾನೆ. ಕೊನೆಗೆ
ಸಿದ್ಧರಾಮನು ಪ್ರಭುವಿನ ದಿವ್ಯ ಶಕ್ತಿಗೆ ಬೆರಗಾಗಿ ಪಶ್ಚಾ
ತ್ತಾಪದಗ್ಧಹೃದಯನಾಗಿ ಪಾದಗಳ ಮೇಲೆ ಬಿದ್ದು
"ಆಳ್ದನೊಡನೆ ಆಳು ಮುನಿದರೆ ಆರು ಕೆಡುವರು
ಪ್ರಭುವೇ? ನಟ್ಟಡವಿಯೊಳು ಇರುಳು ಹಗಲೆನ್ನದೆ
ನಾನು ಅಪ್ಪಾ, ಅಯ್ಯಾ, ಎಂದರಸುತ್ತ ಹೋದರೆ
ನಾನಿದ್ದೇನೆ ಬಾ ಮಗನೇ, ಎಂದು ಕರೆದು ಎನ್ನ ಕಂಬ
ನಿದೊಡೆದು, ನಿಜವ ತೋರುವ ಪಾದವಿಂದು ಎನ್ನಲ್ಲಿಗೆ
ನಡೆದು ಬಂದರೆ ನಾನರಿಯದೆ ಮರುಳುಗೊಂ
ಡೆನು." ಎಂದು ತನ್ನ ಪರಾಧಗಳನ್ನು ಹಳಿದುಕೊಳ್ಳುತ್ತಿ
ರಲು ಪ್ರಭುದೇವರು ಕರುಣದಿಂದ ಪದತಲದಲ್ಲಿ ಬಿದ್ದು
ಹೊರಳಾಡುತ್ತಿರುವ ಸಿದ್ಧರಾಮನ ಹೆರೆನೊಸಲನ್ನು
ಹಿಡಿದು ಮೇಲಕ್ಕೆತ್ತಿ ಹರದಲ್ಲಿ ಕುಳ್ಳಿರಿಸಿಕೊಂಡು ಹೆತ್ತ
ತಂದೆ ಪುತ್ರನನ್ನು ಬೋಳೈಸುವಂತೆ ಸಂತೈಸಿದನು.
ಆಗ ಸಿದ್ಧರಾಮನು. ಸ್ವಾಮಿ,

"ಪುಣ್ಯ ಪಾಪಗಳರಿಯದ ಮುನ್ನ ಅನೇಕ ಭವದಲ್ಲಿ
ಬಂದು ನಿಮ್ಮ ನಿಲವ ನರಿಯದೆ ಕೆಟ್ಟೆನಯ್ಯ. ಇಂದು
ನಿಮಗೆ ಶರಣು ಹೊಕ್ಕೆನು. ಪ್ರಭುವೇ, ನಾ ನಿಮ್ಮ
ನೆಂದೂ ಅಗಲದಂತೆ ಮಾಡಯ್ಯಾ. ನಿಮ್ಮ ಧರ್ಮದ
ಲೊಂದು ಬೇಡುವೆ, ಎನ್ನ ಕರ್ಮ ಬಂಧವ ಬಿಡುವಂತೆ
ಉಪದೇಶ ಮಾಡಯ್ಯಾ ಪ್ರಭುವೇ ಕಪಿಲ ಸಿದ್ಧ ಮಲ್ಲಿ
ಕಾರ್ಜುನ.

"ಅಯ್ಯ ಕಾಯ ಲಿಂಗವೋ? ಕಾಯದಲ್ಲಿ ಸಾರಿಪ್ಪ
ಲಿಂಗ ಲಿಂಗವೊ? ಪ್ರಾಣಲಿಂಗವೊ ಪ್ರಾಣದಲ್ಲಿ ಸಾರಿಪ್ಪ
ಲಿಂಗ ಲಿಂಗವೊ? ಜ್ಞಾನಲಿಂಗವೊ ಜ್ಞಾನದ ಮೊನೆಯ
ಬೆಳಗುವ ಲಿಂಗ ಲಿಂಗವೊ? ಲಿಂಗಪ್ರಾಣ, ಪ್ರಾಣಲಿಂಗ
ವೆಂಬುದೇತೆಂದರಿಯೆನು. ನಿಮ್ಮ ಕಾಯದ ಕರಸ್ಥಲವ
ಸಾರಿಪ್ಪ ಲಿಂಗ, ಪ್ರಾಣದೊಳಗೆ ವೇದ್ಯವಾದ ಪರಿ
ಯನ್ನು. ಪದೇಶಿಸಿ ಕೃಪೆಯ ಮಾಡಾ ಪ್ರಭುವೇ ಕಪಿಲ
ಸಿದ್ಧ ಮಲ್ಲಿಕಾರ್ಜುನ."

ಎಂಬುದಾಗಿ ಇಷ್ಟಲಿಂಗ ಪ್ರಾಣಲಿಂಗ ಭೇದಗ
ಳನ್ನು ಪ್ರಭುವಿನಲ್ಲಿ ಅರಿಕೆ ಮಾಡಿಕೊಳ್ಳಲು ಪ್ರಭು
ದೇವರು ಸಿದ್ಧರಾಮನ ಕೈಂಕರ್ಯ ಭಾವಕ್ಕೆ ಬೆರಗಾಗಿ
"ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನ್ನು ಆರು
ಬಲ್ಲರು ಹೇಳಾ? ಅಂತರಂಗವೆಂಬ ಶಬ್ದಕ್ಕೆ ಬಹಿರಂಗ
ಮುಂದುಗೊಂಡಿಪ್ಪದು. ಬಹಿರಂಗವೆಂಬ ಶಬ್ದಕ್ಕೆ ಅಂತ
ರಂಗ ಮುಂದುಗೊಂಡಿಪ್ಪದು. ಮನವನಡೆಗೊಂಡು
ಲಿಂಗದ ಅರಿವು ವಿಚಾರವ್ಯಾಕುಲಕ್ಕೊಳಗಾಗಬಾರ
ದೆಂದು ಮನ ಭಾವ ಜ್ಞಾನ ನೋಟವ ಕಂಡು ಕರಸ್ಥಲ
ದಲ್ಲಿ ನಿಕ್ಷೇಪಿಸಿ ಅಂತರಂಗ ಬಹಿರಂಗವೆರಡರಿಯದೆ
ಅನಿಮಿಷನಾಗಿಪ್ಪನ ಕಾಣೆನು. ಪ್ರಾಣ ಲಿಂಗದ
ಪ್ರಸನ್ನದ ಮುಖವ ನೋಡಿ ಪರಿಣಾಮಿಸಲೋಸುಗ
ತೇಜವೆಂಬ ದರ್ಪಣವ ಹಿಡಿಪ್ಪ ನೋಡಯ್ಯ. ಗುಹೇ
ಶ್ವರ ಲಿಂಗದಲ್ಲಿ ನಿಜವನೈದಿಹೆನೆಂದರೆ ಕುರುಹು ವಿಡಿದು
ಕುರುಗೆಡಬೇಕು ನೋಡಾ ಸಿದ್ಧರಾಮಯ್ಯ" "ಸಿದ್ಧ
ರಾಮ, ಇನ್ನು ಕೇಳು ಅಂತರಂಗದ ಚಿತ್ಕಳೆಯೇ ಕರ
ದಿಷ್ಟ ಲಿಂಗವಾಗಿರಬೇಕು. ಆ ಕರಸ್ಥಲದ ಲಿಂಗವೇ
ಸರ್ವಾಂಗವನ್ನು ಅವಗ್ರಹಿಸಬೇಕು. ತನ್ನ ಮೂಲಕ
ದೇಹ, ಮನಸ್ಸು, ಪ್ರಾಣ, ಇಂದ್ರಿಯಗಳೆಲ್ಲ ಲಿಂಗ
ಕಲಾಪ್ರಪೂರ್ಣಗೊಳ್ಳಬೇಕು. ಆಗಲೇ ಅಖಂಡ
ಸಾಕ್ಷಾತ್ಕಾರ ಇಲ್ಲದಿದ್ದರೆ ಉಳಿದುದೆಲ್ಲ ಖಂಡಜ್ಞಾನ.

ಇದೇ ಮಾರ್ಗದಲ್ಲಿ ನಡೆದ ನಾನು ನಿತ್ಯ ಸುಖಿಯಾದೆ. ನೀನು ಸಾಧಿಸಿದ ಸಿದ್ಧಿಯೇತಕ್ಕೆ? ಕತ್ತಲಲ್ಲಿ ನಿನ್ನ ಸಿದ್ಧಿಗೆ ಕಣ್ಣಿಲ್ಲ. ಕತ್ತಲಲ್ಲೂ ಕಣ್ಣು ಕಾಣಿಸಬೇಕು." ಎಂದನು. ಆಗ ಸಿದ್ಧರಾಮನು "ಸ್ವಾಮಿ, ನಿಮ್ಮ ಕರಸ್ಥಲದ ಇಷ್ಟ ಲಿಂಗದ ಘನವನುಪಮಿಸ ಬಲ್ಲವರಾರು? ನಿಮ್ಮ ಮಹಿಮೆಯನ್ನು ಅರಿವಡೆ ನಾನೇತರೊಳಗೇನಪ್ಪೆನಯ್ಯ? ಅಯ್ಯ, ಇಷ್ಟಲಿಂಗವ ಮುಟ್ಟಿಹ ಶರಣರೊಳಗೆ ಹುಟ್ಟಿದ ಸ್ಥಲವೇನೆಂಬುದನ್ನು ತಿಳುಹಿ ನನ್ನನ್ನು ಉಳುಹಿಕೊಳ್ಳಬೇಕು". ಎಂದು ನುಡಿಯಲು ಪ್ರಭುದೇವರು. "ಅಯ್ಯಾ ಸಿದ್ಧರಾಮ, ಆಚಾರ ಲಿಂಗದ ಬಳಿವಿಡಿದು ಗುರುಲಿಂಗವನ್ನೂ ಗುರುಲಿಂಗದ ಬಳಿವಿಡಿದು ಶಿವಲಿಂಗವನ್ನೂ ಶಿವಲಿಂಗದಿಂದ ಜಂಗಮಲಿಂಗವನ್ನೂ, ಜಂಗಮಲಿಂಗದಿಂದ ಪ್ರಸಾದ ಲಿಂಗವನ್ನು, ಪ್ರಸಾದಲಿಂಗದಿಂದ ಮಹಾಲಿಂಗವನ್ನೂ, ಕಾಣಬೇಕು. ಈ ರೀತಿ ಷಟಸ್ಥಲ ಧಾತುವನ್ನು ಸಂಬಂಧಿಸಿ ಒಂದು ಮಾಡಿಕೊಳ್ಳುವ ಅನುವನ್ನು ಸಂಗನ ಬಸವಣ್ಣ ಬಲ್ಲ; ಆತನನ್ನೇ ಬೆಸಗೊಳ್ಳೋಣ. ನಡೆ ಕಲ್ಯಾಣಕ್ಕೆ ಹೋಗೋಣ. ಅಲ್ಲಿ ಶರಣ ಜನಸಂದೋಹವನ್ನು ಸೇರಿ, ಅವರಿಂದಲೇ ಎಲ್ಲವನ್ನೂ ಅರಿತು ಸುಖಹೊಂದು" ಎಂದು ನುಡಿಯುತ್ತಿರುವ ಪ್ರಭುದೇವರ ನುಡಿ ಕೇಳಿ ಅವರ ಕರುಣಾರ್ದ್ರ ದಯಾಮಯ ಹೃದಯ ಸಂಪತ್ತಿಗೂ, ಶಿವಾದ್ವೈತ ತತ್ತ್ವಾನುಸಂಧಾನದಿಂದ ಪರಿಪಕ್ವಗೊಂಡ ಅಪೂರ್ವ ತೇಜಸ್ಸಿಗೂ, ಬೆರಗಾಗಿ ಅವರನ್ನು ಹಿಂಬಾಲಿಸಿ ಕಲ್ಯಾಣದತ್ತ ತೆರಳಿದನು.

## — ಕಲ್ಯಾಣದಲ್ಲಿ ಸಿದ್ಧರಾಮ —

ಬಸವಣ್ಣನವರ ಮಹಾಮನೆ ಮಹಾಮನೆಯೇ; ಆ ಮನೆಯಲ್ಲಿ ಏನು ನಡೆಯುತ್ತದೆ? ಏಷ್ಟು ನಡೆದಿದೆಯೆಂಬುದನ್ನು ವರ್ಷಗಟ್ಟಲೆ ಕುಳಿತು ಹೇಳಬೇಕು ಮತ್ತು ಕೇಳಬೇಕು. ಅದೊಂದು ಶಿವಶರಣರ ಮಹಾಕೋಶ. ಅಷ್ಟೊಂದು ಶಿವಾನುಭವಿಗಳು ಏಕ ಕಾಲದಲ್ಲಿ ಸೇರಬೇಕಾದರೆ ಬಸವಣ್ಣನವರ ಪ್ರಭಾವ ಮುದ್ರೆಯೆಂತಹುದು? ಅವರ ಆಳ್ತನವೇನು? ಅನುಭವ ಸಂಪತ್ತಿಯೇನು? ಆ ಅಯಸ್ಕಾಂತದ ಆಕರ್ಷಣೆಯೆಂತಹುದೆಂಬುದು ಊಹಿಸುವುದಕ್ಕೂ ಕಠಿಣವಾದುದು. ಅಂತೆಯೇ ವೈರಾಗ್ಯ ಚಕ್ರವರ್ತಿಯೆನಿಸಿದ ಮಹಾಜ್ಞಾನಿ ಪ್ರಭುದೇವರೂ ಕೂಡ ಬಳ್ಳಿಗಾವಿ ಬನವಸೆ ಪ್ರಾಂತದತ್ತಣಿಂದ ಆಕರ್ಷಿತರಾಗಿ ಬರುತ್ತ ದಾರಿಯುದ್ದಕೂ ಪ್ರಭುದೇವನು ಸಿದ್ಧರಾಮನಿಗೆ ಅಲ್ಲಿನ ಶರಣ ಸಂದೋಹದ ಅಂತರಂಗ ಬಹಿರಂಗ ಶುದ್ಧಿಯನ್ನೂ, ಶಿವತತ್ತ್ವ ಸಂಪತ್ತಿಯ ಬೃಹತ್ತುಗಳನ್ನೂ ಹೇಳುತ್ತ ಬಸವಣ್ಣನ ವಿಚಾರವಾಗಿ "ಕೇಳು ಸಿದ್ಧರಾಮ, ಶಿವ ಗುರುವೆಂದು ಬಲ್ಲಾತನೇ ಗುರು, ಶಿವ ಲಿಂಗವೆಂದು ಬಲ್ಲಾತನೇ ಗುರು. ಶಿವ ಜಂಗಮವೆಂದು ಬಲ್ಲಾತನೇ ಗುರು. ಶಿವ ಆಚಾರವೆಂದು ಬಲ್ಲಾತನೇ ಗುರು. ಇಂತು ಪಂಚವಿಧವೇ ಪಂಚಬ್ರಹವೆಂದು ಅರಿದ ಮಹಾ ಮಹಿಮ ಸಂಗನ ಬಸವಣ್ಣನು ಎನಗೆಯೂ ಗುರು. ನಿನಗೆಯೂ ಗುರು. ಜಗವೆಲ್ಲಕ್ಕೆಯೂ ಗುರು. ಆತನಲ್ಲಿ ಸೇರಿ ಸುಖಿಯಾಗು. ಅಗೋ ಆಲ್ಲಿ ಕಾಣುವುದೇ ಕಲ್ಯಾಣ." ಎಂದು ದೂರದಿಂದಲೇ ಕಲ್ಯಾಣವನ್ನು ತೋರಿಸಿ,

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗಿತ್ತಯ್ಯ ಶಿವನ ಪ್ರಕಾಶ. ಆ ಬೆಳಗಿನೊಳಗೊಪ್ಪುತ್ತಿರ್ದರಯ್ಯ ಅಸಂಖ್ಯಾತಭಕ್ತ ಮಹಾಗಣಂಗಳು, ಶಿವಭಕ್ತರಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ? ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮ"

ಇಂತೆಂದು ಕ್ರೋಢೀಚರಿಸಿ ಕಲ್ಯಾಣದ ಬಸವಾದಿ ಪ್ರಮಥರ ಮಹತಿಯನ್ನು ಮನವಾರೆ ಹೊಗಳಿ ಖ್ಯಾತಿವೆತ್ತ ಕಲ್ಯಾಣಪುರ ಪ್ರವೇಶ ಮಾಡಿದನು. ಪ್ರಭುದೇವರಂಥ ವೈರಾಗ್ಯ ಚಕ್ರವರ್ತಿ ಜಂಗಮ ಪುಂಗವ "ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆ" ಎಂಬ ಮಾತಿನಿಂದಲೂ, "ಎನಗೆಯೂ ಗುರು ನಿನಗೆಯೂ ಗುರು; ಜಗವೆಲ್ಲಕ್ಕೆಯೂ ಗುರು" ಎಂಬ ಮಾತಿನಿಂದಲೂ, ಬಸವಣ್ಣನವರು ಎಂಥ ಉನ್ನತ ಮಟ್ಟದ ಗುರುತ್ವ ಗೌರವ ಸ್ಥಾನದಲ್ಲಿದ್ದರೆಂಬುದು ವ್ಯಕ್ತವಾಗದಿರದು. ಆದರೂ ನಿರಹಂಕಾರದ ಸಾಕಾರ ಸ್ವರೂಪಿಬಸವಣ್ಣನವರು.



"ಬಸವ ಬಾರೈ, ಮರ್ತ್ಯ ಲೋಕದೊಳಗೆ ಭಕ್ತರುಂಟೇ? ಹೇಳಯ್ಯ, ಮತ್ತಾರೂ ಇಲ್ಲಯ್ಯ! ಮತ್ತಾರೂ ಇಲ್ಲಯ್ಯ! ಮತ್ತಾರೂ ಇಲ್ಲಯ್ಯ!! ನಾನೊಬ್ಬನೇ ಭಕ್ತನು. ಮರ್ತ್ಯ ಲೋಕದೊಳಗಣ ಭಕ್ತರೆಲ್ಲರೂ ಜಂಗಮ ಲಿಂಗ, ನೀನೇ ಅಯ್ಯ! ಕೂಡಲ ಸಂಗಮ ದೇವ."

ಈ ಕೈಂಕರ್ಯದ ಪರಮಾವಧಿಯ ಜೀವನ ಸೂತ್ರದ ವೈಶಿಷ್ಟ್ಯವುಳ್ಳವರು. ಪ್ರಭುವೇನೂ ದಾಕ್ಷಿಣ್ಯ ಜೀವಿಯಲ್ಲ. ಲೋಪವಿದ್ದರೆ ಲೋಪವೆಂದುದ್ಘಾಟಿಸಿ ಖಂಡಿಸುವ ವೀರ ವೈರಾಗ್ಯಶಾಲಿ. ಇನ್ನೊಬ್ಬರನ್ನು ತಿದ್ದಿ ದಾರಿಗೆ ತರುವಲ್ಲಿ ಎಳ್ಳಷ್ಟೂ ಭಯವಿಲ್ಲದವನು. ಅನ್ಯ ಸಂಪ್ರದಾಯದವರೂ ಪ್ರಭುವನ್ನು ವಿಶೇಷ ಗೌರವದಿಂದ ಕಾಣುತ್ತಿದ್ದರು. "ಅಲ್ಲಮ" ಎಂಬ ಹೆಸರೂ ಅನ್ಯ ಸಂಪ್ರದಾಯದಿಂದಲೇ ಬಂದಿದೆಯೆಂದು ಹಲ ಕೆಲವರ ಅಭಿಪ್ರಾಯ. ಪ್ರಕೃತ ಇದು ಅನವಶ್ಯಕ. ಇಂಥ ಪ್ರಭುವಿನ ಹೃದಯದಲ್ಲಿ ಬಸವಣ್ಣ ಉನ್ನತ ಸ್ಥಾನವಡರಿ ಕುಳಿತ್ತಿದ್ದ. ಆತನ ಭಕ್ತಿ ಬೆಳವಣಿಗೆಯನ್ನು ಸಸಿನೆ ಮಾಡಬೇಕೆಂಬ ವಾತ್ಸಲ್ಯವೂ ಇತ್ತು. ನಡೆಯುವ ಬಸವನೆಂಬ ಕುದುರೆ ಎಡವುತ್ತದೆ. ಅದನ್ನು ಸರಿಮಾಡಿ ಕಾರ್ಯರಂಗದಲ್ಲಿ ಶುದ್ಧಿಗೊಳಿಸಬೇಕೆಂಬ ಕಾರುಣ್ಯದಿಂದಲೇ ಕಲ್ಯಾಣಕ್ಕೆ ಪ್ರಭುವು ಬರಬೇಕಾಗಿತ್ತು. ಬಸವಣ್ಣನವರೂ ಹಾಗೆಯೇ. ಅವರಿಗಿದ್ದುದು ಧಾರ್ಮಿಕ ರಾಜಕೀಯ ಕ್ಷೇತ್ರಗಳ ಹಾಸು ಹೊಕ್ಕು ಜೀವನ. ಇಂಥ ಜೀವನ ಪ್ರಜಾಕೋಟಿಯದೂ ಆಗಬೇಕೆಂಬುದೇ ಅವರ ದಿವ್ಯ ಭವ್ಯ ಕನಸು. ಅವರ ಈ ಭವ್ಯ ಕನಸು ನನಸಾಗುವ ಭದ್ರ ಭವನದ ಬುನಾದಿ ತೋಡುತ್ತಿದ್ದರು. ಕಲ್ಯಾಣ ನಗರದಲ್ಲಿ.

ಪ್ರಭುವು ಸಿದ್ಧರಾಮನೊಡನೆ ಮಹಾಮನೆಯ ಮುಂಭಾಗಕ್ಕೆ ಬಂದರು. ಬಾಗಿಲಲ್ಲಿ ಅಪ್ಪಣ್ಣ ಶರಣರು ನಿಂತಿದ್ದರು. ದಿವ್ಯ ತೇಜೋವಿಶಿಷ್ಟ ಜಂಗಮ ಮೂರ್ತಿಯನ್ನೂ ಅಪೂರ್ವ ಕಳೆಯಿಂದ ತುಂಬಿದ ನವತರುಣಯೋಗಿಯನ್ನೂ ಕಣ್ಣುತುಂಬನೋಡಿ ಅಚ್ಚರಿಗೊಂಡನು. ಈ ಆನಂದದ ಸುದ್ದಿಯನ್ನು ಬಸವಣ್ಣನಿಗೆ ಮುಟ್ಟಿಸಬೇಕೆಂದು ಓಡಿ ಒಳಗೆ ಹೋದನು. ಸಂಗನ ಬಸವಣ್ಣನವರು ಶಿವಲಿಂಗಾರ್ಚನಾ ಪರವಸ ಸುಖದೊಳೋಲಾಡುತ್ತ ಪರವಶಭಾವದಲ್ಲಿ ಮುಳುಗಿದ್ದರು. ಅಪ್ಪಣ್ಣ ಮೆಲ್ಲನೆ "ಕಂಗಳಲ್ಲಿ ಕರುಳಿಲ್ಲ, ಕಾಯದಲ್ಲಿ ಹೊರೆಯಿಲ್ಲ. ನುಡಿಯಲ್ಲಿ ಕಡೆಯಿಲ್ಲ. ನಡೆಯಲ್ಲಿ ಗತಿಯಿಲ್ಲ. ಇದೆಂತಹ ಸುಳುಹೆಂದರಿಯೆ ಇದೆಂತಹ ನಿಲುವೆಂದರಿಯಬಾರದು. ಮರುಳಿಲ್ಲದ ಮರಳು; ಅರಿವಿಲ್ಲದ ಅರಿವು; ಬಸವಪ್ರಿಯ ಕೂಡಲ ಚನ್ನಸಂಗಯ್ಯನ ಬರವು ಕೌತುಕವಾಯಿತ್ತೆನಗೆ" ಎಂದು ಉಸುರಿದ. ಬಸವಣ್ಣ "ಬಸವ ಪ್ರಿಯ ಕೂಡಲ ಚೆನ್ನ ಸಂಗಯ್ಯನ ಬರವು" ಎಂಬ ನುಡಿಗೇಳಿ ಲಿಂಗದಲ್ಲಿ ನಟ್ಟ ದೃಷ್ಟಿ ಕೀಳದೆಯೇ "ಎನ್ನ ಕಾಯವೇ ಭಕ್ತನಾಗಿರಲು, ಪ್ರಾಣವೇ ಜಂಗಮವಾಗಿರಲು ಬಳಿಕ ಅಲ್ಲಿ ಇಲ್ಲೆಂಬ ಭೇದವೇನು" ಎಂಬ ಮರವೆಯ ನುಡಿ ನುಡಿದ. ಲಿಂಗಾನಂದ ಏಳಗೊಡಗೊಳಲಿಲ್ಲ. ಪ್ರಭುವಿಗೂ ಇಲ್ಲೊಂದು ಕಪಟ ನಾಟಕವಾಡಿ ಸಿದ್ಧರಾಮನಿಗೆ ತೋರಿಸಬೇಕಾಗಿತ್ತು. ಬಸವಣ್ಣ ಜಂಗಮನನೊಡಗೊಂಡು ಬನ್ನಿ" ಎಂದು ಆಜ್ಞಾಪಿಸಿಬಿಟ್ಟ. ಹೊರಗೆ ಬಂದ ಅಪ್ಪಣ್ಣ ಮನ ಮನವೇಕಾರ್ಥವಾಗಿ, ಕಾಯಕ್ಕೆ ಕಾಯ ಸಂಬಧವಾಗಿ, ಪ್ರಾಣಕ್ಕೆ ಪ್ರಾಣ ಸಮದರುಶನವಾಗಿಪ್ಪರಲ್ಲಿ ತೆರೆಮರೆಯೆಂಬುದಿಲ್ಲ ನೋಡಯ್ಯಾ; ಸಂಗನಿಸ್ಸಂಗವಾಗಿಪ್ಪರಲ್ಲಿ ಉಪಚಾರಕ್ಕೆಇಂಬಿಲ್ಲ ನೋಡಯ್ಯ. ಬಸವನಟ್ಟಿದನು ಒಳಯಿಂಕೆ ಕೃಪೆ ಮಾಡಾ ಪ್ರಭುವೇ" ಎಂದು ಕರೆದನು. ಬಸವಣ್ಣನ ಈ ಆಪ್ತ ವ್ಯಕ್ತಿ ಅಪ್ಪಣ್ಣನೆಂದರಿದ ಪ್ರಭುವು "ಸರಿಯಾಯಿತು ಈಗ; ಮನ ಮನವೇಕಾರ್ಥವಾಗಿ ತನು ತನು ಒಂದಾಗಿ ಬೆರಸಿದ ಬಳಿಕ ಕರೆಯಲಿಲ್ಲ, ಎಂದರಿತ ನಿಮ್ಮ ಬಸವಣ್ಣನವರು ಬರಹೇಳೆಂದು ನಿನ್ನನ್ನು ಕರೆಯ ಕಳುಹಿದುದೇ ಕೊರತೆಯಯ್ಯ ಅಪ್ಪಣ್ಣ. ಆನಾಗದ ಮುನ್ನ ತಾನಾದೆನೆಂಬುವರಲ್ಲಿಗೆ ಗುಹೇಶ್ವರ ಲಿಂಗವು ಅಡಿಯಿಡುವುದಿಲ್ಲ. ಅಂಗದಲ್ಲಿ ಕ್ರಿಯೆಯಿರಲು ಮತ್ತೆ ಮಾತಿನಲ್ಲಿ ಅದ್ವೈತವ ನುಡಿಯುವ ಭೃತ್ಯಾಚಾರ ರಹಿತನಾದ ಬಸವಣ್ಣನ ಮಹಾಮನೆಯನ್ನು ಹೊಗಲಾಪೆನಯ್ಯ" ಎಂದು ಸಿದ್ಧರಾಮನ ಕಡೆ ತಿರುಗಿ "ಸಿದ್ಧರಾಮಯ್ಯ, ನಡೆ ಇಲ್ಲಿ ನಮಗಾಗ ಬೇಕಾದುದೇನೂ ಇಲ್ಲ. ಬಸವಣ್ಣ ಭೃತ್ಯಾಚಾರ ಹೀನನಾಗಿದ್ದಾನೆ." ಎಂದು ಕ್ರೋಧಗೊಂಡವನಂತೆ ನಟಿಸಿ

ಹಿಂದಿರುಗಿದನು. ಆಗ ಅಪ್ಪಣ್ಣ ಶರಣರು ಒಳಗೆ ಓಡಿ ಹೋಗಿ "ಸಂಗನ ಬಸವಣ್ಣ, ಮಾತಿನ ಮಾಲೆಯು ಬೊಮ್ಮವೇತರದೋ ? ಕಾಯ ಭಕ್ತನಾದರೆ ಭೃತ್ಯಾಚಾರವಿರಬೇಕು. ಪ್ರಾಣ ಜಂಗಮವಾದರೆ ಅರಿವಿರಬೇಕು. ಇಂತೀ ಭಕ್ತಿ ಜ್ಞಾನವುಳ್ಳವರಲ್ಲದೆ ಉಳಿದವರು ಭಕ್ತರಲ್ಲವೆಂದು ಜಂಗಮವು ಹಿಂದಿರುಗಿತು." ಎಂದು ಹೇಳುವಲ್ಲಿಯೇ ಚನ್ನಬಸವಣ್ಣನವರೂ ಈ ಸಮಾಚಾರವರಿತು ತ್ವರಿತವಾಗಿ ಓಡಿಬಂದು "ಸಂಗನಬಸವಣ್ಣ, ಯಾವ ಭಕ್ತಿಯ ಮಾಟವಿದು ? ಲಿಂಗವೇ ಜಂಗಮ, ಜಂಗಮವೇ ಲಿಂಗವೆಂದು ನಂಬಿದಲ್ಲಿ ಸಂಶಯ ಹುಟ್ಟಿದ ಬಳಿಕ ನಿನ್ನ ಭಕ್ತಿಯೆಂಬ ಹಾಲ ಹರವಿಯಲ್ಲಿ ಸಂಶಯವೆಂಬ ಹುಳಿ ಹೊಕ್ಕಂತಾಯಿತು. ಬಟ್ಟ ಬಯಲೇ ಗಟ್ಟಿಗೊಂಡು ರೂಪಾಗಿ ಗುರುವೇ ಸಂಗಮನಾಥನು ಅಂಗವಿಡಿದು ಮನೆಗೆ ಬಂದರೆ ಗಮ್ಮನೆ ಎದುರೆದ್ದು ಹೋಗಿ ವಂದಿಸಬೇಡವೇ ? ಕಣ್ಣರಿಯದಿದ್ದರೂ ಕರುಳರಿಯಲಿ ಲ್ಲವೇ ?" ಎಂದು ಎಚ್ಚರಿಸಿದೊಡನೆಯೇ ಬಸವಣ್ಣನವರು ಗಾಬರಿಯಾಗಿ "ಆಹಾ ಕೆಮ್ಮನೆ ಕೆಟ್ಟೆ" ನೆಂದು ಮರೆಗೆಟ್ಟು ಧೃತಿಗುಂದಿ ಬೆಳ್ಳಾಗಿ "ಜಂಗಮ ಮುನಿದರಿನ್ನೆಂತು ಬದುಕುವೆನಯ್ಯ" ಎನ್ನುತ್ತ "ಸಮಯವರಿತು ಎಚ್ಚರಿಸಿ ಉದ್ಧರಿಸಿದ ಗುರುವೇ" ಎಂದು ಚನ್ನಬಸವಣ್ಣನನ್ನು ಬಹು ವಿಧವಾಗಿ ಹೊಗಳುತ್ತ, ಚನ್ನಬಸವಣ್ಣ ಅಪ್ಪಣ್ಣ ಮೊದಲಾದ ಶರಣರೊಡಗೂಡಿ ಪ್ರಭುದೇವರಿರುವಲ್ಲಿಗೆ ತ್ವರಿತವಾಗಿ ಓಡುತ್ತ ಬಂದು ಲಲಾಟತಟಘಟಿತ ಕರಕಮಲನಾಗಿ ಪ್ರಭುವಿಗೆ ದಂಡವತ್ ಪ್ರಣಾಮಗೈದು. ಅಹಂಕಾರದಿಂದ ಕೆಮ್ಮನೆ ಕೆಟ್ಟೆನೈ ಗುರುವೇ. ಎನ್ನ ಪರಮ ಗುರುವೇ ಬಿಜಯಂಗೈಯ್ಯಬೇಕು. ಅರಿಯದ ತರಳ ಗುಣದೋಷವ ನೋಡುವರೇ ತಂದೆ. ಆನು ಮಾಡಿಹ ತಪ್ಪನೆಣಿಸಿಹೆನೆಂದರೆ ಗಣನೆಯಿಲ್ಲ. ನಡೆದು ತಪ್ಪುವೆನು, ನುಡಿದು ತಪ್ಪುವೆನು, ಮಾಡಿ ತಪ್ಪುವೆನು, ನೀಡಿ ತಪ್ಪುವೆನು, ಕೂಡಿ ತಪ್ಪುವೆನು, ಅರಿದು ತಪ್ಪುವೆನು, ಮರೆದು ತಪ್ಪುವೆನು, ಎನ್ನ ತಪ್ಪನೊಪ್ಪು ಮಾಡಿಕೊಳ್ಳಬೇಕಲ್ಲದೆ ಚಿತ್ತಕ್ಕೆ ತರಲಾಗದು ಕೂಡಲ ಸಂಗಮ ದೇವ." ಇತ್ಯಾದಿಯಾಗಿ ದೈನ್ಯೋಕ್ತಿಗಳಿಂದ ಪ್ರಭುದೇವರ ಮನಸ್ಸನ್ನು ಒಲಿಸುವ ಸಮಯಕ್ಕೆ ಸರಿಯಾಗಿ ಎಲ್ಲ ಶರಣರೂ ನೆರೆದರು. ಬಸವಣ್ಣನ ಕೈಂಕರ್ಯ ವಿಶಿಷ್ಟ ನಡೆಯನ್ನು ಸಿದ್ಧರಾಮನಿಗೆ ತೋರಿಸಲು ಒಳ್ಳೆಯ ಸಮಯವಾಯಿತೆಂದು ಕೆಣಕುತ್ತ ನುಡಿಯುವ ಮಾತಿನಿಂದ ಬಸವಣ್ಣನನ್ನು ಕುರಿತು.

"ಕೈಯಲ್ಲಿ ದೊಣ್ಣೆ ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಿಲ, ಲಿಂಗವಾರ್ತೆ ನಿನಗೇಕೆಹೇಳಾ ಬಸವಣ್ಣ. ಜಂಗಮವೇ ಲಿಂಗವೆಂಬ ಶಬ್ಧ ಸಂದೇಹ ಸೂತಕೆ ನೀನು. ಸಜ್ಜನರ ಸದ್ಭಕ್ತಿಯ ಮಾತು ನಿನಗೇಕೆ ಹೇಳಾ" ಜಂಗಮದಿಂಗಿತಾಕಾರವ ನೋಡಿ ಲಿಂಗವೆಂದರಿದ ಬಳಿಕ ಸದ್ಭಕ್ತರು ಮನ ಮನ ಬೆರಸಿದ ಕೂರ್ಮ ಶಿಶು ಸ್ನೇಹದಂತೆ ಕಾಣದ ಮುನ್ನವೇ ತೆರೆಹಿಲ್ಲದಿರಬೇಕು ನೋಡಾ ಬಂದ ಬರವನರಿಯದೆ, ನಿಂದ ನಿಲವ ನೋಡದೆ ಕೆಮ್ಮನೆ ಅಹಂಕಾರವ ಹೊತ್ತಿಪ್ಪರ ಗುಹೇಶ್ವರನೊಲ್ಲ ಕಾಣಾ ಬಸವಣ್ಣ."

ಎಂದು ಪಟ ಪಟ ಒಡಿನಿಂದ ಸಿಡಿಯುತ್ತಿರುವ ಅರಳುಗಳಂತೆ ನುಡಿಯ ಕಿಡಿ ಹಾರಿಸಿದ. ಆಗ ಬಸವಣ್ಣನವರು ಮನದಲ್ಲಿ ನೊಂದು "ಮುನ್ನೂರರುವತ್ತು ಕಾಲ ಸಾಧನೆಯ ಮಾಡಿ ಕಳನನೇರಿ ಕೈ ಮುರಿಯುವಂತಾಯಿತೆನ್ನ ಭಕ್ತಿ, ಎನಿಸು ಕಾಲ ಲಿಂಗಾರ್ಚನೆಯ ಮಾಡಿದೊಡೇನು ? ಮನದಲ್ಲಿ ದೃಢವಿಲ್ಲದನ್ನಕ್ಕರ ? ಎಂದು ಮರುಗಿ ಸೊರಗಿ "ಪ್ರಭುವೇ, ಎನ್ನ ಗುಣಾವಗುಣವ ಸಂಪಾದಿಸದಿರಯ್ಯ ಪ್ರತಿಯಿಲ್ಲದ ಅಪ್ರತಿಮ ನೀನು, ನಿನಗಾನು ಸರಿಯೆ ಅನುಪಮ ಮಹಿಮಾ. ನೀ ಮಾಡಲಾದೆನಯ್ಯ. ಕೂಡಲ ಸಂಗಮದೇವ. ಎನ್ನೊಡನೆ ಮುನಿವರೇ ಹೇಳಾ ? ಮರೆತು ಮಲಗಿರ್ದ ಮರುಳನಿಗೆ ಎಬ್ಬಿಸಿ ಹದುಳುವನೀಯ ಬಂದರೆ ಈ ಕಾಲಕ್ಕೆ ಕಲ್ಪಿತವಲ್ಲದ ಭಾಗ್ಯ ನಿನ್ನ ದಯೆಯಿಲ್ಲದೆ ಬೇರುಂಟೇ ? ಬಂದುಕುಂದನರಸುವರೇ ? ನಾನು ಪಶು. ನೀನು ಪತಿ. ಎನ್ನಲ್ಲಿ ಮರವೆ ಬಂದಿತ್ತು. ಇನ್ನು ಮರೆಯನು ಮರೆತರೆ ಕೂಡಲ ಸಂಗಮನ ರಾಣೀವಾಸದಾಣೆ. ಇದುವರೆಗೆ ಷೋಡಶೋಪಚಾರವ ಮಾಡುವ ಹಮ್ಮಿನಲ್ಲಿ ಬೆಂಡೆನು. ಕುಂದಾಯಿತು ಕುಂದನೆಣಿಸಬೇಡ ಪ್ರಭುವೇ"

"ಮಸಿಯ ನೇಸುಕಾಲ ಬೆಳಗಿದಕೇನು ! ಬಿಳಿದಾಗ ಬಲ್ಲುದೆ ? ... ನಿಮಿಷದ ಉದಾಶೀನ ಕೆಡಿಸಿತ್ತು.



ನಿಮ್ಮನು ನಂಬಿಯೂ ನಂಬದ ಡಂಭಕ ನಾನಯ್ಯ ! ಕೂಡಲಸಂಗಮ ದೇವಾ"

"ಎನಿಸುಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೇ ಅಯ್ಯ. ಎನಿಸು ಕಾಲ ನಿಮ್ಮ ಪೂಜಿಸಿ ಏನಯ್ಯ ಮನದಲ್ಲಿ ದೃಢವಿಲ್ಲದನ್ನಕ್ಕರ. ನಿಧಾನವ ಕಾಯ್ದಿರ್ದ ಬೆಂತರನ ವಿಧಿ ಎನಗಾಯ್ತು ಕಾಣಾ! ಕೂಡಲ ಸಂಗಮ ದೇವಾ."

ಕಣ್ಣೀರ್ಗರೆಯುತ್ತ ಕೈಂಕರ್ಯ ಪರಾಕಾಷ್ಠ ಭಾವದಿಂದ ಸ್ತೋತ್ರಮಾಡುತ್ತ ಪದತಲದಲ್ಲಿ ಬೀಳುತ್ತಿರುವ ಬಸವಣ್ಣನ ಸ್ಥಿತಿನೋಡಿ ಪ್ರಭುವಿನ ಮನಸ್ಸು ಕರಗಿ ಹೋಯಿತು. ಸಿದ್ಧರಾಮನಿಗೂ ಇದೊಂದು ಅಪೂರ್ವ ದೃಶ್ಯವನ್ನೇ ಕಂಡಂತಾಯಿತು ಸೊನ್ನಲಿಗೆಗೆ ಇದೇ ಪ್ರಭುದೇವರು ಬಂದಾಗ ತಾನು ತೋರಿಸಿದ ಪ್ರಚಂಡ ಔದ್ಧತ್ಯವೆಲ್ಲಿ? ಕಲಚೂರ್ಯ ರಾಜ್ಯದ ಪ್ರಧಾನ ಶಿರೋಮಣಿಯೂ, ಮಹಾ ಗುರುವೂ ಆದ ಬಸವಣ್ಣನ ಈ ಲೋಕೋತ್ತರ ಭಕ್ತಿಯ ಭಾವವೆಲ್ಲಿ?" ಹೀಗೆ ಮನಸ್ಸಿನಲ್ಲಿ ಯೋಚಿಸಿ ನಾಚಿ ತಲೆ ಕೆಳಗುಮಾಡಿದನು.

ಆಗ ಪ್ರಭುದೇವರು ಬಸವಣ್ಣನಿಗೆ ಭೃತ್ಯಾಚಾರವನ್ನು ಹೇಳುತ್ತ "ಬಸವಣ್ಣ, ಜಂಗಮವು ಹೊರಗಿರಲು ಲಿಂಗಾರ್ಚನೆಯಾವುದಯ್ಯ ? ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂತರೆ ತನ್ನ ತಾ ಮರೆದವರ ಕಂಡರೆ ನಮ್ಮ ಗುಹೇಶ್ವರಲಿಂಗ ಒಲಿಯುವ ಬಗೆಯೆಂತು ? ಲಿಂಗಜಂಗಮವ ಪೂಜಿಸಿ ಭಕ್ತನಾದೆನೆಂದರೆ ಭೃತ್ಯಾಚಾರ ಸದಾಚಾರವೇ ಮೊದಲು ನೋಡಾ" ಎಂದು ಪ್ರಭುದೇವರು ಭೃತ್ಯಾಚಾರದ ಮಾತೆತ್ತಿ ಮಾತನಾಡುತ್ತಿರಲು ಸಿದ್ಧರಾಮೇಶ್ವರನಿಗೂ ಸುಮ್ಮನೆ ಬಾಯ್ಮುಚ್ಚಿ ನಿಂತುಕೊಳ್ಳಬೇಕೆನ್ನಿಸಲಿಲ್ಲ. ಏನನ್ನಾದರೂ ಮಾತನಾಡೋಣವೆನ್ನಿಸಿತು ಬಸವಣ್ಣನ ಪಕ್ಷವಾಗಿ. ಬಸವಣ್ಣನ ಕಿಂಕರ ಭಾವ ಭಣತೆಗೆ ಮಾರು ಹೋಗಿದ್ದ ಸಿದ್ಧರಾಮ ಪ್ರಭುವಿನಲ್ಲಿ ಸುಮಾರು ಸಲಿಗೆಯನ್ನೂ ಸಂಪಾದಿಸಿದ್ದ. ಅದೇ ಸಲಿಗೆಯಿಂದಲೇ ಪ್ರಭುವನ್ನು ಕುರಿತು "ದೇವ ನಿಮ್ಮ ಶಕ್ತಿ ಆತನಲ್ಲಿಪ್ಪುದು ಕಂಡಯ್ಯ. ನಿಮ್ಮ ತಮ್ಮ ಭೇದವನ್ನಾರು ಅರುಹಬಲ್ಲರು ಹೇಳಯ್ಯ. ಬಸವಣ್ಣನಾರೆಂಬುದ ನಿಮ್ಮಲ್ಲಿ ನೀವೇ ತಿಳಿದು ಕೃಪೆಮಾಡಾ ಪ್ರಭುವೇ ?" ಎಂದು ಬಿನ್ನವಿಸಿ ಸುಮ್ಮನೆ ಬಸವಣ್ಣನತ್ತ ನಟ್ಟದೃಷ್ಟಿಯುಳ್ಳವನಾಗಿ ಕೈ ಕಟ್ಟಿ ತಲೆತಗ್ಗಿಸಿ ನಿಂತುಬಿಟ್ಟ.

ಇಷ್ಟರಲ್ಲಿ ಚನ್ನಬಸವಣ್ಣನವರು ಮಾತನಾಡಲೆಳಸಿ ಮುಂದೆ ಬಂದು ಕೈ ಮುಗಿದು ನಿಂತು "ಶರಣು ಶರಣು ಮಹಾ ಪ್ರಭುವೇ, ಭಕ್ತರಲ್ಲಿ ಯಾವಾಗಲೂ ಕುಂದು ಹೆಚ್ಚೆಂಬುದನರಿಯೆಯಾ, ನಿನ್ನ ಪ್ರಾಣವೇ ಬಸವಣ್ಣನ ಪ್ರಾಣ; ನಿನ್ನ ಕಾಯವೇ ಬಸವಣ್ಣನ ಕಾಯ. ನೀವಿಲ್ಲದಿರೆ ಬಸವಣ್ಣನಿಲ್ಲ. ಬಸವಣ್ಣನಿಲ್ಲದಿರೆ ನೀವಿಲ್ಲ. ಹೀಗೆ ಒಂದನ್ನೊಂದು ಬಿಚ್ಚಿ ಬೇರೆ ಮಾಡಲಾಗುವುದೇ ಪ್ರಭುವೇ? ಇಂತಿರಲು ಬರಿದೆ ಮುನಿಸು ಮಾಡುವರೇ ತಂದೆ? ನಡೆಯುವ ಕುದುರೆ ಮುಗ್ಗರಿಸಲೇ ಬೇಕು; ಅದನ್ನು ನಡಿಸಿಕೊಳ್ಳುವವರು ಸರಿಯಾಗಿ ಬುದ್ಧಿಗಲಿಸಿ ನಡೆಯಿಸಿ ಕೊಂಡರಾಯಿತು? ಹಾಗಲ್ಲದೆ ಮುಗ್ಗರಿಸಿತೆಂದು ಕೊಲ್ಲುವುದೇ? ಮಿಡಿ ಹರಿದು ಹಾಕುವುದುಚಿತವೇ? ಶಿಶುವಿನ ಗುಣದೋಷಗಳನ್ನು ತಂದೆ ತಾಯಿಗಳು ನೋಡುವರೇ? ಬಸವಣ್ಣನಿಗೆ ನೀನೇ ತಂದೆ ತಾಯಿ. ಬಯಸಿದೊಡಿಲ್ಲ ಭಾವಿಸಿದೊಡಿಲ್ಲ. ಬಳಲಿದೊಡಿಲ್ಲ. ತನ್ನಕಾಲಕ್ಕಲ್ಲದೆ ಬರುವುದೇ ಭಾಗ್ಯ. ನೀ ನೊಲಿದು ಬಂದರೆ ಬಸವಣ್ಣನ ಭಕ್ತಿ ಭಾವವಳವಟ್ಟು ಬರುವುದು. ಒಲಿದು ಬಿಜಯಂಗೆಯ್ಯಬೇಕು. ಮಹಾ ಪ್ರಭುವೇ," ಎಂದು ಪ್ರಾರ್ಥಿಸಿಕೊಂಡನು. ಅನಿತರಲ್ಲಿ ಮಡಿವಾಳ ಮಾಚಿದೇವನೂ ಮುಂದೆ ಬಂದು "ದೇವ, ಏನು ತಮ್ಮ ಮುನಿಸಿದು? ರಣ ಮಧ್ಯದಲ್ಲಿ ವೈರಿಗಳೆದುರಲ್ಲಿ ಮತ್ತನಾದರೆ ಕೊರತೆ, ಅಲ್ಲದೆ ಗರುಡಿಯಲ್ಲಿ ಸಾಧನೆ ಮಾಡುವಾಗ ತಪ್ಪಿದರಾವ ಕೊರತೆ? ಬಾಲಾಭ್ಯಾಸದ ಭಕ್ತಿಯಲ್ಲಿ ತಪ್ಪನ್ನು ಹುಡುಕಬೇಕೆ ? ಬಿಜಯಂಗೆಯ್ಯಬೇಕು. ಬಸವಣ್ಣನಾರೆಂಬುದ ನಿಮ್ಮಲ್ಲಿ ನೀವೇ ತಿಳಿಯಬೇಕು. ಇಗೋ ಎನ್ನ ತೊದಲು ನುಡಿ ಕೇಳಿ ನಿಮ್ಮ ಮುಂದೆ ನಾನಲ್ಲ" ಎನ್ನುತ್ತ—

"ಬಸಣ್ಣನೇ ಗುರುರೂಪಾಗಿ ಮರ್ತ್ಯಕ್ಕೆ ಬಂದನು. ಪ್ರಭುವೇ, ನೀವು ಜಂಗಮರೂಪಾಗಿ ಮರ್ತ್ಯಕ್ಕೆ ಬಂದಿರಿ; ಭಕ್ತಿಯ ಬೆಳವಣಿಗೆಗೆ ಬಸವಣ್ಣನೇ ಕಾರಣಿಕ

ನಾದ, ಅರಿವಿನ ಬೆಳವಣಿಗೆಗೆ ಚೆನ್ನಬಸವಣ್ಣನೇ ಕಾರಣಿಕನಾದ, ಈ ಇಬ್ಬರನ್ನೊಳಗೊಂಡ ಮಹಾಘನಕ್ಕೆ ನೀವು ಕಾರಣರಾದಿರಿ. ಇಂತು ಗುರುಲಿಂಗ ಜಂಗಮ ಒಂದೇ ಅಲ್ಲದೆ ವಿಭಿನ್ನ ಭಾವವುಂಟೆ? ಬಸವಣ್ಣ ಚೆನ್ನಬಸವಣ್ಣನವರ ಬಿನ್ನಪವ ಮೀರದೆ ಬಿಜಯಂಗೆಯ್ಯುವುದಯ್ಯ ಕಲಿದೇವರ ದೇವ"

ಕೆಚ್ಚಿನಿಂದ ನುಡಿದೇಬಿಟ್ಟ ಮಾಚಿದೇವ. ಆಗ ಎಲ್ಲ ಶರಣರೂ ನಾಮುಂದು ನೀ ಮುಂದೆಂದು ಬಂದು ಬಹು ವಿಧವಾಗಿ ಪ್ರಾರ್ಥನೆಮಾಡಿಕೊಳ್ಳಹತ್ತಿದರು. ಪ್ರಭುದೇವರಿಗೆ ಸಾಕುಬೇಕೆನ್ನುವಷ್ಟಾಯಿತು ಇವರೆಲ್ಲರ ಪ್ರಾರ್ಥನೆ. ಅಸಿತರಲ್ಲಿ ಮಹಾಮನೆಯಿಂದ ತಳಿರು ತೋರಣ ಛತ್ರಿ ಚಾಮರ ಸೀಗುರಿ ಪಂಚಮಹಾವಾದ್ಯಗಳೂ ಧೂಪ, ದೀಪ, ಆರತಿ, ಜಾಗಟೆ, ಘಂಟೆ ಮೊದಲಾದುವೂ ಸಂಭ್ರಮಗೊಂಡು ಬಂದುವು. ಆ ಮಹಾಮನೆಯ ಮಂಗಲ ಕಲಶಗಳಿಂತಿರುವ ನೀಲಾಂಬಿಕೆ ಗಂಗಾಂಬಿಕೆಯರು ಆರತಿ ಬೆಳಗಿ ನಿಂತರು. ಆಗ ಪ್ರಭುದೇವರು ಸಿದ್ಧರಾಮನಕಡೆ ತಿರುಗಿ ನಸುನಕ್ಕು ಮನಸ್ಸಿನಲ್ಲಿಯೇ ಬಹುವಿಧವಾಗಿ ಹರ್ಷಗೊಳ್ಳುತ್ತ "ಸಿದ್ಧರಾಮನಿಗೆ ಕಲ್ಯಾಣದ ಶರಣರ ನಡೆನುಡಿಯ ಒಂದು ಮುಖ ಮಾತ್ರ ಮನವರಿಕೆಯಾಯಿತು. ಇನ್ನು ಇವರ ಲಿಂಗಜ್ಞಾನದ ಆಸೀಮ ಪರಿಚಯಮಾಡಿಕೊಡಬೇಕೆಂದು ತನ್ನಲ್ಲಿಯೇ ಭಾವಿಸಿ, ಏನಯ್ಯ ಸಿದ್ಧರಾಮಾ, ಶರಣರ ನಡೆವಳಿಕೆಯಿದು ಮಾಡುವುದೊಂದು ಮಾತನಾಡುವುದೊಂದು ಆಗಿದೆಯಲ್ಲ. ಮೊದಲು ತಪ್ಪುಮಾಡುವುದು ಅನಂತರ ಕ್ಷಮೆ ಕೇಳುವದು. ಸರಿಯಾಯಿತು ಎಂದನು. ಆಗ ಸಿದ್ಧರಾಮನ "ಸ್ವಾಮಿ, ಆದಿ ಅನಾದಿ ಇಲ್ಲದಂದು ಬಸವಣ್ಣನೇ ಭಕ್ತ. ನಾದಬಿಂದು ಕಳೆಗಳಿಲ್ಲದಂದು ನೀನೇ ಜಂಗಮ. ಶಿವಶಕ್ತಿಗಳು ಉದಯವಾಗದ ಮುನ್ನ ಬಸವಣ್ಣನೇ ಭಕ್ತ. ಸುರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೇ ಜಂಗಮ, ಈ ಉಭಯ ಭಾವದಲ್ಲಿ ಭೇದವುಂಟೆ? ಕಪಿಲಸಿದ್ಧ ಮಲ್ಲಿನಾಥಯ್ಯಾ ಬಸವಣ್ಣನಾರೆಂಬುದು ನಿಮ್ಮಲ್ಲಿ ನೀವೇ ತಿಳಿದು ನೋಡಿ ಕೃಪೆ ಮಾಡು ಪ್ರಭುವೇ. ಅಖಿಲ ಭಕ್ತ ಕೋಟಿಯನುದ್ಧರಿಸಲು ಮೂರ್ತಿಗೊಂಡು ಒಲಿದು ಬರುತ್ತಿರುವಾಗ ಇವರ ಗತಿ ಮತಿಯನ್ನಾದರೂ ಏಕೆ ವಿಚಾರಿಸುವುದು? ಒಲಿದು ಬಂದು ಸಿಟ್ಟಾಗುವುದೇಕೆ? ದಯಮಾಡಿಸಿದರಾಯಿತು." ಎಂದನು. ಸಿದ್ಧರಾಮನನ್ನು ಕುರಿತು ಪ್ರಭುವು "ಸಿದ್ಧರಾಮಾ, ಇವರೆಲ್ಲ ಮಹಾ ಶರಣರು ಮರ್ತ್ಯಲೋಕದಲ್ಲಿ ನೂತನ ಸಂಪ್ರದಾಯವನ್ನೇತಂದು ಉದ್ಧರಿಸಲೆತ್ನಿಸುವ ಮಹಾಂತರು. ಬಸವಣ್ಣ ಮಹಾಜ್ಞಾನಿ, ಶಿವಾಚಾರ ಚಕ್ರವರ್ತಿ, ಸರ್ವಾಚಾರ ಸಂಪನ್ನ. ಶಿವಸಮಯ ಪ್ರತಿಷ್ಠಾಪನಾಚಾರ್ಯ, ಆತನಲ್ಲಿ ಮುನಿಸಿಲ್ಲ. ಆಗಲಿ ಅವನ ಮಹಾಮನೆ ಪ್ರವೇಶಮಾಡೋಣ" ಎನ್ನುತ್ತ–

"ಆಯತದಲ್ಲಿ ಪೂರ್ವಾಚಾರಿಯ ಕಂಡೆ, ಸ್ವಾಯತದಲ್ಲಿ ಪೂರ್ವಾಚಾರಿಯ ಕಂಡೆ, ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ, ಗುಹೇಶ್ವರ ಲಿಂಗದಲ್ಲಿ ಪರಮ ಪೂರ್ವಾಚಾರಿ ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನಯ್ಯ"

ನಮಸ್ಕರಿಸಿ ನಿಂತು ಅತ್ಯಂತಾನಂದ ಭರಿತನಾಗಿ ಅಶ್ರುಧಾರಾ ಪೂರ್ಣಲೋಚನಾಗಿ 'ಸಿದ್ಧರಾಮಾ' ಬಸವಣ್ಣನಾರೆಂದು ಬಲ್ಲೆಯಾ ಕೇಳು ಅವನು ಪರಮ ಗುರು....ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರ ಲಿಂಗದೊಳಗೆ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನಿಂದನಿಲವನುಪಮಿಸಬಾರದುಕಾಣಾ ಸಿದ್ಧರಾಮಾ' ಎಂದು ಮುಂದಕ್ಕೆ ಮಹಾಮನೆಯತ್ತ ಶರಣ ಸಂದೋಹವನ್ನು ಅನುಸರಿಸಿ ಸಾವಕಾಶ ಹೆಜ್ಜೆಯಿಡಹತ್ತಿದನು. ಸಿದ್ಧರಾಮನಿಗೂ ತಿಳಿಯಿತು ಇದುವರೆಗೆ ಪ್ರಭುವು ಮಾಡಿದ ಲೀಲೆಯೆಲ್ಲ ನನ್ನ ಮನದ ಕಾಳಿಕೆ ಕಳೆಯಲೆಂದು ಹೂಡಿದ ನಾಟಕವೆಂದು. ಪುನಃ ಪ್ರಭುವು "ಸಿದ್ಧರಾಮಾ, ಲೋಕವೆಲ್ಲ ತನುವ, ಮನವ, ಧನವ ಗೆಲಲರಿಯದೆ ಭ್ರಮೆಯಲ್ಲಿ ಕೊಚ್ಚಿಹೋಗುತ್ತಿದೆ. ಆ ಮೂರನ್ನು ಗೆದ್ದವನೆಂದರೆ ಬಸವಣ್ಣನೊಬ್ಬನೇ. ತನುವ ದಾಸೋಹಕ್ಕೆ ಸವಿಸಿ, ಮನವ ಲಿಂಗಧ್ಯಾನದಲ್ಲಿ ಸವಿಸಿ. ಧನವ ಜಂಗಮದಲ್ಲಿ ಸವೆಸಿ ಗೆಲಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನ್ನೂ ಕಾಣೆನಯ್ಯ" ಎಂದನು. ಆಗ ಸಿದ್ಧರಾಮನು–

"ಜಲದಲ್ಲಿ ಉದ್ಭವಿಸಿ ಮತ್ತೆ ಜಲವು ತಾನಲ್ಲ. ಜಲವೆಂದಿಪ್ಪುದೀ ಲೋಕವೆಲ್ಲ. ಪರಮ ಗುರುಬಸವಣ್ಣ



ಜಗವ ಪಾಲಿಸಬರಲು ಎನ್ನಪರಿಭ್ರಮದ ದಂದುಗ ಹರಿಯಿತ್ತಯ್ಯ. ಆ ಶುದ್ಧಿಯನರಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲ ನುಡಿಯುತ್ತಿಹರು. ಸತ್ತಪ್ರಾಣವನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೇ ಶಿವಂಗಲ್ಲದೆ? ಶಿವಗುರು ಬಸವಣ್ಣ, ಬಸವಗುರು ಶಿವನಾಗಿ ಸೆಸೆಗೆಟ್ಟ ದೇವತಾ ಪಶುಗಳಿಗೆ ಪಶುಪತಿಯಾದನು. ಬಸವಣ್ಣನ ನೆನಹು ಸುಖ ಸಮುದ್ರವಯ್ಯ! ಕಪಿಲಸಿದ್ಧ ಮಲ್ಲಿಕಾರ್ಜುನ ಬಸವಣ್ಣನ ತೋರಿಸಿದ ಕಾರಣ ನಾನು ಬದುಕಿದೆನು!"

ಎಂದು ಪ್ರಭುವನ್ನು ಅತ್ಯಂತ ಭಕ್ತಿ ಭಾವದಿಂದ ಕೊಂಡಾಡ ಹತ್ತಿದನು. ಬಸವಣ್ಣನಿಗೂ ತಿಳಿಯಿತು ಇಷ್ಟು ಸಲಿಗೆಯಿಂದ ಪ್ರಭುವಿನೊಡನೆ ಮಾತನಾಡುವ ವ್ಯಕ್ತಿ ಖ್ಯಾತಿವೆತ್ತ ಯೌಗಿಕ ಮಾರ್ಗದ ಸೊನ್ನಲಿಗೆಯ ಸಿದ್ಧರಾಮ ದೇವರೆಂದು. ಈತನು ತನ್ನನ್ನು ಪರಮ ಗುರುವೆಂದು ಕೊಂಡಾಡುತ್ತಾನೆ ಸರಿ. ಈತನಿಗೆ ಅಂಗದ ಮೇಲೆ ಲಿಂಗವಿಲ್ಲ. ಪ್ರಭುವಿನ ಬೆನ್ನು ಹತ್ತಿ ಬಂದಿದ್ದಾನೆ ಮುಂದೆ....? ಹೇಗಾಗುವುದೋ ನೋಡೋಣವೆಂದು ಎಲ್ಲರೂ ಮಹಾಮನೆಯತ್ತ ನಡೆದಿದ್ದಾರೆ. ಪ್ರಭುದೇವರ ಸಿದ್ಧರಾಮರ ಹೊಗಳಿಕೆ ಅವರಿಗೆ ಹೊನ್ನ ಶೂಲದಂತೆ ಚುಚ್ಚುತ್ತಿದೆ.

ಇದೇ ಬಸವಾದಿ ಪ್ರಮಥರ ಹೃದಯ ಸಂಪತ್ತು. ಮಹಾ ಮನೆಯ ವೈಭವ ಪ್ರತೀಕ. ಇಂಥ ಲೋಕೋತ್ತರ ನಡೆವಳಿಕೆ ತೀರಾ ಅಪರೂಪ. ಒಬ್ಬೊಬ್ಬ ಶರಣನ ನಡೆನುಡಿಗಳು ಪವಿತ್ರವಾದುವು. ಪರಿಪಕ್ವಗೊಂಡವುಗಳು. ಇಲ್ಲಿ ಆಚಾರ ವಿಚಾರ ಸಾಮರಸ್ಯಭಾವವು ಶರಣರೆಲ್ಲರುಗಳ ನರನಾಡಿಯಲ್ಲೂ ಹೇಗೆ ಪ್ರಸಾರಗೊಂಡಿದೆಯೆಂಬುದು ವೇದ್ಯವಾಗದಿರದು. ಬಸವಣ್ಣ ಕೇವಲ ರಾಜಕೀಯ ವ್ಯಕ್ತಿಯಲ್ಲ ಕಾಮಿನೀ ಕಾಂಚನದ ಬೆನ್ನುಹತ್ತಿ ಭ್ರಮೆಗೊಂಡವನಲ್ಲ. ವಾಗದ್ವೈತದ ಗೊಡ್ಡು ವೇದಾಂತಿಯೂ ಅಲ್ಲ. ಹೃದಯವನ್ನೆಲ್ಲ ಧರ್ಮ ಸಾಮ್ರಾಜ್ಯದ ಮಣಿಮಯ ಪೀಠದಲ್ಲಿಟ್ಟಿದ್ದ. ಮಹಾಜ್ಞಾನಿ ಅಲ್ಲಮಪ್ರಭುವಿನಲ್ಲಿ ಬಸವಣ್ಣನ ವಿಷಯಕ ಭಾವನೆಯ ತೂಕವೆಷ್ಟು ಎಂಬುದು ಮೇಲಿನ ಅವರ ವಚನಗಳಿಂದ ತಿಳಿದುಬರುವುದು. ಆದ್ದರಿಂದ ಬಸವಣ್ಣನ ಆಳ್ತನವೆಲ್ಲಿಏರಿ ನಿಲ್ಲುತ್ತದೆಂಬುದುದನ್ನು ಊಹಿಸಿ ತಿಳಿಯಬೇಕು. ಶಬ್ದ ಚಿತ್ರ ತಿಳಿಸದು. ಸಾಧನಾ ಮಾರ್ಗದಲ್ಲಿ ಬಸವಣ್ಣನವರ ನಡೆಯೂ ಒಮ್ಮೊಮ್ಮೆ ಮುಗ್ಗರಿಸುತ್ತಿತ್ತು. ಅದು ಸ್ವಾಭಾವಿಕವೇ ಅದರೂ ಮುಚ್ಚಿಕೊಳ್ಳುತ್ತಿರಲಿಲ್ಲ. ನಡೆಯುವ ಕುದುರೆ ಎಡವಲೇ ಬೇಕೆಂಬುದು ಲೋಕ ಸಾಮಾನ್ಯ ನಿಯಮ. "ನಂಬಿಯೂ ನಂಬದ ಢಂಬಕ ನಾನಯ್ಯ" "ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯ" ಮುಂತಾಗಿ ಉದ್ಘಾಟಿಸಿಕೊಳ್ಳುವುದೂ ಅವರ ಸ್ವಭಾವ. ತಮ್ಮ ತಪ್ಪನ್ನು ತಿಳಿದು ಸರಿಪಡಿಸಿಕೊಳ್ಳುವದರಲ್ಲಿ ಬಸವಣ್ಣನವರಿಗೆ ಸರಿತೂಗುವವರು ಇನ್ನೊಬ್ಬರಿರುವರೇ ಎಂಬಂಶವನ್ನು ಭರತ ಖಂಡದ ಮಹಾ ಪುರುಷರ ಚರಿತ್ರೆಯಲ್ಲಿ ಹುಡುಕಬೇಕು. ಕಡ್ಡಿಯಷ್ಟು ತಪ್ಪನ್ನು ಗುಡ್ಡಮಾಡಿ ಬಸವಣ್ಣನವರು ಬೈಲಿಗೆ ಹಾಕಿಯೇಬಿಡುತ್ತಿದ್ದರು. ತಿದ್ದಿಕೊಂಡು ಮಹಾ ವ್ಯಕ್ತಿಯಾದರು. ಅಲೌಕಿಕ ಧೀಮಂತ ಶಕ್ತಿ ಪಡೆದರು. ಅವತಾರಿಕನೆನ್ನಿಸಿದರು. ಲೋಕದಲ್ಲಿ ಇಂಥ ದೊಡ್ಡತನದ ವ್ಯವಹಾರ ಕಾಣುವುದು ಅಪರೂಪ.

## ಸಿದ್ಧರಾಮನ ಮಹಾಮನೆಯ ಪ್ರವೇಶ ಪ್ರತಿಬಂಧ.

ಮಹಾಮನೆ ಬಾಗಿಲವರೆಗೆ ಪ್ರಭುವೇ ಮೊದಲಾಗಿ ಸಮಸ್ತರು ಬಂದರು. ಸಿದ್ಧರಾಮನಿಗೆ ಲಿಂಗ ತತ್ತ್ವ ಭೂಮಿಕೆಯ ಸಾರ ಸಂಗ್ರಹವನ್ನಿಲ್ಲಿ ತಿಳಿಸುವ ಆಟ ಹೂಡದಿದ್ದರೆ ಚೆನ್ನಾಗಿಲ್ಲ. ಶರಣರೆಲ್ಲರಿಂದಲೂ ಇಷ್ಟಲಿಂಗವನ್ನು ಅಂಗದ ಮೇಲೆ ಧರಿಸುವುದರ ಮಹತಿ ಈತನಿಗಾಗಬೇಕು. ಸ್ಥಾವರಲಿಂಗೋಪಾಸನೆಯಲ್ಲಿ ಖಂಡ ಸತ್ಯವರಿತ ಇವನಿಗೆ ತ್ರಿವಿಧ ಲಿಂಗ ದಾಸೋಹಿಯಾಗುವ ಬಯಕೆಯನ್ನುಂಟುಮಾಡಬೇಕು ಸ್ವಾಭಾವಿಕವಾಗಿ ಆಬಗ್ಗೆ ಕಾತರ ಬಲಪಡಿಸಲೇಬೇಕೆಂದು ಮೊದಲು ಬಸವಣ್ಣನ ಮಹಾಮನೆಯ ಹೊತ್ತಿಲನ್ನು ದಾಟಿ ಒಳಹೊಕ್ಕ ಶರಣರೆಲ್ಲ ಜಯ ಜಯಕಾರ ಮಾಡಿದರು ಮರುಕ್ಷಣದಲ್ಲಿಯೇ. ಬಸವಣ್ಣನ ಮತ್ತು ಉಳಿದೆಲ್ಲ ಶರಣರ ದೃಷ್ಟಿ ಸಿದ್ಧರಾಮನತ್ತ ಹರಿಯಿತು. ಸಿದ್ಧರಾಮನೂ ಪ್ರಭುವಿನಂತೆ ಮಹಾ ಮನೆಯ ಪ್ರವೇಶ ಮಾಡಲು ಹೊತ್ತಿಲ ಹತ್ತಿರ ಬಂದು ನಿಂತು

ದಾಟಬೇಕೆನ್ನುವಷ್ಟರಲ್ಲಿಯೇ ಪ್ರತೀಹಾರಿ ಚಿಕ್ಕಣ್ಣ ಸಿದ್ಧರಾಮನ ಮುಂದೆ ಬಂದು ನಿಂತುಬಿಟ್ಟ. ಬಸವಣ್ಣನ ಮಹಾ ಮನೆಯ ಪ್ರತೀಹಾರಿಯು ಷಟ್‌ಸ್ಥಲ ಬ್ರಹ್ಮಿಯೇ ಆಗಿದ್ದನು. ಲಿಂಗತತ್ವ ಪರಿಮಳ ಬಸವ ಚುಂಬನದಿಂದ ಸುತ್ತಮುತ್ತಣ ತರುಮರಾದಿಗಳಿಗೂ ಹರಡಿತ್ತು. ದನ ಕಾಯುವವನಾಗಿರಬಹುದು. ಕಸ ಗೂಡಿಸುವವನಾಗಿರಬಹುದು. ಬಾಗಿಲು ಕಾಯುವ ಸೇವಕನಾಗಿರಬಹುದು. ಎಲ್ಲರೂ ಅವರವರ ಸ್ಥಾನದಲ್ಲಿ ದೊಡ್ಡವರೇ. ಕಾಯಕವಾವುದಾದರೂ ಆಗಿರಲಿ. ಹೃದಯ ಸಂಪತ್ತನ್ನು ಈಶ್ವರನತ್ತ ಸೂರೆಗೈಯಲು ಯಾರಾದರೇನು? ಬಸವಣ್ಣನವರಿಗೂ ಗೊತ್ತಿತ್ತು. ಪ್ರತೀಹಾರಿ ಚಿಕ್ಕಣ್ಣ ಸಿದ್ಧರಾಮನನ್ನು ತಡೆದೇ ತಡೆಯುತ್ತಾನೆಂದು. ಚಿಕ್ಕಣ್ಣ ಶರಣ ಸಿದ್ಧರಾಮನ ಮುಖನೋಡಿ ಕರದ ಕುರುಹಿಲ್ಲದವನೆಂದುಡೆದು ನಿಲ್ಲಿಯೇಬಿಟ್ಟ. ಆದರೆ ಯಾರ ಸಂಗಡ ಬಂದಿದ್ದಾನೆ? ಪ್ರಭುವಿನೊಡನೆ, ಈ ಸಂದಿಗ್ಧವನ್ನು ಹೇಳಿ ಸರಿಪಡಿಸುವುದು? ಈಗ ತಾನೇ ನೋಡಿದ್ದ ಪ್ರಭುವಿನ ರಾದ್ಧಾಂತ ಪ್ರಕರಣವನ್ನು. ಈಗ ಮತ್ತಾವ ರಾದ್ಧಾಂತ ಪ್ರಾರಂಭವಾಗುವುದೋ? ಆದರೂ ಕರ್ತವ್ಯವಿಮುಖನಾಗುವ ಹೊರಲಾರದ ಭಾರ ಹೊರಲು ಸಿದ್ಧನಾಗಲಿಲ್ಲ ಚಿಕ್ಕಣ್ಣ. ಏನಾದರೂ, ಆಗಲಿ ತಡೆಯುವುದೇ ಶ್ರೇಷ್ಠಧರ್ಮ. ಕರದ ಕುರುಹಿಲ್ಲದ ಯಾವ ಪ್ರಾಣಿಯೂ ಮಹಾಮನೆಯ ಹೊಸ್ತಿಲನ್ನು ಮೆಟ್ಟದುದು ಅಪೂರ್ವ. ತಮ್ಮ ತತ್ವ ವಿರೋಧ "ಹೊ! ಹೊ! ನಿಲ್ಲು ಸಿದ್ಧರಾಮಾ!!! ಪ್ರವೇಶಿಸಬೇಡ" ಎಂದು ದಿಟ್ಟಿಸಿ ನೋಡುತ್ತ "ಅಹುದೆನಲಮ್ಮೆ ಅಲ್ಲೆನಲಮ್ಮೆ ಪುಸಿದಿಟಕ್ಕೆ ಒಪ್ಪದು. ಜ್ಯೋತಿಗೆ ಕತ್ತಲೆ ಒಪ್ಪದು. ಸದ್ಭಕ್ತಿಯ ಸದಾಚಾರಕ್ಕೆ ಭವಿತನ ಒಪ್ಪದು ಭವ ಬಪ್ಪದು." "ಸಂಗನ ಬಸವಣ್ಣನ ಮಹಾಮನೆಯನ್ನು ಭವಿಯು ಪ್ರವೇಶಿಸುವುದೇ? ಆದುದರಿಂದಲೇ ತಡೆದು? "ನಿನ್ನ ಕರದ ಕುರುಹು ತೋರಾ ಅಯ್ಯಾ" ಎಂದ ಪ್ರಶ್ನಿಸಿದನು. "ಭಲೆ ಚಿಕ್ಕಣ್ಣ ಶರಣ" ಎನ್ನಬೇಕೆನಿಸಿತ್ತು ಬಸವಣ್ಣನಿಗೆ. ಸಮಯ ಮಹತ್ವವರಿತು ಸುಮ್ಮನೆ ಇದ್ದ. ಸಿದ್ಧರಾಮನು ಚಿಕ್ಕಣ್ಣನ ಮುಖ ನೋಡಿ "ಭವಿ ಭವಿಯೆಂಬ ಬದ್ಧಭವಿಗಳ ನೋಡಾ, ಕಾಮವೆಂಬುದು ಭವ, ಹೇಮವೆಂಬುದು ಭವ, ಆಗು ಎಂಬುದು ಭವ, ಹೋಗು ಎಂಬುದು ಭವ. ಈ ಅಭಿಮಾನಗಳೆಲ್ಲ ನಿಮಗೇ ಬಿಟ್ಟಲ್ಲ. ಆದುದರಿಂದ ಎಲೆ ಅಯ್ಯಾ ನಾನು ಭವಿಯಲ್ಲ. ನೀನೇ ಭವಿತನಕ್ಕೊಳಗಾಗಿದ್ದೀಯೆ" ಎಂದ ನಸುಗೋಪದ ಬಿರುಸು ದನಿಯಲ್ಲಿ. ಚಿಕ್ಕಣ್ಣ ಕಿರುನಗೆನಗುತ ಒಮ್ಮೆ ಪ್ರಭುದೇವರ ಮುಖವನ್ನೂ ಮತ್ತೊಮ್ಮೆ ಬಸವಾದಿ ಪ್ರಮಥ ಸಂದೋಹದ ಮುಖವನ್ನೂ ನೋಡುತ್ತ "ಸಹಜವ ನುಡಿದರೆ ಮುನಿಸೇಕಯ್ಯ ಸಿದ್ಧರಾಮಣ್ಣ, ಕುರುಹು ಮುಟ್ಟದೊಡೆ ಕಾಯದ ಭವಹಿಂಗಿತ್ತು. ನಿನಗಾದರೊ ಅಂಗದಲ್ಲಿ ಮೂರು ಬಗೆಯ ಭವಿತನವಳಪಟ್ಟದೆ. ಅರಿದರಿದು ಕುರುಹ ಮುಟ್ಟದೆ ಶರೀರದ ಭವ ಹೇಗೆ ಹಿಂಗುವುದಯ್ಯ? ಈ ಭವಿತನವನ್ನು ಅತಿಗಳೆಯದ್ದರಿಂದ ಮಾತ್ರ ನಿನ್ನನ್ನು ಭವಿಯನ್ನ ಬೇಕಾಯಿತಷ್ಟೆ. ಅದಕ್ಕೇಕೆ ಸಿಟ್ಟು ನಿನಗೆ? ಹದುಳವನರಸಿಬಂದರೆ ಮೊದಲು ನಿನ್ನ ಭವಿತನವ ಮಾಣಿಸಾ ನಿಮ್ಮ ಧರ್ಮ ಎಂದು ಮೊದಲಿಗಿಂತ ಸ್ವಲ್ಪ ಬಿರುಸಾಗಿಯೇ ಗರ್ಜಿಸಿಬಿಟ್ಟ. ಪ್ರಭುವಿಗೆ ನಗು. ಪಾಪ! ನಗಲಾರರು. ಈ ಶರಣರ ಅಪರಿಮಿತ ಸ್ವಾನುಭಾವ ಸಂಪತ್ತಿಯ ಪರಾಕಾಷ್ಠ ಭಾವಕ್ಕೆ ಹೃದಯದಲ್ಲಿ ಅಪರಿಮಿತ ತೋಷ ಬೇರೆ. ಈ ಸನ್ನಿವೇಶ ಸಿದ್ಧರಾಮನಿಗೆ ಚನ್ನಾಗಿ ಪಾಠ ಕಲಿಸುತ್ತದೆಂದೇ ಭಾವಿಸಿ ಹೊರಳಿನಿಂತ ಸಿದ್ಧರಾಮನಿಗೆ ನ್ಯಾಯ ದೊರಕಿಸಿ ಕೊಡುವೆನೆಂಬುದನ್ನು ನಟಿಸುವ ಭಾವಭಂಗಿಯಲ್ಲಿ. ಆಗ ಸಿದ್ಧರಾಮನು ಇನ್ನೂ ಸ್ವಲ್ಪ ಬಿರುಸಿನ ಧ್ವನಿಯಲ್ಲಿಯೇ–

"ಉರಿಯ ಗಿರಿಯಮೇಲೆ ಕಾಣುವ ದಿವ್ಯಜ್ಯೋತಿಯ
ಕಂಡು ಕಂಗಳ ಪಟಲಭವಹಿಂಗಿತ್ತು; ಹೃದಯದಲ್ಲಿ
ಸ್ವಯಂಪ್ರಕಾಶವ ಕಂಡು ಹೃದಯಾಂಧಕಾರ
ಹೋಗಿತ್ತು; ಆಸ್ವಯಂ ಜ್ಯೋತಿಯನ್ನು ನೇತ್ರ
ಜ್ಯೋತಿಯ ಉರಿಯ ಗಿರಿಯಮೇಲೆ ಕಂಡಿದ್ದೇನೆ.
ಇನ್ನು ನನಗೆಲ್ಲಿಯ ಭವಿತನ. ಆಸ್ವಯಂ ಜ್ಯೋತಿಯನ್ನು
ಹೃದಯದಲ್ಲಿ ಕಂಡು ಶುದ್ಧನಾಗಿದ್ದೇನೆ. ನಾನೆಲ್ಲಿಯ
ಭವಿ?.

ಎಂದು ಕೊಡವಿ ನುಡಿದ ಒಡ್ಡೆಯ ಬಟ್ಟೆಯನ್ನು ಕೊಡವಿ ಒಣಗಲು ಹಾಕುವವರಂತೆ. ಚಿಕ್ಕಣ್ಣನಾದರೂ



ದರೊ ಸಿದ್ಧರಾಮನ ಗರ್ಜನೆಗೇನೂ ಹೆದರಲಿಲ್ಲ. ಆಯುಧವಿಲ್ಲದ ಭಂಟಗಾರಾದರೂ ಅಂಜುವುದುಂಟೆ? "ಹೌದಯ್ಯ ಹೌದು. ಹೃದಯದಲ್ಲಿ ನೋಡಿದೆ ಮುಂತಾಗಿ ನುಡಿಯುತ್ತಿರುವೆ. ಹೃದಯದಲ್ಲಿ ನೋಡಿದರೂ ನೋಡಿರಬಹುದು. ಅದೆಲ್ಲ ಆಕಾಶದ ಕಾಮನ ಬಿಲ್ಲಿನಂತಯ್ಯ. ಅದನ್ನು ನೋಡಿದೆ ಆಹಾ! ಎಷ್ಟು ಚನ್ನಾಗಿದೆ ಎಂದು ಹಲ್ಗಿರಿದೆ ಅಷ್ಟೆ. ಮುಹೂರ್ತ ಕಳೆದಮೇಲೆ ಮತ್ತೆ ಮರೆತುಬಿಟ್ಟೆ. ಹಾಗೆ ಕಂಡೆಯಲ್ಲ ಅದನ್ನು ಯಾವ ಆಧಾರದ ಮೇಲೆ ಅದನ್ನು ಹಿಡಿದಿಟ್ಟುಕೊಂಡೆ. ಆಧಾರವಿಲ್ಲದಾಗ ಆಧೇಯ ಜಾರಿಬಿಡುತ್ತದಲ್ಲವೇ? ಗೋಡೆಯಿಲ್ಲದ ಚಿತ್ತಾರವೆಲ್ಲಿದಯ್ಯ. ಸುಮ್ಮನೆ ಭವವನ್ನು ಹಿಂಗಿಸಿಕೊಂಡೆನೆಂದ ಮಾತ್ರಕ್ಕೆ ಹಿಂಗುವುದೇ ಸಿದ್ಧರಾಮಣ್ಣ? ಗೃಷ್ಟನಬಿಟ್ಟು ಅಗೃಷ್ಟನ ಕಂಡೆನೆಂಬುದು ಹೇಗಯ್ಯ? ಶೈವಯೋಗಾಭ್ಯಾಸದ ಕ್ರಿಯೆಯಿಂದ ಅಂತರ್ಲಕ್ಷ್ಯದ ಅನುಸಂಧಾನ ಧ್ಯಾನಿಯಾಗಿ ನಾದದ ಬೆಳಗನ್ನು ಹುಡುಕಿ ಕೂಡಿ ಪ್ರಾಣಲಿಂಗಿಯಾದೆನೆಂಬ ಭವಿತನದ ಭ್ರಮಾತ್ಮಕ ಜ್ಞಾನವನ್ನು ಬಿಟ್ಟು, ಇಷ್ಟಲಿಂಗ ಸಂಬಂಧವಾಗಬೇಕಯ್ಯ. ಆಗ ತ್ರಿವಿಧ ಲಿಂಗಾಂಗ ಸಂಪನ್ನತೆ ನಿನಗೆ ಉಂಟಾಗುತ್ತದೆ. ಇಲ್ಲದಿದ್ದರೆ ಅದನ್ನೆಲ್ಲ ವಾಗದ್ವೈತವೆಂದು ಶರಣರೆಲ್ಲ ಕರೆಯುವರು." ಎಂದು ಸುಮ್ಮನಾದನಲ್ಲದೆ ಸಿದ್ಧರಾಮನನ್ನು ಒಳಗೆ ಬಿಡಲೇ ಇಲ್ಲ.

"ಸರಿ, ಪ್ರತೀಹಾರಿಯಷ್ಟೇ ಅಲ್ಲ. ಎಲ್ಲ ಶರಣರೂ ಈ ತ್ರಿವಿಧಲಿಂಗ ಸಮಸ್ಯೆಯಲ್ಲಿ ಭಾಗವಹಿಸುವಂತೆ ಮಾಡಬೇಕು. ಸಿದ್ಧರಾಮನ ಲಿಂಗ ತಪಸ್ಸು ಎಲ್ಲ ತಪಸ್ಸಿಗಿಂತಲೂ ಶ್ರೇಷ್ಠವಾದುದೆಂಬುದನ್ನು ಅರಿಯಬೇಕು. ಅಲಿಂಗ್ಯ ತಪೋವ್ಯವಹಾರತ್ತಣಿಂದ ತ್ರಿವಿಧಲಿಂಗ ತಪೋವ್ಯವಹಾರಿಗಳಲ್ಲಿ ಬೆರೆಯ ಬಂದಿರುವ ಇವನಿಗೆ ಅದರ ಮಹತ್ತು ಮುಖ್ಯವಾಗಿ ಎಲ್ಲ ಶರಣರಿಂದಲೂ ಏಕ ಕಂಠವಾಗಿ ಗೊತ್ತಾಗಬೇಕು" ಎಂದು ಪ್ರಭುವು ತನ್ನಲ್ಲಿ ಯೋಚಿಸಿಕೊಂಡು ಸಿದ್ಧರಾಮನ ಮುಖವನ್ನು ನೋಡಿದನು. ಸಿದ್ಧರಾಮನು ಸೋಲನ್ನೊಪ್ಪಿಕೊಂಡವನ ಭಾವ ಭಂಗಿಯಲ್ಲಿ ನಸುತಲೆಬಾಗಿಸಿ ಕಾಲಿನಿಂದ ಭೂಮಿಯನ್ನು ಕೆರೆಯುತ್ತ ಹಲವಾರು ಯೋಚನಾ ತರಂಗಗಳಲ್ಲಿ ತೇಲುತ್ತಿರುವವನಾಗಿದ್ದನು. ಸಿದ್ಧರಾಮನ ಪಕ್ಷವಹಿಸಿ ಮಾತನಾಡಲೆಳಸಿ ಪ್ರಭುವು. "ಏನಯ್ಯ ಚಿಕ್ಕಣ್ಣ, ಸಿದ್ಧರಾಮನೇನು ಸಾಮಾನ್ಯನಲ್ಲ. ಅವನನ್ನು ಸುಮ್ಮ ಸುಮ್ಮನೆ ಭವಿಯೆಂದು ಹೇಳುವುದಾವನ್ಯಾಯವಯ್ಯ. ಅವನು ತತ್ವಜ್ಞಾನಿ, ಬ್ರಹ್ಮಜ್ಞಾನಿ, ಕಾಮನ ಸುಟ್ಟು ಹೋಮವನುರುಹಿ, ತ್ರಿಪುರಸಂಹಾರವ ಮಾಡಿದವನು. ಅವನು ಎಲ್ಲವನ್ನೂ ಮಿಕ್ಕಿದ್ದಾನೆ. ವ್ಯಸನವಮರೆದವರ ಅಶನವ ತೊರೆದವರ ಗುಹೇಶ್ವರ ಲಿಂಗದಲ್ಲಿ ಭವಹಿಂಗಿದ ಭಕ್ತರೆಂಬೆನಯ್ಯ. ಈ ಸಿದ್ಧರಾಮನು ಯಾವಾಗಲೂ ಘನತತ್ತ್ವವನ್ನೇ ನೋಡುತ್ತಿದ್ದಾನೆ. ಅವನೆಂತು ಭವಿಯಯ್ಯ, ಭವವನ್ನು ಹರಿದು ಹಾಕಿದ ಅಭವನನ್ನು ಒಳಗೆ ಬಿಡುಬರಲಿ" ಎಂದನು.

ಎಂದೊಡನೆಯೇ ಚಿಕ್ಕಣ್ಣನ ಗರ್ಜನೆ ಸ್ವಲ್ಪ ಕಡಿಮೆಯಾಯಿತು. ಸಾಕ್ಷಾತ್ ಪ್ರಭುದೇವರು ಹೇಳುತ್ತಿರುವ ಮಾತು ಚಿಕ್ಕಣ್ಣನಿಗೆ ಆಶ್ಚರ್ಯವನ್ನುಂಟು ಮಾಡಿದರೂ, ಕರ್ತವ್ಯದಿಂದ ವಿಮುಖನಾಗಿ ಸಿದ್ಧರಾಮನನ್ನು ಒಳಗೆ ಬಿಡದೆ ಬಸವಣ್ಣ, ಚನ್ನಬಸವಣ್ಣನವರ ಮುಖಗಳನ್ನು ನೋಡುತ್ತ, ಬಸವಣ್ಣನವರ ಮೇಲೆಯೇ ಈ ಸಮಸ್ಯೆಯನ್ನು ಹೇರಿಬಿಡೋಣವೆಂದು ಯೋಚಿಸಿ– "ಸ್ವಾಮಿ, ನಿನ್ನರಿವು ಕುರುಹುಗೊಂಡು ಬಂದನ್ನಕ್ಕ ಆ ಅರಿವು ಸ್ವಪ್ನದಲ್ಲಿ ಆಯಿತ್ತೆಂಬೆ. ಅರಿವು ಎಚ್ಚರದಲ್ಲಿರಬಲ್ಲರೆ, ಕರದಲ್ಲಿ ಅಚ್ಚು ಹೊಂದಿರಬೇಕು. ಅರಿಯದಮರುಳಾನು. ನಿಮ್ಮ ಶ್ರೀ ಚರಣದಲ್ಲಿ ಅಣತಿಯಿಪ್ಪೆನು. ಇದಕ್ಕೆ ನಮ್ಮ ಸಂಗನ ಬಸವಣ್ಣನೇ ಸಾಕ್ಷಿ." ಎಂದು ಸಂಗನ ಬಸವಣ್ಣನ ಕಡೆ ನೋಡಿ ಸುಮ್ಮನಾದನು.

ಆಗ ಪ್ರಭುದೇವರು ಬಸವಣ್ಣನ ಕಡೆಗೆ ನೋಡುತ್ತ "ಏನು ಬಸವಣ್ಣ, ನಿಮ್ಮ ಪಡಿಯರನ ಘರ್ಜನೆಯಿದು? ಬಿಡುವುದನ್ನು ಬಿಟ್ಟರಾಯಿತು. ಸಿದ್ಧರಾಮನು ಬಿಡುವುದನ್ನು ಬಿಟ್ಟದ್ದಾನೆ. ಅವನು ಕರ್ಮಯೋಗಿ, ತತ್ತ್ವಜ್ಞಾನಿ, ಆತನ ವಿಷಯದಲ್ಲಿ ಲಿಂಗ ಲಿಂಗವೆಂಬ ನಿಮ್ಮ ಸಂಪ್ರದಾಯವೆಂತಹುದಯ್ಯ. ವೇದಾಂತದತ್ತ ಜ್ಞಾನದಗಣಿ, ಯೋಗಮಾರ್ಗದಲ್ಲಿ

ಬಲ್ಲಿದರಿಗೆ ಯಾತರ ಹಂಗುಂಟು" ಎನ್ನಲು, ಬಸವಣ್ಣನವರು ಮಧ್ಯದಲ್ಲಿ ಪ್ರವೇಶ ಮಾಡಲೇ ಬೇಕಾಯಿತು. "ಸ್ವಾಮಿ, ಬಿಡುವ ಠಾವಿಲ್ಲದೆ ಬಿಟ್ಟೆನೆಂಬುದೇ? ಅರಿದೆನೆಂದರೆ ಮರವೆ ಹಿಂಗುವುದೇ? ಉಂಡೆನೆಂದರೆ ಹಸಿವು ಮಾಂಬುದೇ? ಇದು ಕಾರಣ ಮಾಟಕೂಟದನುವಿಂಗೆ ಹೊರ ಒಳಗೆ ಕುರುಹುದೋರಿದವರ ಅಯ್ಯ ಎಂಬೆನು." ಎಂದನು ವಿನಮ್ರನಾಗಿ. ಪ್ರಭುವು "ಏತರ ಮಾಟಕೂಟವಯ್ಯ ಬಸವಣ್ಣ, ಅರಿವು ಮುಂದುಗೊಂಡಲ್ಲದೆ ಮಾಟವುಂಟೆ? ಕುರುಹು ಮುಂದುಗೊಂಡಲ್ಲದೆ ಮಾಟಕೂಟವೆಲ್ಲಿಯದೊ? ತನ್ನ ತಾನರಿದು ತಾನು ತಾನಾದವರಿಗೆ ಮಾಟವುಂಟೆ? ಉಂಡು ಒಲೆಯ ಹೂಡುವುದೆಂದರೇನು? ಕಲಶದಮೇಲೆ ನೆಲಗಟ್ಟು ಕಟ್ಟುವುದೇನು? ತಾನು ತಾನಾದ ಬಳಿಕ ಸಿದ್ಧರಾಮನಿಗೆ ಕುರುಹಿನ ಹಂಗೇನು?" ಎಂದು ನುಡಿಯಲು ಬಸವಣ್ಣನವರಿಗೆ ಪ್ರಭುದೇವರ ವಾದವು ವಿಚಿತ್ರವಾಗಿ ತೋರಿದರೂ ಉದ್ದೇಶವೇನಿರುವುದೋ ಎಂದು ತಿಳಿದು ಪುನಃ ಅವರ ಮಾತನ್ನೊಪ್ಪಿಕೊಳ್ಳದೆಯೆ "ಸ್ವಾಮಿ ತ್ರಿವಿಧಲಿಂಗದಿಂದ ತನುಮನ ಪ್ರಾಣಂಗಳೆಲ್ಲ ಲಿಂಗವಾಗಿ ಅಂತರಂಗ ಬಹಿರಂಗ ಭೇದವಿಲ್ಲದೆ ಸರ್ವಾಂಗಲಿಂಗ ಸಂಬಂಧಿಯಾಗಿ ಕಂಡೆನೆಂದರೆ ಒಪ್ಪಬಹುದಲ್ಲದೆ ಈ ಮಾತಿನ ಮಾಲೆಯ ಬೊಮ್ಮವನ್ನು ಒಪ್ಪಲಾಗದು. ಲಿಂಗಸಾಹಿತ್ಯವಿಲ್ಲದೆ ಅಂಗ ಗುಣವಳಿದೆನೆಂಬ ಮಾತನ್ನು ನಮ್ಮ ಸಂಪ್ರದಾಯದಲ್ಲಿ ಒಪ್ಪಲಾಗುವುದಿಲ್ಲ" ಎಂದರು. "ಸರಿ ಏನಯ್ಯ ಸಂಪ್ರದಾಯ ಸಂಪ್ರದಾಯವೆಂಬ ನಿಮ್ಮ ನುಡಿಯಿದು?" ಎಂದು ಪ್ರಭು ಚನ್ನಬಸವಣ್ಣನ ಕಡೆಗೆ ತಿರುಗಿ "ಚನ್ನಬಸವಣ್ಣ, ನೀನಾದರೂ ಹೇಳಯ್ಯ ಇವರಿಗೆ, ಭವಿತನವ ನೀಡಾಡಿ ಅಭವನಾದ ಸಿದ್ಧರಾಮನಿಗೆ ಭವಿ ಭವಿಯೆಂದನ್ನುತ್ತಿರುವರಲ್ಲಯ್ಯ." ಎನ್ನಲು ಚನ್ನಬಸವಣ್ಣನವರು ಮುಂದೆ ಬರಬೇಕಾಯಿತು. "ಪ್ರಭುವೇ ಕಾಯದ ಕಾರ್ಪಣ್ಯವುಳ್ಳನ್ನಕ್ಕ ಕಂಡೆನೆಂಬುದು ಪುಸಿ, ಕರಣದ ಕಾರ್ಪಣ್ಯವುಳ್ಳನಕ್ಕ ಕಂಡೆನೆಂಬುದು ಪುಸಿ, ಕುರುಹುಗೊಂಡುಮಾಡಿ, ಕುರುಹಳಿದು ನೋಡಿದೊಡೆ ಸಾಧ್ಯವಪ್ಪುದು ಸಾಧ್ಯವಾದೀತು; ಅದಿಲ್ಲದೆ ತಾನು ತಾನಾದೆನೆಂಬ ಶಬ್ದವಾದಿಗಳ ಕೂಡಲ ಚನ್ನ ಸಂಗಮದೇವನೊಪ್ಪನಯ್ಯ" ಎಂದನು.

ಇಷ್ಟು ಹೊತ್ತಿಗಾಗಲೆ ಸಿದ್ಧರಾಮನಿಗೆ ಸ್ವಲ್ಪ ಧೈರ್ಯಬಂದಿತ್ತು ಕಾರಣ ಪ್ರಭುವಿನ ಬೆಂಬಲಿಗನಾಗಿಹೆನೆಂಬುದು. ಕುಂಠಿತಗೊಂಡಿದ್ದ ಮಾತುಗಳು ಒಂದೊಂದೇ ಹೊರಗೆ ಬರಬೇಕೆನ್ನುತ್ತಿದ್ದುವು, ಪೂರ್ಣ ತೊಯ್ದ ಪಕ್ಷಿ ಮುದುಡಿಕೊಂಡು ಉಡುಗಿ ನಿಂತು, ರೆಕ್ಕೆ ಪುಕ್ಕಗಳನ್ನು ಕೊಡವಿ ಸಡಿಲಿಸಿ ಗರಿಗೆದರಿ ಹಾರಲನುವಾದಂತೆ. ಆಗ ಚನ್ನಬಸಣ್ಣನವರ ಕಡೆಗೆ ತಿರುಗಿ "ಸ್ವಾಮಿ, ಕಾಯವೇ ಪೀಠ, ಪ್ರಾಣವೇ ಲಿಂಗವಾದ ಬಳಿಕ ಕುರುಹಿನ ಹಂಗೇನಯ್ಯ, "ದೇಹೋ ದೇವಾಲಯಃ ಪ್ರೋಕ್ತಃ ಸಜೀವಃ ಕೇವಲಶ್ಶಿವಃ" ಎಂಬ ವಾಕ್ಯವಿರಲು ಕುರುಹುಗೊಂಡು ಮಾಡಿ ಕುರುಹಳಿವ ಕಾರ್ಪಣ್ಯವೆಂತುಂಟೊ? ಮೆಚ್ಚದೆನ್ನ ಮನ ಕರದ ಕುರುಹಿಂದೆ ಕಪಿಲಸಿದ್ಧಮಲ್ಲಿಕಾರ್ಜುನನು ಹೇಗೆ ಸಾಧ್ಯಪ್ಪನುಹೇಳಾ?" ಎಂದನು ಇಳಿದನಿಯಲ್ಲಿ. ಆಗ ಚನ್ನಬಸವಣ್ಣ "ಅಯ್ಯಾ, ನೀನು ಪೀಠಲಿಂಗದ ಸ್ಥೂಲರೂಪ ಹೇಳಿದೆಯಷ್ಟೆ? ತತ್ತ್ವವೇನೆಂಬುದನ್ನು ಬಲ್ಲೆಯಾ? ಪ್ರಾಣಲಿಂಗದ ಆಧಾರವಾಗಿ ಪ್ರಾಣಲಿಂಗದ ಅರಿವುಂಟಾಯಿತ್ತು. ಭಾವಕ್ಕೆ ಭಾವಲಿಂಗದ ಆಧಾರವಾಗಿ ಭಾವದ ಅರಿವಾಯಿತ್ತು. ಬಹಿರಂಗದ ಆಚಾರಕ್ಕೆ ಲಿಂಗವಿಲ್ಲದಿದ್ದರೆ, ತಾನೆಂಬುದು ಹೊರಗಾಯಿತ್ತು ಆದ್ದರಿಂದ ಹೊರಗಿನ ಆಚಾರಕ್ಕೆ ಆಧಾರ ಬೇಕೇ ಬೇಕು. ಬಹಿರಂಗದಲ್ಲಿ ಕುರುಹಿಲ್ಲದೆ ತಾನು ತಾನಾದೆನೆಂದು ಹೇಳುವ ಮಾತು ಸಲ್ಲದು. ಇನ್ನೂ ಆ ತತ್ತ್ವವನ್ನು ಕೇಳು. ಆತ್ಮ ಚೈತನ್ಯದ ಕುರುಹು ಒಡೆದು ಕೂಟಕ್ಕೆ ಒಳಗಾಯಿತ್ತು. ಮಾಟಕ್ಕೆ ಹೊರಗಾಯಿತ್ತು. ಮಾಟವೆಂಬುದು ಕುರುಹುಗೆಟ್ಟರೆ ನಾನು ನೀನೆಂಬ ಭಾವ ಶಾಂತವಾಗುವುದು. ಆದುದರಿಂದ ಕುರುಹು ಕಂಡು ಮರುಹಳಿದು ಸಂಶಯವಿಲ್ಲದ ಶರಣರ ಹೊರ ಒಳಗೇಕಾಯಿತ್ತು ಕಾಣಾ."

"ಅಂಗದಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣದಲ್ಲಿ ಲಿಂಗಪರಿಣಾಮವನ್ನೈದುವಪರಿಯೆಂತಯ್ಯ? ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು.



ಒಂದಂಗ ವಿರಹಿತರಾಗಿಪ್ಪವರುಂಟೆ? ಕಂಗಳ ನೋಟಕ್ಕಿಂಬಾವುದು ಹೇಳಾ? ಒಂದಬಿಟ್ಟೊಂದು ತೋರದು........."

ಎಂದು ಸಿದ್ಧರಾಮನಿಗೆ ಅಜೀರ್ಣವಾಗುನಷ್ಟು ಹೇಳಿದರು. ಸಿದ್ಧರಾಮನೂ ಉತ್ತರವನ್ನು ಹುಡುಕಿಯೇ ಇದ್ದನು. ಹೌದು ಚನ್ನಬಸವಣ್ಣನವರೇ, ಚನ್ನಾಗಿ ಹೇಳಿದಿರಿ. ಒಂದೇ ವಸ್ತುವು ಹೊರಗಾಗುವುದು ಹೇಗೆ? ಒಳಗಾಗುವುದು ಹೇಗೆ? ಮಾಟಕೂಟಗಳಿಗೆ ಅದು ಹೇಗೆ ಕಾರಣವಾಗುತ್ತದೆ? ಕೇಳಿರಿ. ಕಾಯದ ಕರದಲ್ಲಿ ಕುರುಹುಗೊಂಡರೆ ಹೊರಗಾಯಿತ್ತು ಒಳಗೆಂಬುದೇನು? ಭಾವ ಪ್ರಾಣಗಳಲ್ಲಿ ಕುರುಹುಗೊಂಡರೆ ಒಳಗಾಯಿತ್ತು ಹೊರಗೆಂಬುದೇನು? ಸುಮ್ಮನೆ ಲಿಂಗತ್ರಯ ಲಿಂಗತ್ರಯವೆಂದರೇನು ಸ್ವಾಮಿ? "ಕೇಳು ಸಿದ್ಧರಾಮಯ್ಯ, ನಾಮರೂಪರಹಿತ ನಿರಾಕಾರ ತತ್ತ್ವ ಸಾಕಾರಲೀಲೆಗೊಂಡು ಬಂದಿತ್ತು. ಹರಿಬ್ರಹ್ಮರಿಗೆ ಕುರುಹುತೋರಿದ ಬ್ರಹ್ಮ ಕುರುಹಾಗಿ ಬಂದಿತ್ತು. ಭಾವದಲ್ಲಿ ಕುರುಹಾಗಿರಲಿಲ್ಲ. ಭಾವದ ಅರಿವಿನಲ್ಲಿ ಪರಿಣತಿಗೊಂಡಿತ್ತು. ಆ ಭಾವದ ಅರಿವು ಶೂನ್ಯದಲ್ಲಿ ತರಹರವಾಗಿತ್ತು. ಸಾವಯವವೆಂದರೆ ನಿರವಯವ, ನಿರವಯವೆಂದರೆ ಸಾವಯವ ಸ್ಫಟಿಕ ಘಟದೊಳಗಣ ಜ್ಯೋತಿಯಂತೆ. ಸಿದ್ಧರಾಮಯ್ಯ ಕೇಳು, ಅದೇ ಕಾಯಕ್ಕೆ ಕುರುಹಾಗಿ ನಿಂತು ಕಾಯದ ಭವ ಹಿಂಗಿಸುತ್ತದೆ. ಪ್ರಾಣಕ್ಕೆ ಕುರುಹಾಗಿ ಪ್ರಾಣದಭವವ ಹಿಂಗಿಸಿ ಬೆಳಗಿಸುತ್ತದೆ. ಆದುದರಿಂದಲೇ ಹೊರ ಒಳಗಾಯಿತ್ತೆಂದು ಹೇಳಿದುದಯ್ಯ" ಎಂದು ನುಡಿದರು ಚನ್ನಬಸವಣ್ಣನವರು. ಆಗ ಸಿದ್ಧರಾಮಯ್ಯನು "ಹೌದು ಚನ್ನಬಸವಣ್ಣನವರೇ, ನೀವು ಹೇಳಿದಂತೆ ಕಾಯಕ್ಕೆ ಕುರುಹಾಗಿತ್ತೆಂಬುದನ್ನೊಪ್ಪಿಕೊಳ್ಳಬಹುದು ಆದರೆ ಅಕಾಯಕ್ಕೆ ಹೇಗೆ ಕುರುಹಯ್ಯ? ತನ್ನ ತಾನಪ್ಪವರಿಗೆ ಇದು ಭಿನ್ನವಾಯಿತ್ತು. ನಿರಾಕಾರಕ್ಕೆಲ್ಲಿಯ ಆಕಾರವಯ್ಯ, ನಿಮ್ಮ ಈ ಇಷ್ಟಲಿಂಗ ತತ್ತ್ವ ವಿಭಿನ್ನವಾಗಿ ತೋರುವುದಲ್ಲಾ! "ಹೌದು! ಹೌದು!! ಸಿದ್ಧರಾಮಯ್ಯ ನಮ್ಮ ಲಿಂಗತತ್ತ್ವ ಮಾರ್ಗ ವಿಭಿನ್ನವಾದದ್ದೇ ಅಹುದು."

ಆಚಾರ ಲಿಂಗವಿಡಿದು ಅನುಭಾವಲಿಂಗ ಸಿದ್ಧಿಯಾಯಿತ್ತು. ಶರಣರ ಅನುಭಾವದಿಂದಲೇ ಈ ಸಿದ್ಧಿಯಾದುದು. ಭಕ್ತಿಮಾರ್ಗದಿಂದ ಕ್ರಿಯಾಲಿಂಗ ಸಿದ್ಧಿಯಾಯಿತ್ತು. ಈ ಮಾರ್ಗವು ಲಿಂಗವಿಡಿದು ಲಿಂಗಸಿದ್ಧಿಯ ಮಾಡಿಕೊಳ್ಳುವ ವಿಭಿನ್ನ ಮಾರ್ಗವಯ್ಯ. ಲಿಂಗವಿಡಿದು ಲಿಂಗಭಕ್ತಿ, ಲಿಂಗವಿಡಿದು ಲಿಂಗಪ್ರಾಣ, ಲಿಂಗವಿಡಿದು ಲಿಂಗಭಾವ, ಲಿಂಗವಿಡಿದರೇ ಅರಿವು ಸಂಪೂರ್ಣವಾಗುವುದು. ಅರಿದರಿವು ಮರೆತೊಡೆ ಕ್ರಿಯಾನುಭಾವ ಮೀರಿ ತಾನು ತಾನೆಂದೆನಿಸಿಕೊಂಬನಯ್ಯ. ಅದಿಲ್ಲದೆ ನಾನು ತಾನಾದೆನೆಂದು ಹೇಳುವ ನಿನ್ನ ನುಡಿ ಯಾವುದಕ್ಕೆ? ಹದುಳವನರಸಿ ಬಂದರೆ ಮೊದಲು ಕರದಲ್ಲಿ ಕುರುಹು ಗೊಂಡುನಿಲ್ಲು." ಎಂದು ಚನ್ನ ಬಸವಣ್ಣನವರು ನುಡಿದೊಡನೆ ಸಿದ್ಧರಾಮನ ಗರ್ಜನೆಯೆಲ್ಲ ಮಾಯವಾಯಿತು. ನೆತ್ತಿಗಣ್ಣನಿಂದ ಪ್ರಭುವಿನತ್ತ ನೋಡಿ ಪುನಃ ತಲೆತಗ್ಗಿಸಿ ಏನು ಮಾತಾಡಬೇಕೆಂದು ಯೋಚಿಸಿದರೂ ಒಂದೂ ಹೊಳೆಯದಾದನು. ಆಗ ಪ್ರಭುದೇವರೆ ಇನ್ನೂ ಸ್ವಲ್ಪ ಕೆಣಕಿ ನೋಡೋಣವೆಂದು ಸಿದ್ಧರಾಮನ ಪಕ್ಷವಹಿಸಿದವನಂತೆ ನಟಿಸಿ ಚನ್ನಬಸವಣ್ಣನನ್ನು ಕುರಿತು "ಸರಿಯಯ್ಯಾ ಚನ್ನಬಸವಣ್ಣ, ಕುರುಹು ಕರುಹೆಂದು ಕುರುಹಿನ ಹುಚ್ಚು ಚನ್ನಾಗಿ ಹಿಡಿದಂತಿದೆ ನಿಮಗೆಲ್ಲ. ಹೇಳುತ್ತೀರಿ ಕುರುಹು ನಿರಾಕಾರ ತತ್ತ್ವವೆಂದು, ಅದೂ ಆಧಾರ ವಸ್ತುವೆಂದು. ನಿರಾಕಾರವನ್ನು ಸಾಕಾರಗೊಳಿಸಿ ತೊಳಲಲೇಕೆ? ಬಯಲು ಹೊಲವಾಯಿತ್ತು, ಬಯಲು ಬಿಯವಾಯಿತ್ತು, ಬಯಲು ಬಯಲನೇ ಬಿತ್ತಿ, ಬಯಲು ಬಯಲನೇ ಬೆಳೆದಿತ್ತು. ಬಯಲು ಬಯಲಾಗಿ ಬಯಲಾಗಿತ್ತಯ್ಯ. ಬಯಲು ಜೀವನ, ಬಯಲು ಭಾವನೆ ಬಯಲಾಗಿತ್ತಯ್ಯ. ಏನೂ ಇಲ್ಲದುದಕ್ಕೆ! ಕುರುಹು ಮತ್ತೇಕೆ ಹಿಡಿಯಬೇಕಯ್ಯ ಆತ? ಎಂಥ ಬಯಲಿನ ವ್ಯವಸಾಯವನ್ನು ಹೇಳುತ್ತಿರುವಿರಯ್ಯ ಆತನಿಗೆ. ಕುರುಹಿಲ್ಲದ ನಿರ್ವಯಲ ತಂದು ಕುರುಹೆಂದು ಕಲ್ಪಿಸಿ ಕರಸ್ಥಲಕ್ಕೆ ತಂದು ಇಲ್ಲದುನಲ್ಲದೆ ಗುಹೇಶ್ವರನೇ ತಾನಾದವರಿಗೆ ಈ ಕೊರಳ ನಾಗವತ್ತಿಗೆಯೇಕಯ್ಯ" ಎಂದು ಹೇಳುತ್ತ ಬಸವಣ್ಣನ ಕಡೆ ತಿರುಗಿ "ಬಸವಣ್ಣ ನೀನಾದರೂ ಹೇಳಬಾರದೇನಯ್ಯ ಚನ್ನಬಸವಣ್ಣನಿಗೆ ಆತನ ವಾದವಿದೇನಯ್ಯ. ಏಕಯ್ಯ. ಆತ ಪುನಃ ಈನಾಗವತ್ತಿಗೆಯನ್ನು ಬಿಗಿದುಕೊಳ್ಳಬೇಕು. ? ತನ್ನ ತಾನರಿದ ಮಹಾ

ಯೋಗಿಯುವನು" ಎನ್ನಲು ಬಸವಣ್ಣನು ಚನ್ನಬಸವಣ್ಣನಿಗೆ ಹೇಳಲುಪಕ್ರಮಿಸದೆ ಪ್ರಭುವಿಗೇ ಉತ್ತರ ಕೊಡುತ್ತ "ಪ್ರಭುವೇ ಈ ವಿಚಾರದಲ್ಲಿ ಚೆನ್ನಬಸವಣ್ಣ ಯೋಗ್ಯವಾದುದನ್ನೇ ನುಡಿಯುತ್ತಿರುವನಲ್ಲ ಸತ್ಯವನ್ನು ಅಸತ್ಯವೆನ್ನಲಾದೀತೆ? ಕೇಳಿ ವೇದಾಗಮಗಳಿಗಸಾಧ್ಯವಾದ ಅನುಪಮ ತತ್ತ್ವವನ್ನು ಗುರುವೆನಗೆ ಕರದಲ್ಲಿ ಕುರುಹುಮಾಡಿದನಯ್ಯ ಪ್ರಭುವೇ, ಅಖಂಡವಖಂಡಿತವಾಗಿ ಅಖಂಡ ಪರಿಪೂರ್ಣನಪ್ಪ ನಿನ್ನ ಕುರುಹೆಂದರುಹಿ ನನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಗುರುವು. ಈ ಕುರುಹುಗೊಂಡು ಕುರುಹನ್ನಳಿದು ಅರಿವು ನೆಲೆಗೊಳ್ಳಬೇಕಲ್ಲದೆ ಕುರುಹಿಲ್ಲದೆ ಅರಿವ ಅರಿತನೆಂಬುದು ಮಾತಿನ ಮಾಲೆಯಲ್ಲದೆ ಅನುಭವನ ನುಡಿಯಲ್ಲ. ಸಿದ್ಧರಾಮನಿಗೆ ಆ ಕುರುಹಿಲ್ಲದೆ ಅರಿವುಗಟ್ಟಿಗೊಂಡುದೆಂತು? ಕುರುಹಿಲ್ಲದೆ ಅರಿತನೆಂಬುದು ಅರಿವಲ್ಲ ಮರವೆ. ಚೆನ್ನಬಸವಣ್ಣನ ನುಡಿಯೇ ಈ ಕಿಂಕರನ ನುಡಿ" ಎಂದು ಹೇಳಿ ಬಸವಣ್ಣ ಸುಮ್ಮನೆ ನಿಂತನು.

ಸಿದ್ಧರಾಮ ಯೋಚಿಸಿದನು. ಬಸವಣ್ಣ ಚನ್ನಬಸವಣ್ಣಾದಿಗಳು ಲಿಂಗವಿಜ್ಞಾನಿಗಳು ಇವರೀರ್ವರೂ ಏಕಕಂಠದಿಂದ ಒಂದೇ ತತ್ತ್ವವನ್ನು ಹೇಳುತ್ತಿದ್ದಾರೆ. ಇನ್ನು ನಾನು ಮಾತನಾಡುವುದೇನು? ಎಂದು ಉಸಿರೇ ಹೊರಡದೆ ನಿಂತುಬಿಟ್ಟನು. ಪ್ರಭುದೇವರು ನಗುತ್ತ ಪುನಃ "ನಿರಾಳವೆಂಬ ಕೂಸಿಂಗೊಂದು ಹೆಸರಿಕ್ಕಿ ಕರೆದು ಬೆಣ್ಣೆಯ ನಿಕ್ಕಿದರಾರು? ಕೊಟ್ಟೆನೆಂಬುದು ಹುಸಿ ಕೊಂಡೆನೆಂಬುದು ಹುಸಿ. ಕೂಡಿದೆನೆಂಬುದು ಹುಸಿ. ಅರುಹಿನ ಕುರುಹೇನೋ ಒಳಹೊರಗೆ ಅನಿಮಿಷ ತಾನಾಗಲು ನಾನು ನೀನೆಂಬುದು ಹೇಗೆ? ಪೂಜೆ ಮಾಡುವ ಭಕ್ತನಾರೊ ಪೂಜೆಗೊಂಬ ದೇವನಾರೊ ಮುಂದು ಹಿಂದಾಯಿತ್ತು, ಹಿಂದು ಮುಂದಾಯಿತ್ತು ನೀನು ಆ ನಪ್ಪಡೆ ಪೂಜಿಸುವವನಿಲ್ಲ. ಪೂಜೆಗೊಂಬುವವನಿಲ್ಲ" ಎನ್ನಲು ಬಸವಣ್ಣನವರು ಇದುವರೆಗೆ ಸಾಮಾನ್ಯವಾಗಿಯೇ ಮಾತನಾಡುತ್ತಿದ್ದವರು ಇನ್ನು ಆಳವಾಗಿ ಲಿಂಗತತ್ತ್ವವನ್ನು ಪ್ರವೇಶಿಸಿಯೇ ಮಾತನಾಡದೆ ಗತಿಯಿಲ್ಲವೆಂದು "ಪ್ರಭುದೇವ ಅಂಬರದೊಳಾಡುವ ಪಟದ ಸೂತ್ರ ಕರದಲ್ಲಿ ಕಾಣ ಬಂದಿತ್ತು. ಕೈಯಲ್ಲಿರುವ ಸೂತ್ರ ಸಂಬಂಧ ತಪ್ಪಿದಾಗಲೆ ಪಟವು ಕೈಗೆ ಸಿಕ್ಕದೆ ಮನಕ್ಕೆ ನಿಲುಕದೆ ಆಧಾರ ತಪ್ಪಿ ಎಲ್ಲಿಯೋ ಹೋಗಿ ಬಿದ್ದು ಬಿಡುವುದಲ್ಲವೆ? ಗಗನದಲ್ಲಿ ಹಾರಾಡುವ ಪಕ್ಷಿಗೂ ಗೂಡು ಆಧಾರವಾಯಿತ್ತು. ಗಗನಕ್ಕೆ ಹಾರಿದವನಿಗೆ ಭೂಮಿ ನಿಲ್ಲಲೆಡೆಯಾಯಿತ್ತು. ಮಣ್ಣುಮರಗಳ ಬಿಟ್ಟು ಹಣ್ಣು ರುಚಿಯಾಯಿತ್ತೆಂದರೆ ಒಪ್ಪುವ ಮಾತೆ? ಹಣ್ಣು ರುಚಿಯಾಗಲು ಮಣ್ಣುಮರಗಳು ಆಧಾರವಲ್ಲವೆ? ಅದರಂತೆ ಅರಿವು ಸ್ವಾಯತ್ತವಾಗಲು ಕುರುಹು ಆಧಾರ. ಹಾಗಲ್ಲದೆ ಕುರುಹಿನಿಂದೇನೆಂದರೆ ಒಪ್ಪುವ ಮಾತಲ್ಲ. ಮನದಿಂದ ನೆನೆಯುವಂತೆ, ಮಾತಿನಿಂದ ಹೊಗಳುವಂತೆ ದೇಹದಿಂದಲೂ ಆ ವಸ್ತುವನ್ನು ಧರಿಸಲೇಬೇಕು. ಆದರೇ ಅನಿಷ್ಟ ಪರಿಹಾರ ಇಷ್ಟಸಿದ್ಧಿ. ನನ್ನ ಈ ಕೊನೆಯ ಮಾತನ್ನು ಕೇಳಿ ಸ್ವಾಮಿ,

ಅಯ್ಯಾ ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮಚಿದೆಬೆಳಗ ಹಸ್ತ ಮಸ್ತಕ ಸಂಯೋಗದಿಂದೊಡಗೂಡಿ ಮಹಾ ಬೆಳಗ ಮಾಡಿದಿರೆಲ್ಲಾ; ಅಯ್ಯಾ ಎನ್ನ ಮಸ್ತಕದೊಳಗೊಂಪುಗೂಡಿದ ಮಹಾ ಬೆಳಗ ತಂದು ಭಾವದೊಳಗಿಂಬಿಟ್ಟರಲಿಲ್ಲ; ಅಯ್ಯಾ ಭಾವದೊಳಗೆ ಕೂಡಿದ ಮಹಾಬೆಳಗ ತಂದು ಎನ್ನ ಕಂಗಳೊಳಗಿಂಬಿಟ್ಟರಲ್ಲಾ; ಅಯ್ಯಾ ಎನ್ನ ಕಂಗಳೊಳು ಕೂಡಿದ ಮಹಾ ಬೆಳಗ ತಂದು ಕರಸ್ಥಳದಲ್ಲಿ ಥಳಥಳಿಸಿ ಬೆಳಗಿ ಹೊಳೆವುತ್ತಿಪ್ಪ ಅಖಂಡ ತೇಜವನೆ ಇಷ್ಟಲಿಂಗವೆಂಬ ದೃಷ್ಟವ ತೋರಿ ನಿಶಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ; ಅಯ್ಯಾ ಎನ್ನ ಶ್ರೋತ್ರದಲ್ಲಿ ಸೃಜಿಸಿದ ಸುಮಂತ್ರದೊಳಗೆ ನೀವು ನಿಮ್ಮ ಮಹತ್ವವ ಹುದುಗಿದಿರಲ್ಲಾ; ಅಯ್ಯ ಎನ್ನ ಆರಾಧ್ಯ ಕೂಡಲಸಂಗಮದೇವ ಎನ್ನೊಳಗೆ ನಿಮ್ಮಿರವ ಈ ರೀತಿ ಕಾಣಿಸುತ್ತಿರ್ದಿರಲ್ಲಾ"

ಈ ನುಡಿ ಬಸವಣ್ಣನವರ ಮುಖಾರವಿಂದದಿಂದ ನಿರ್ಗಮನವಾಗುತ್ತಿದ್ದ ಹಾಗೆಯೆ ಪ್ರಕೃತ ಸಮಸ್ಯೆಯಲ್ಲಿ ಭಾಗವಹಿಸಿ ತಮ್ಮ ತಮ್ಮ ಸ್ವಾನುಭಾವವನ್ನು ವ್ಯಕ್ತಪಡಿಸಲು ಶರಣರೆಲ್ಲ ನಾಮುಂದು ತಾಮುಂದೆಂದು ಬಂದರು ಪ್ರಭುದೇವರಿಗೆ ತೀರಾ ನಗು ಬಂತು. ಸಿದ್ಧರಾಮನ ಮುಖ ನೋಡಿದರು ಅವನೊ ತನ್ನ ಸೋಲನ್ನಪ್ಪಿಕೊಂಡದ್ದು ವ್ಯಕ್ತವಾಯಿತು, ಆಗ ಚನ್ನಬಸವಣ್ಣನವರು "ಕಲಿಯಾದರೂ ಕಯ್ಯಲ್ಲಿ ಸುರಗಿ



ಬೇಕು. ಭೂಮಿಯಿಲ್ಲದೆ ಬಂಡಿ ನಡೆಯುವುದೆ? ಅಂಗಕ್ಕೆ ಲಿಂಗ ಸಂಗವಿಲ್ಲದೆ ಅಸಂಗನಾನೆದೆಂದರೆ ಕೂಡಲ ಚನ್ನಸಂಗಯ್ಯನೊಲಿವನೆ? ಎಂದನು. ಮಡಿವಳಯ್ಯನೂ ಈ ಸಂದರ್ಭವನ್ನುಪಯೋಗಿಸಿಕೊಂಡು. "ಅರಿವನೇನಾಗಿಧರಿಸಿದರು ಹೇಳಾ ನಿಮ್ಮ ಶರಣರು? ಅರಿವು ಖಂಡಿತವುಪ್ಪೊಡೆ ಹದುಳುವುಂಟೆ? ಅಖಂಡ ಚೈತನ್ಯ ರೂಪ ಸಾಧಿಸಲು ಖಂಡಿತವ ಪಿಡಿಯಲೇಬೇಕು. ಅರಿವು ಹಿಂದಾಗಿ ಪ್ರಕೃತಿ ಮುಂದಾದರೆ ತಾನೆಂಬುದಿಲ್ಲ. ಪ್ರಕೃತಿಗೆ ಅಧೀನನಾಗಲಾರೆನೆಂದು ನೀನು ಹೇಳಿದರೂ, ಅದು ತನ್ನ ಕಾರ್ಯವನ್ನು ಮಾಡಿಯೇ ಮಾಡುತ್ತದೆ. ಆಗ ಅದಕ್ಕೆ ಅಧೀನನಾಗಲೇಬೇಕಾಗುತ್ತದೆ. ಪ್ರಕೃತಿ ಗುಣ ಮಿಕ್ಕಲು ಅರಿವು ತಾನೇ ಸ್ವಾಯತ್ತವಾಗುವದು. ಬರಿದೆ ಪ್ರಕೃತಿಯ ದಾಟಿದೆನೆನ್ನುವುದು ಸುಲಭವೇ ಸಿದ್ಧರಾಮಯ್ಯ? ಹದುಳವನರಸಿ ಕಲ್ಯಾಣಕ್ಕೆ ಬಂದಿದ್ದರೆ ನೀನು ಮೊದಲು ಲಿಂಗಸಂಗಿಯಾಗಲೇಬೇಕು. ಪ್ರಕೃತಿಯನ್ನಳಿಯಲೆಂದೇ ಕಲಿದೇವರ ದೇವಯ್ಯ ತಾನೇ ಅಂಗಕ್ಕೆ ಇಷ್ಟವಾಗಿ ಬಂದು ಬೆಳಗಿಪ್ಪನಯ್ಯ. ಪ್ರಕೃತಿಯನ್ನು ಹಿಂಗಿಸಲಿಕ್ಕೆ ಅಪ್ರಾಕೃತವೇ ಪ್ರಕೃತಿಯಾಗಿ ಆಕಾರವಿಡಿದು ಇಷ್ಟಲಿಂಗವಾಗಿ ಬಂದಿದೆ. ಅನಿಷ್ಟ ನಿವಾರಣೆಗೆ ಈ ಇಷ್ಟದ ಸಹಕಾರವು ಬೇಕೇಬೇಕು. ಅನಿತರಲ್ಲಿ ಕಿನ್ನರಿ ಬ್ರಹ್ಮಯ್ಯನವರೂ ಮುಂದೆ ಬಂದು "ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ, ಆಲಯಸ್ಸರ್ವ ಭೂತಾನಾಂ ತದೇತತ್ ಪರಮಂಮತಂ', ಎಂಬುದಾಗಿರುವ ಪ್ರಮಾಣ ವಚನದಂತೆ ಜಗದಗಲ ಪೀಠದ ಮುಗಿಲಗಲ ಗೋಲಕದ ಪರತತ್ತ್ವವೆನ್ನ ಕರದ ಕುರುಹಾಗಿತ್ತು. ಕಲ್ಪಿಸಿ ಕಾಮಿಸಿ ಕರೆದರೆ ಭಾವದಲ್ಲಿ ಅದೇ ಅರುಹಿಗೆ ಕುರುಹಾಗಿತ್ತು. ಭಾವ ಬಯಲಾಗಿ ಮಹಾದೇವ ತ್ರಿಪುರಾಂತಕ ನಡಿಗೆ ಇದೇ ಅದ್ವೈತ ಭಾವನೋಡಾ ಪ್ರಭುವೇ. ಆದ್ದರಿಂದ ಇಷ್ಟಲಿಂಗಾಧಾರರಿಗ ಸಿದ್ಧರಾಮನಿಗೆ ಬೇಕೇ ಬೇಕು. ಇಲ್ಲದಿರೆ ಕಲ್ಯಾಣದ ಶರಣರ ಸ್ವಾನುಭಾವ ಸಂಪತ್ತಿಯ ಸಂಗವಳವಡಲಶಕ್ಯ" ಎಂದು ಖಡಾ ಖಂಡಿತ ನುಡಿದೇಬಿಟ್ಟನು. ಸಿದ್ಧರಾಮನ ವಾದವೆಲ್ಲ ಯಾವಾಗಲೋ ಮಾಯವಾಗಿ ಹೋಗಿತ್ತು. ಅನಿತರಲ್ಲಿ ಮೋಳಿಗೆಯ ಮಾರಯ್ಯನವರು ಮುಂದೆ ಬಂದು—

"ಬೆಳಗಿನೊಳಗೆ ಬೆಳಗಾಗಿ ಬೆಳಗಿತ್ತು. ಕತ್ತಲೆಯಲ್ಲಿ ಹೊಕ್ಕರೆ ಕಳವಳವಾಯಿತ್ತು. ಆನೆಂಬುದು ಮುಂದೆ ನಿಂದರೆ ನೀನೆಂಬುದು ಮರೆದಿತ್ತು. ತನ್ನ ಕಾಂಬೊಡೆ ದರ್ಪಣ ಕುರುಹಾಗಿರಬೇಕು. ಮಹಾಘನವೇ ಕರಸ್ಥಲಕ್ಕೆ ಕುರುಹಾಗಿ ಬಂದಿದೆಯಯ್ಯ. ದರ್ಪಣವನ್ನು ನೋಡುವುದು ಅದರ ಸೌಂದರ್ಯ ನೋಟಕ್ಕಲ್ಲ. ತನ್ನ ಸ್ವರೂಪ ದರ್ಶನಕ್ಕೆ. ಇದೇ ಕುರುಹು ಹಿಡಿದು ಕುರುಹು ನಷ್ಟ ಮಾಡುವ ಮಾರ್ಗ ಅದ್ದರಿಂದ ಪ್ರಕೃತಿ ಭೂತವಾದ ಇಷ್ಟಲಿಂಗ ದೇಹಕ್ಕೆ ಬೇಕು ಪ್ರಭುವೇ."

"ಗರಳವಿಲ್ಲದುರಗಂಗೆ ಹಲವರಂಜಿದವರುಂಟೆ? ಕೈದುವಿಲ್ಲದ ಭಂಟಗರ್ಜಿಸಿದೊಡೆ ಅಂಜುವರುಂಟೆ? ಇಷ್ಟಬಾಹ್ಯದೃಷ್ಟದ ಮಾತನಾಡಿದರೆ ನೆಟ್ಟನೆ ಪ್ರಾಣಲಿಂಗಿಯಪ್ಪನೇ? ಅದು ನಿಶಯವಲ್ಲ ನಿಷ್ಕಳಂಕ ಮಲ್ಲಿಕಾರ್ಜುನ"

ಎಂದು ಹೇಳಿ ಸುಮ್ಮನಾದನು. ಇಷ್ಟು ಹೊತ್ತು ಹಿಂಬದಿಯಲ್ಲಿ ನಿಂತುಕೊಂಡಿದ್ದ ಘಟ್ಟಿವಾಳಪ್ಪನವರೂ ಮುಂದೆ ಬಂದು "ಬರಿದೆ ಅರಿದೆನೆಂಬ ಅತಿ ಮರುಳರ ನೋಡಾ ಅರಿದೆನೆಂಬ ಮರವೆಯ ಮತ್ತರ ನೋಡಾ ಕತ್ತಲೆಯಲ್ಲಿ ಬೇತಾಳ ಬಂದಾಗ ಅದನ್ನಿಂದು ರಕ್ಷಿಸುವವರು ಆರುಹೇಳಾ. ಕುರುಹು ಹಿಡಿದು ಕುತ್ಸಿತವ ಕಳೆದುಪೂಜೆಯ ಮಾಡಿದರೆ ಭವವಿಲ್ಲ ಭಂಗವಿಲ್ಲ. ಇಷ್ಟವೆಂಬುದು ಪ್ರಕೃತಿಯ ಕುರುಹು. ಅರಿವು ಮರೆತಾನೆಂದು ಈ ಕುರುಹು. ಇದಾದರೋ ಅವಿದ್ಯೆಯೇ ಆಗಿದೆ. ಅವಿದ್ಯೆ ಬೇಕೇಬೇಕು ಪರಾ ವಿದ್ಯೆಯನ್ನು ಸಾಧಿಸಲು 'ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ' ಎಂಬ ಪ್ರಮಾಣ ವಚನದಂತೆ ಮೃತ್ಯುಸಂತರಣಕ್ಕೆ ಅವಿದ್ಯೆಯ ಅವಶ್ಯಕತೆ ಪೂರ್ಣ. ಅದರಿಂದ ಮೃತ್ಯುವನ್ನು ದಾಟಿ ಪರಾವಿದ್ಯೆಯಿಂದ ಅಮೃತತತ್ತ್ವ ಪಡೆಯಬೇಕು. ಇಲ್ಲವಾದರೆ ಕತ್ತಲೆ ಕತ್ತಲೆ ಎಂದು ನುಡಿತ್ತಿರುವಂತೆಯೆ ಮೆರೆ ಮಿಂಡ ದೇವನೂ ಮುಂದೆ ಬಂದು "ಸ್ವಾಮಿ ಪ್ರಭುವೇ, ಮೊನೆಯಿರಿವಡೆ ಕರದಲ್ಲಿ ಪಿಡಿದಲ್ಲದಾಗದು. ಮನವರಿವಡೆ ಕುರು

ಯೋಗಿಯವನು" ಎನ್ನಲು ಬಸವಣ್ಣನು ಚನ್ನಬಸವಣ್ಣನಿಗೆ ಹೇಳಲುಪಕ್ರಮಿಸದೆ ಪ್ರಭುವಿಗೇ ಉತ್ತರ ಕೊಡುತ್ತ "ಪ್ರಭುವೇ ಈ ವಿಚಾರದಲ್ಲಿ ಚೆನ್ನಬಸವಣ್ಣ ಯೋಗ್ಯವಾದುವನ್ನೇ ನುಡಿಯುತ್ತಿರುವನಲ್ಲ ಸತ್ಯವನ್ನು ಅಸತ್ಯವೆನ್ನಲಾದೀತೆ? ಕೇಳಿ ವೇದಾಗಮಗಳಿಗಸಾಧ್ಯವಾದ ಅನುಪಮ ತತ್ತ್ವವನ್ನು ಗುರುವೆನಗೆ ಕರದಲ್ಲಿ ಕುರುಹುಮಾಡಿದನಯ್ಯ ಪ್ರಭುವೇ, ಅಖಂಡವಖಂಡಿತವಾಗಿ ಅಖಂಡ ಪರಿಪೂರ್ಣನಪ್ಪ ನಿನ್ನ ಕುರುಹೆಂದರುಹಿ ನನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಗುರುವು. ಈ ಕುರುಹುಗೊಂಡು ಕುರುಹನ್ನಳಿದು ಅರಿವು ನೆಲೆಗೊಳ್ಳಬೇಕಲ್ಲದೆ ಕುರುಹಿಲ್ಲದೆ ಅರಿವ ಅರಿತನೆಂಬುದು ಮಾತಿನ ಮಾಲೆಯಲ್ಲದೆ ಅನುಭವನ ನುಡಿಯಲ್ಲ. ಸಿದ್ಧರಾಮನಿಗೆ ಆ ಕುರುಹಿಲ್ಲದೆ ಅರಿವುಗಟ್ಟಿಗೊಂಡುದೆಂತು? ಕುರುಹಿಲ್ಲದೆ ಅರಿತನೆಂಬುದು ಅರಿವಲ್ಲ ಮರವೆ. ಚೆನ್ನಬಸವಣ್ಣನ ನುಡಿಯೇ ಈ ಕಿಂಕರನ ನುಡಿ" ಎಂದು ಹೇಳಿ ಬಸವಣ್ಣ ಸುಮ್ಮನೆ ನಿಂತನು.

ಸಿದ್ಧರಾಮ ಯೋಚಿಸಿದನು. ಬಸವಣ್ಣ ಚನ್ನಬಸವಣ್ಣಾದಿಗಳು ಲಿಂಗವಿಜ್ಞಾನಿಗಳು ಇವರೀರ್ವರೂ ಏಕಕಂಠದಿಂದ ಒಂದೇ ತತ್ತ್ವವನ್ನು ಹೇಳುತ್ತಿದ್ದಾರೆ. ಇನ್ನು ನಾನು ಮಾತನಾಡುವುದೇನು? ಎಂದು ಉಸಿರೇ ಹೊರಡದೆ ನಿಂತುಬಿಟ್ಟನು. ಪ್ರಭುದೇವರು ನಗುತ್ತ ಪುನಃ "ನಿರಾಳವೆಂಬ ಕೂಸಿಂಗೊಂದು ಹೆಸರಿಕ್ಕಿ ಕರೆದು ಬೆಣ್ಣೆಯ ನಿಕ್ಕಿದರಾರು? ಕೊಟ್ಟೆನೆಂಬುದು ಹುಸಿ ಕೊಂಡೆನೆಂಬುದು ಹುಸಿ. ಕೂಡಿದೆನೆಂಬುದು ಹುಸಿ. ಅರುಹಿನ ಕುರುಹೇನೋ ಒಳಹೊರಗೆ ಅನಿಮಿಷ ತಾನಾಗಲು ನಾನು ನೀನೆಂಬುದು ಹೇಗೆ? ಪೂಜೆ ಮಾಡುವ ಭಕ್ತನಾರೊ ಪೂಜೆಗೊಂಬ ದೇವನಾರೊ ಮುಂದು ಹಿಂದಾಯಿತ್ತು, ಹಿಂದು ಮುಂದಾಯಿತ್ತು ನೀನು ಆ ನಪ್ಪಡೆ ಪೂಜಿಸುವವನಿಲ್ಲ. ಪೂಜೆಗೊಂಬುವವನಿಲ್ಲ" ಎನ್ನಲು ಬಸವಣ್ಣನವರು ಇದುವರೆಗೆ ಸಾಮಾನ್ಯವಾಗಿಯೇ ಮಾತನಾಡುತ್ತಿದ್ದವರು ಇನ್ನು ಆಳವಾಗಿ ಲಿಂಗತತ್ತ್ವವನ್ನು ಪ್ರವೇಶಿಸಿಯೇ ಮಾತನಾಡದೆ ಗತಿಯಿಲ್ಲವೆಂದು "ಪ್ರಭುದೇವ ಅಂಬರದೊಳಾಡುವ ಪಟದ ಸೂತ್ರ ಕರದಲ್ಲಿ ಕಾಣ ಬಂದಿತ್ತು. ಕೈಯಲ್ಲಿರುವ ಸೂತ್ರ ಸಂಬಂಧ ತಪ್ಪಿದಾಗಲೆ ಪಟವು ಕೈಗೆ ಸಿಕ್ಕದೆ ಮನಕ್ಕೆ ನಿಲುಕದೆ ಆಧಾರ ತಪ್ಪಿ ಎಲ್ಲಿಯೋ ಹೋಗಿ ಬಿದ್ದು ಬಿಡುವುದಲ್ಲವೆ? ಗಗನದಲ್ಲಿ ಹಾರಾಡುವ ಪಕ್ಷಿಗೂ ಗೂಡು ಆಧಾರವಾಯಿತ್ತು. ಗಗನಕ್ಕೆ ಹಾರಿದವನಿಗೆ ಭೂಮಿ ನಿಲ್ಲಲೆಡೆಯಾಯಿತ್ತು. ಮಣ್ಣು ಮರಗಳ ಬಿಟ್ಟು ಹಣ್ಣು ರುಚಿಯಾಯಿತ್ತೆಂದರೆ ಒಪ್ಪುವ ಮಾತೆ? ಹಣ್ಣು ರುಚಿಯಾಗಲು ಮಣ್ಣು ಮರಗಳು ಆಧಾರವಲ್ಲವೆ? ಅದರಂತೆ ಅರಿವು ಸ್ವಾಯತವಾಗಲು ಕುರುಹು ಆಧಾರ. ಹಾಗಲ್ಲದೆ ಕುರುಹಿನಿಂದೇನೆಂದರೆ ಒಪ್ಪುವ ಮಾತಲ್ಲ. ಮನದಿಂದ ನೆನೆಯುವಂತೆ, ಮಾತಿನಿಂದ ಹೊಗಳುವಂತೆ ದೇಹದಿಂದಲೂ ಆ ವಸ್ತುವನ್ನು ಧರಿಸಲೇಬೇಕು. ಆದರೇ ಅನಿಷ್ಟ ಪರಿಹಾರ ಇಷ್ಟಸಿದ್ಧಿ. ನನ್ನ ಈ ಕೊನೆಯ ಮಾತನ್ನು ಕೇಳಿ ಸ್ವಾಮಿ,

ಅಯ್ಯಾ ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದೆಬೆಳಗ ಹಸ್ತ ಮಸ್ತಕ ಸಂಯೋಗದಿಂದೊಡಗೂಡಿ ಮಹಾ ಬೆಳಗ ಮಾಡಿದಿರೆಲ್ಲಾ; ಅಯ್ಯಾ ಎನ್ನ ಮಸ್ತಕದೊಳಗೊಂಪುಗೂಡಿದ ಮಹಾ ಬೆಳಗ ತಂದು ಭಾವದೊಳಗಿಂಬಿಟ್ಟರಲಿಲ್ಲ; ಅಯ್ಯಾ ಭಾವದೊಳಗೆ ಕೂಡಿದ ಮಹಾಬೆಳಗ ತಂದು ಎನ್ನ ಕಂಗಳೊಳಗಿಂಬಿಟ್ಟರಲ್ಲಾ; ಅಯ್ಯಾ ಎನ್ನ ಕಂಗಳೊಳು ಕೂಡಿದ ಮಹಾ ಬೆಳಗ ತಂದು ಕರಸ್ಥಳದಲ್ಲಿ ಥಳಥಳಿಸಿ ಬೆಳಗಿ ಹೊಳೆವುತ್ತಿಪ್ಪ ಅಖಂಡ ತೇಜವನೆ ಇಷ್ಟಲಿಂಗವೆಂಬ ದೃಷ್ಟವ ತೋರಿ ನಿಶಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ; ಅಯ್ಯಾ ಎನ್ನ ಶ್ರೋತ್ರದಲ್ಲಿ ಸೃಜಿಸಿದ ಸುಮಂತ್ರದೊಳಗೆ ನೀವು ನಿಮ್ಮ ಮಹತ್ವವ ಹುದುಗಿದಿರಲ್ಲಾ; ಅಯ್ಯ ಎನ್ನ ಆರಾಧ್ಯ ಕೂಡಲಸಂಗಮದೇವ ಏನೊಳಗೆ ನಿಮ್ಮಿರವ ಈ ರೀತಿ ಕಾಣಿಸುತ್ತಿರ್ದಿರಲ್ಲಾ"

ಈ ನುಡಿ ಬಸವಣ್ಣನವರ ಮುಖಾರವಿಂದದಿಂದ ನಿರ್ಗಮನವಾಗುತ್ತಿದ್ದ ಹಾಗೆಯೆ ಪ್ರಕೃತ ಸಮಸ್ಯೆಯಲ್ಲಿ ಭಾಗವಹಿಸಿ ತಮ್ಮ ತಮ್ಮ ಸ್ವಾನುಭಾವವನ್ನು ವ್ಯಕ್ತಪಡಿಸಲು ಶರಣರೆಲ್ಲ ನಾಮುಂದು ತಾಮುಂದೆಂದು ಬಂದರು ಪ್ರಭುದೇವರಿಗೆ ತೀರಾ ನಗು ಬಂತು. ಸಿದ್ಧರಾಮನ ಮುಖ ನೋಡಿದರು ಅವನೊ ತನ್ನ ಸೋಲನ್ನಪ್ಪಿಕೊಂಡದ್ದು ವ್ಯಕ್ತವಾಯಿತು, ಆಗ ಚನ್ನಬಸವಣ್ಣನವರು "ಕಲಿಯಾದರೂ ಕಯ್ಯಲ್ಲಿ ಸುರಗಿ



ಬೇಕು. ಭೂಮಿಯಿಲ್ಲದೆ ಬಂಡಿ ನಡೆಯುವುದೆ? ಅಂಗಕ್ಕೆ ಲಿಂಗ ಸಂಗವಿಲ್ಲದೆ ಅಸಂಗನಾನೆದೆಂದರೆ ಕೂಡಲ ಚನ್ನಸಂಗಯ್ಯನೊಲಿವನೆ? ಎಂದನು. ಮಡಿವಳಯ್ಯನೂ ಈ ಸಂದರ್ಭವನ್ನುಪಯೋಗಿಸಿಕೊಂಡು. "ಅರಿವನೇನಾಗಿಧರಿಸಿದರು ಹೇಳಾ ನಿಮ್ಮ ಶರಣರು? ಅರಿವು ಖಂಡಿತವುಪ್ಪೊಡೆ ಹದುಳುವುಂಟೆ? ಅಖಂಡ ಚೈತನ್ಯ ರೂಪ ಸಾಧಿಸಲು ಖಂಡಿತವ ಪಿಡಿಯಲೇ ಬೇಕು. ಅರಿವು ಹಿಂದಾಗಿ ಪ್ರಕೃತಿ ಮುಂದಾದರೆ ತಾನೆಂಬುದಿಲ್ಲ. ಪ್ರಕೃತಿಗೆ ಅಧೀನನಾಗಲಾರೆನೆಂದು ನೀನು ಹೇಳಿದರೂ, ಅದು ತನ್ನ ಕಾರ್ಯವನ್ನು ಮಾಡಿಯೇ ಮಾಡುತ್ತದೆ. ಆಗ ಅದಕ್ಕೆ ಅಧೀನನಾಗಲೇಬೇಕಾಗುತ್ತದೆ. ಪ್ರಕೃತಿ ಗುಣ ಮಿಕ್ಕಲು ಅರಿವು ತಾನೇ ಸ್ವಾಯತ್ತವಾಗುವದು. ಬರಿದೆ ಪ್ರಕೃತಿಯ ದಾಟದೆನೆನ್ನುವುದು ಸುಲಭವೇ ಸಿದ್ಧರಾಮಯ್ಯ? ಹದ್ದುಳವನರಸಿ ಕಲ್ಯಾಣಕ್ಕೆ ಬಂದಿದ್ದರೆ ನೀನು ಮೊದಲು ಲಿಂಗಸಂಗಿಯಾಗಲೇಬೇಕು. ಪ್ರಕೃತಿಯನ್ನಳಿಯಲೆಂದೇ ಕಲಿದೇವರ ದೇವಯ್ಯ ತಾನೇ ಅಂಗಕ್ಕೆ ಇಷ್ಟವಾಗಿ ಬಂದು ಬೆಳಗಿಪ್ಪನಯ್ಯ. ಪ್ರಕೃತಿಯನ್ನು ಹಿಂಗಿಸಲಿಕ್ಕೆ ಅಪ್ರಾಕೃತವೇ ಪ್ರಕೃತಿಯಾಗಿ ಆಕಾರವಿಡಿದು ಇಷ್ಟಲಿಂಗವಾಗಿ ಬಂದಿದೆ. ಅನಿಷ್ಟ ನಿವಾರಣೆಗೆ ಈ ಇಷ್ಟದ ಸಹಕಾರವು ಬೇಕೇಬೇಕು. ಅನಿತರಲ್ಲಿ ಕಿನ್ನರಿ ಬ್ರಹ್ಮಯ್ಯನವರೂ ಮುಂದೆ ಬಂದು "ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ, ಆಲಯ ಸ್ಸರ್ವ ಭೂತಾನಾಂ ತದೇತತ್ ಪರಮಂಮತಂ', ಎಂಬುದಾಗಿರುವ ಪ್ರಮಾಣ ವಚನದಂತೆ ಜಗದಗಲ ಪೀಠದ ಮುಗಿಲಗಲ ಗೋಲಕದ ಪರತತ್ತ್ವವೆನ್ನ ಕರದ ಕುರುಹಾಗಿತ್ತು. ಕಲ್ಪಿಸಿ ಕಾಮಿಸಿ ಕರೆದರೆ ಭಾವದಲ್ಲಿ ಅದೇ ಅರುಹಿಗೆ ಕುರುಹಾಗಿತ್ತು. ಭಾವ ಬಯಲಾಗಿ ಮಹಾದೇವ ತ್ರಿಪುರಾಂತಕ ನಡಿಗೆ ಇದೇ ಅದ್ವೈತ ಭಾವನೋಡಾ ಪ್ರಭುವೇ. ಆದ್ದರಿಂದ ಇಷ್ಟಲಿಂಗಾಧಾರರಿಗ ಸಿದ್ಧರಾಮನಿಗೆ ಬೇಕೇ ಬೇಕು. ಇಲ್ಲದಿರೆ ಕಲ್ಯಾಣದ ಶರಣರ ಸ್ವಾನುಭಾವ ಸಂಪತ್ತಿಯ ಸಂಗವಳವಡಲಶಕ್ಯ" ಎಂದು ಖಡಾ ಖಂಡಿತ ನುಡಿದೇಬಿಟ್ಟನು. ಸಿದ್ಧರಾಮನ ವಾದವೆಲ್ಲ ಯಾವಾಗಲೋ ಮಾಯವಾಗಿ ಹೋಗಿತ್ತು. ಅನಿತರಲ್ಲಿ ಮೋಳಿಗೆಯ ಮಾರಯ್ಯನವರು ಮುಂದೆ ಬಂದು—

"ಬೆಳಗಿನೊಳಗೆ ಬೆಳಗಾಗಿ ಬೆಳಗಿತ್ತು. ಕತ್ತಲೆಯಲ್ಲಿ ಹೊಕ್ಕರೆ ಕಳವಳವಾಯಿತ್ತು. ಆನೆಂಬುದು ಮುಂದೆ ನಿಂದರೆ ನೀನೆಂಬುದು ಮರೆದಿತ್ತು. ತನ್ನ ಕಾಂಬೊಡೆ ದರ್ಪಣ ಕುರುಹಾಗಿರಬೇಕು. ಮಹಾಘನವೇ ಕರಸ್ಥಲಕ್ಕೆ ಕುರುಹಾಗಿ ಬಂದಿದೆಯಯ್ಯ. ದರ್ಪಣವನ್ನು ನೋಡುವುದು ಅದರ ಸೌಂದರ್ಯ ನೋಟಕ್ಕಲ್ಲ. ತನ್ನ ಸ್ವರೂಪ ದರ್ಶನಕ್ಕೆ. ಇದೇ ಕುರುಹು ಹಿಡಿದು ಕುರುಹು ನಷ್ಟ ಮಾಡುವ ಮಾರ್ಗ ಅದ್ದರಿಂದ ಪ್ರಕೃತಿ ಭೂತವಾದ ಇಷ್ಟಲಿಂಗ ದೇಹಕ್ಕೆ ಬೇಕು ಪ್ರಭುವೇ."

"ಗರಳವಿಲ್ಲ ದುರಗಂಗೆ ಹಲವರಂಜಿದವರುಂಟೆ? ಕೈದುವಿಲ್ಲದ ಭಂಟಗರ್ಜಿಸಿದೊಡೆ ಅಂಜುವರುಂಟೆ? ಇಷ್ಟಬಾಹ್ಯದೃಷ್ಟದ ಮಾತನಾಡಿದರೆ ನೆಟ್ಟನೆ ಪ್ರಾಣಲಿಂಗಿಯಪ್ಪನೇ? ಅದು ನಿಶಯವಲ್ಲ ನಿಷ್ಕಳಂಕ ಮಲ್ಲಿಕಾರ್ಜುನ"

ಎಂದು ಹೇಳಿ ಸುಮ್ಮನಾದನು. ಇಷ್ಟು ಹೊತ್ತು ಹಿಂಬದಿಯಲ್ಲಿ ನಿಂತುಕೊಂಡಿದ್ದ ಘಟ್ಟಿವಾಳಪ್ಪನವರೂ ಮುಂದೆ ಬಂದು "ಬರಿದೆ ಅರಿದೆನೆಂಬ ಅತಿ ಮರುಳರ ನೋಡಾ ಅರಿದೆನೆಂಬ ಮರವೆಯ ಮತ್ತರ ನೋಡಾ ಕತ್ತಲೆಯಲ್ಲಿ ಬೇತಾಳ ಬಂದಾಗ ಅದನ್ನಿಂದು ರಕ್ಷಿಸುವವರು ಆರುಹೇಳಾ. ಕುರುಹು ಹಿಡಿದು ಕುತ್ಸಿತವ ಕಳೆದುಪೂಜೆಯ ಮಾಡಿದರೆ ಭವವಿಲ್ಲ ಭಂಗವಿಲ್ಲ. ಇಷ್ಟವೆಂಬುದು ಪ್ರಕೃತಿಯ ಕುರುಹು. ಅರಿವು ಮರೆತಾನೆಂದು ಈ ಕುರುಹು. ಇದಾದರೋ ಅವಿದ್ಯೆಯೇ ಆಗಿದೆ. ಅವಿದ್ಯೆ ಬೇಕೇಬೇಕು ಪರಾ ವಿದ್ಯೆಯನ್ನು ಸಾಧಿಸಲು 'ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ' ಎಂಬ ಪ್ರಮಾಣ ವಚನದಂತೆ ಮೃತ್ಯು ಸಂತರಣಕ್ಕೆ ಅವಿದ್ಯೆಯ ಅವಶ್ಯಕತೆ ಪೂರ್ಣ. ಅದರಿಂದ ಮೃತ್ಯುವನ್ನು ದಾಟಿ ಪರಾವಿದ್ಯೆಯಿಂದ ಅಮೃತತ್ತ್ವ ಪಡೆಯಬೇಕು. ಇಲ್ಲವಾದರೆ ಕತ್ತಲೆ ಕತ್ತಲೆ ಎಂದು ನುಡಿತ್ತಿರುವಂತೆಯೆ ಮೆರೆ ಮಿಂಡ ದೇವನೂ ಮುಂದೆ ಬಂದು "ಸ್ವಾಮಿ ಪ್ರಭುವೇ, ಮೊನೆಯಿರಿವಡೆ ಕರದಲ್ಲಿ ಪಿಡಿದಲ್ಲದಾಗದು. ಮನವರಿವಡೆ ಕುರು

ಹಿನ ನೆರಿಗೆಯಲ್ಲಿ ಸಲೆಸಂದು ನಿಂದಲ್ಲದಾಗದು. ಕ್ರಿಯಾ ಭಾವ ಶುದ್ಧವಾದಲ್ಲದೆ ಅಯಿಘಟದೂರ ರಾಮೇಶ್ವರ ಲಿಂಗವ ಕೂಡಬಾರದು " ಎಂದನು.

ಶಿವಶರಣರುಗಳ ಈ ಎಲ್ಲ ಅನುಭವ ಪೂಣ ವಾಣಿಗಳನ್ನು ಕೇಳುತ್ತ ಪ್ರಭುದೇವರು ಅಮಿತೋತ್ಸಾಹ ಭಾರ ಭರದಿಂದ ಕುಸಿದುಹೋದರು. ಇನ್ನು ಸಾಕು. ಸಿದ್ಧರಾಮನಿಗೆ ಇಷ್ಟಲಿಂಗ ತತ್ತ್ವ ಭೂಮಿಕೆ ಪೂರ್ಣ ಆತನ ಮನೋ ಭೂಮಿಯಲ್ಲಿ ನಾಟಿಹೋಯಿತೆಂದು ಮನವರಿಕೆ ಮಾಡಿಕೊಂಡರು. ಆಗ ನಗುನಗುತ್ತ ಎಲ್ಲ ಶರಣರನ್ನುದ್ದೇಶಿಸಿ " ನಿಮ್ಮಲ್ಲಿ ನೀವು ತಿಳಿದು ನೋಡಿದರೆ ಬೇರೊಂದಿಲ್ಲ ಕಾಣಿರಯ್ಯ. ತನ್ನಲ್ಲಿಯೇ ತನ್ಮಯವಾದ ಅನ್ಯಭಾವನೆಯ ನೆನೆಯದಿದ್ದರೆ ಗುಹೇಶ್ವರ ತನ್ನಲ್ಲಿ ತಾನೇ ಆದನು. " ಎನ್ನಲು ಬಸವಣ್ಣನವರಿಗೆ ಪ್ರಭುದೇವರ 'ಅನ್ಯಭಾವನೆಯ ನೆನೆಯದಿದ್ದರೆ' ಎನ್ನುವ ಮಾತು ಅತ್ಯಂತ ಹರ್ಷವನ್ನುಂಟುಮಾಡಿತು. ಕೂಡಲೆ ಬಸವಣ್ಣನವರು— " ಕಂಗಳ ಮುಂದಣಿಂದ ಶ್ರೀಲಿಂಗಹಿಂಗಿದೊಡೆ ಎಚ್ಚರ ಭಂಗವಾದೀತೆಂದು ಅನ್ಯಭಾವನ ಮರೆಯಲು ಕರದಲ್ಲಿ ಶ್ರೀಗುರು ಪ್ರಾಣಲಿಂಗವ ಕೊಟ್ಟ. ಅದ ಮುಟ್ಟಲೊಡನೆ ತನು ಪ್ರಸಾದ ಮನ ಪ್ರಸಾದ, ಧನ ಪ್ರಸಾದವಾಯಿತ್ತು. ಇಂತು ಸರ್ವಾಂಗ ಪ್ರಸಾದವಾಯಿತ್ತು. ಆ ಪ್ರಸಾದದಲ್ಲಾನು ಪರಿಪೂರ್ಣನಾದೆನು. ತನು ಸೋಂಕಿ ತನು ನಷ್ಟ. ಭಾವದಲ್ಲಿ ಬೆಳಗಿ ಭಾವ ನಿರ್ಭಾವವಾಯಿತ್ತು ಪ್ರಭುವೇ " ಎನ್ನುತ್ತ ತಮ್ಮ ಕೊನೆಯ ತೀರ್ಮಾನವನ್ನು ಕ್ರೋಢೀಕರಿಸಿ ನುಡಿದು ಸುಮ್ಮನಾಗಲು ಸಿದ್ಧರಾಮನಿಗೆ ಕಳವಳವೆಲ್ಲ ಕಳೆದು ಮನಸ್ಸಿನಲ್ಲಿ ತ್ರಿವಿಧಲಿಂಗಸಂಗಿ ಯಾವಾಗಾದೇನೋ ಎಂಬ ತವಕ ಬಲಿಯಹತ್ತಿ " ಎಂದಿಪ್ಪೆನಯ್ಯ ಶುದ್ಧ ಸಿದ್ಧ ಪ್ರಸಿದ್ಧವ ಪ್ರವೇಶಿಸಿ? ಎಂದಿಪ್ಪೆನಯ್ಯ ಭಕ್ತಿ, ಜ್ಞಾನ, ವೈರಾಗ್ಯಮಂ ಪ್ರವೇಶಿಸಿ? ಎಂದಿಪ್ಪೆನಯ್ಯ ತತ್ತ್ವ ತತ್ತ್ವ ತೂರ‍್ಯಾ ತೂರ‍್ಯ ನೀನೇ ಆಗಿ? ಎಂದಿಪ್ಪೆನಯ್ಯ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ ? ಎಂದಿಪ್ಪೆನಯ್ಯ ಲಿಂಗತ್ರಯದಲ್ಲಿ ಪ್ರಸಾದ ಪ್ರಸನ್ನನಾಗಿ? ಎಂದಿಪ್ಪೆನಯ್ಯ ಕಪಿಲಸಿದ್ಧಮಲ್ಲಿನಾಥಯ್ಯ ನಿನ್ನವರ ನಡುವೆ ಓರಂತೆ." ಎಂದು ಮನದಲ್ಲಿಯೇ ಚಿಂತಿಸಹತ್ತಿದನು.



ಆಗ ಪ್ರಭುದೇವರು ಬಸವಣ್ಣನತ್ತ ತಿರುಗಿ "ದಪೌದಯ್ಯ ಬಸವಣ್ಣ ನೀವೆಲ್ಲ ಹೇಳುವುದು ಸರಿಯಾದುದು. ಶರಣರೆಲ್ಲ ವಿಹಿತವಾಕ್ಯ ನುಡಿದಿದ್ದಾರೆ. ಲಿಂಗದಿಂದಲೇ ಎಲ್ಲ ಸಿದ್ಧಿಗಳನ್ನೂ ಪಡೆಯಬೇಕು. ಅದಿಲ್ಲದೆ ಸಿದ್ಧಿಯನ್ನು ಪಡೆದೆನೆಂಬುದು ಅಥವಾ ಪಡೆವೆನೆಂಬುದು ಕನಸು ಕಂಡಂತೆ. ಗಟ್ಟಿಗೊಂಡ ನಿಮ್ಮ ಮನದ ಭಾವವರಿಯಲು ಆ ಕೊರಳನಾಗವತ್ತಿಗೆಯೇಕೆಂದು ನುಡಿದೆನಷ್ಟೆ. ನೀವೆಲ್ಲ ಒಳಗೆ ತಿಳಿದು ಹೊರಗೆ ನಡೆವ ಮಹಾ ಶರಣರು. ನಿಮ್ಮ ನಡೆಶುದ್ಧ ನುಡಿಶುದ್ಧ " ಎನ್ನುತ್ತ ಸಿದ್ಧರಾಮನತ್ತ ತಿರುಗಿ " ನೋಡಿದೆಯಾ ಸಿದ್ಧರಾಮಯ್ಯ, ಈ ಶರಣರೆಲ್ಲರ ಕಲ್ಯಾಣ ಗುಣಪೂರ್ಣ ಮಂಗಳಮಯ ಭಾವದ ಬೆಳಕನ್ನು ಇವರೆಲ್ಲರೂ ಎಲ್ಲೆಲ್ಲೂ ಬೆಳಕ ಕಂಡು ನಿಬ್ಬೆರಗು ಗೊಂಡ ಘನಮಹಿಮರು. ಇವರೆಲ್ಲರ ಅನುಭವಗಮ್ಯವಾದ ಲಿಂಗ ತತ್ತ್ವೋದ್ದೇಶವು ನಿನ್ನ ಮನಕ್ಕೆ ನಾಟಿರಬೇಕು. ಈ ಶರಣರೆಲ್ಲರ ಅಭಿಪ್ರಾಯದಂತೆ ಇಷ್ಟಲಿಂಗ ಬೇಕೇ ಬೇಕೆಂದಾಯಿತು. ಅದಿಲ್ಲದೆ ಪರಿಪೂರ್ಣತೆ ಸಾಧ್ಯವಿಲ್ಲ. ಹಾರುವ ಪಕ್ಷಿಗೆ ಗೂಡುಹೇಗೆ ಆಧಾರವೊ, ನಡೆವವನಿಗೆ ನೆಲಹೇಗೆ ಆಧಾರವೋ ಮಣ್ಣು ಮರಗಳು ಹಣ್ಣಿನ ರುಚಿಗೆ ಹೇಗೆ ಆಧಾರವೋ ಹಾಗೆ ಅಖಂಡ ಲಕ್ಷಣ ಲಕ್ಷಿತ ಪರಾವಸ್ತು ಸೌಂದರ್ಯ ಸಾಕ್ಷಾತ್ಕಾರಕ್ಕೆ ಇಷ್ಟಲಿಂಗ ಅವಶ್ಯಕ. ಆನಂದ ರೂಪನಾದ ಲಿಂಗದೇವನಿಂದಲೇ ಹುಟ್ಟಿದ ಮನ, ಪ್ರಾಣ, ಇಂದ್ರಿಯ ದೇಹ ಮೊದಲಾದುವೆಲ್ಲ ಅದರಿಂದ ಅಭಿನ್ನವಾಗುವಂತೆ ಸಾಧಿಸುವ ಕ್ರೀಯುಳವಡಲು ನೀನಿನ್ನು ಈ ಶರಣರು ಹೇಳಿದಂತೆ ನಡೆದು ಉದ್ಧಾರವಾಗು. ಒತ್ತಿ ಹಣ್ಣು ಮಾಡಿದರೆ ಅದೆತ್ತಣ ರುಚಿಯಾದೀತು. ಒಯಲ ಬೆರಗಿನ ಸುಖದ ಸವಿಯನ್ನು ಬೆರಗಲ್ಲದೆ ಕಾಣಬಾರದು. ಹಾಗಾಗುವ ಸ್ಥಿತಿಯನ್ನು ಶರಣರೆಲ್ಲ ಸಪ್ರಮಾಣವಾಗಿ ವಿವರಿಸಿದ್ದಾರೆ. ನೀನು ನಿನ್ನ ಅಷ್ಟಾಂಗಯೋಗ ಕ್ರಿಯೆಯಿಂದ ಆಂತರಿಕ ಲಕ್ಷ್ಯದ ಸಿದ್ಧಿ ಪಡೆಯುವೆನೆಂಬ ಭ್ರಾಂತಿಜ್ಞಾನವನ್ನು ಬಿಟ್ಟು ಇನ್ನು ಇಷ್ಟಲಿಂಗ ಸಂಬಂಧಿಯಾಗು " ಎಂದು ನಿರ್ದಾಕ್ಷಿಣ್ಯವಾಗಿ ಈಗ ನುಡಿಯಲೊಡನೆ ಸಿದ್ಧರಾಮನ ಮನಸ್ಸೆಲ್ಲ ಪ್ರಸನ್ನವಾಗಿ ಈ ಶರಣರಲ್ಲಿಗೆನ್ನನ್ನು ತಂದು ಪ್ರಭುವು ಉದ್ಧಾರಮಾಡಿದನೆಂದು ಭಾವಿಸಿ ಪ್ರಭುವನ್ನು ಕುರಿತು ಪ್ರಭುವೇ,

"ನಾನೇನ ಮಾಡುವ ಜ್ಞಾನಕ್ರೀಯೆಲ್ಲವೂ ನೀನೆಂದಿರ್ದೆನಯ್ಯ; ನಾನೇನಮಾಡುವ ಅರಿವಿನಕ್ರೀಯ ನೀತಿಯಲ್ಲವೆಂದರೆ ಅದು ಮಾಣಲಿ ನಿಮ್ಮಾಣತಿ; ಕಾಣಬಾರದ ಘನವ ಕಾಯದಲಿ ಧರಿಸಿ, ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ ತೋರಬಾರದ ಕುರುಹ ನಿನ್ನರಿವಿನಲ್ಲಿರಿಸಿ, ಇನ್ನು ನೀವುಕಂಡು ಕೂಡಿಪ್ಪಂತೆ ಮಾಡಾ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನ"

ಎಂದು ತ್ರಿವಿಧಲಿಂಗಿಯಾಗಲು ತಮ್ಮ ಸರ್ವಾನುಮತವನ್ನು ತಿಳಿಸಿಬಿಟ್ಟರು. ಆಗ ಪ್ರಭುದೇವರು ಭಲೆ ಸಿದ್ಧರಾಮಯ್ಯ ನೀನು ಮಹಾ ಸಂಸ್ಕಾರಿ 'ಅರಿವು ಕ್ರಿಯೆಯೊಳಗಾಯಿತ್ತು ಕ್ರಿಯೆ ಅರಿವಿನೊಳಗಾಯಿತ್ತು. ಕ್ರಿಯಾ ಜ್ಞಾನಗಳ ಸಂಬಂಧಕ್ಕೆ ಇಷ್ಟಲಿಂಗ ವಿಚಾರವಸ್ತುವಾಗಿತ್ತು. ಇದನ್ನು ಇನ್ನು ಪಡೆದು ಸಾಧಿಸುವುದನ್ನು ಸಾಧಿಸು' ಎಂದು ಚೆನ್ನಬಸವಣ್ಣನತ್ತ ತಿರುಗಿ, ಚೆನ್ನಬಸವಣ್ಣ ನೀವು ಕ್ರಿಯಾಜ್ಞಾನ ಸಾಮರಸ್ಯ ಸುಖಿಗಳು. ನೀವೇ ಈ ಶಿಷ್ಯನಿಗೆ ಆಧಾರವಾಗಿಪ್ಪ ಗುರುಗಳು; ಈತನೇ ಗುರುವಿಂಗೆ ಆಧಾರವಾಗಿಪ್ಪ ಶಿಷ್ಯ. ಪಣತಿಯಿದೆ, ಎಣ್ಣೆಯಿದೆ, ಬತ್ತಿಯಿದೆ ಕ್ರಿಯಾಮುಖದಿಂದ ಜ್ಯೋತಿಯನ್ನು ಬೆಳಗಿಸಿ ಈ ಸಿದ್ಧರಾಮನನ್ನು ಪ್ರಕಾಶಗೊಳಿಸು ಎಂದು ತಿಳಿಸಿದನು. ಶರಣರೆಲ್ಲ ಜಯ ಜಯಕಾರಮಾಡಿದರು. ಮುಂದೆ ಚೆನ್ನಬಸವಣ್ಣನವರಿಂದ ವಿಧ್ಯುಕ್ತವಾಗಿ ಇಷ್ಟಲಿಂಗ ಪ್ರದಾನ ಕಾರ್ಯಗಳು ಮುಗಿದುವು ಶರಣರ ಗೋಷ್ಠಿಯಲ್ಲಿ ಸೊನ್ನಲಿಗೆಯ ಸಿದ್ಧರಾಮನು ಪ್ರಕಾಶಿಸಿದನು.

## ಷಟ್ ( ಸಂಜ್ಞಾರ್ಥ )

1 ಷಡಂಗ:— ಛಂದಸ್ಸು, ಕಲ್ಪ, ವ್ಯಾಕರಣ, ಶಿಕ್ಷಾ, ಜ್ಯೋತಿಷ್ಯ, ನಿರುಕ್ತ (ಇವುಗಳ ಉತ್ಪತ್ತಿಸ್ಥಾನಗಳು, ಕ್ರಮವಾಗಿ) ಪಾದ, ಹಸ್ತ, ಮುಖ. ಘ್ರಾಣ್, ನೇತ್ರ, ಶ್ರೋತ್ರ.
2 ಷಟ್ಕರ್ಮ:—ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ.
3 ಮಾಂತ್ರಿಕ ಷಟ್ಕರ್ಮ:— ಮಾರಣ, ಮೋಹನ, ಸ್ತಂಭನ, ಉಚ್ಚಾಟನ, ಆಕರ್ಷಣ, ವಿದ್ವೇಷಣ.
4 ವಾರ್ತಿಕ ಷಟ್ಕರ್ಮ:— ಊಂಛಾ, ಪ್ರತಿಗ್ರಹ, ಭಿಕ್ಷಾ, ವಾಣಿಜ್ಯ, ಪಶುಪಾಲನಾ, ಕೃಷಿಕರ್ಮ.
5 ಯೌಗಿಕ ಷಟ್ಕರ್ಮ:— ಧೌತಿ, ನೇತಿ, ವಸ್ತಿ, ನೀಲೀಕಿ, ತ್ರಾಟಕಿ, ಕಪಾಲಿಭಾತಿ.
6 ಷಟ್ಸಮಾಧಿ:— ಅಭ್ಯಂತರ ದೃಶ್ಯಾನುವಿದ್ಧ, ಅಭ್ಯಂತರ ಶಬ್ದಾನುವಿದ್ಧ, ಅಭ್ಯಂತರ ನಿರ್ವಿಕಲ್ಪ, ಬಾಹ್ಯ ದೃಶ್ಯಾನುವಿದ್ಧ, ಬಾಹ್ಯ ಶಬ್ದಾನುವಿದ್ಧ, ಬಾಹ್ಯನಿರ್ವಿಕಲ್ಪಕ.
7 ಷಟ್ಚಕ್ರವರ್ತಿಗಳು:— ಹರಿಶ್ಚಂದ್ರ, ನಳ, ಪುರಕುತ್ಸ, ಪುರೂರವ, ಸಗರ, ಕಾರ್ತವೀರ್ಯ.
8 ಷಡ್ಭ್ರಮೆಗಳು:— ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮ.
9 ಷಡ್ಗುಣಗಳು:— (i) ಸಂಧಿ, ವಿಗ್ರಹ, ಯಾನ, ಆಸನ, ದ್ವೈದೀಭಾವ, ಸಮಾಶ್ರಯ.
(ಅಥವಾ) (ii) ಜ್ಞಾನ, ಶಕ್ತಿ, ಬಲ, ಐಶ್ವರ್ಯ, ತೇಜ, ವೀರ್ಯ.
10 ಷಡೂರ್ಮಿ:— ಕ್ಷುತ್, ಪಿಪಾಸಾ, ಶೋಕ, ಮೋಹ, ಜರಾ, ಮರಣ.
11 ಅರಿಷಡ್ವರ್ಗ:— ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.
12 ಷಡ್ವಿಧಾನ್ನ:—ಭಕ್ಷ್ಯ, ಭೋಜ್ಯ, ಲೇಹ್ಯ, ಚೋಹ್ಯ, ಪಿಚ್ಛಲ, ಪಾನೀಯ.
13 ಷಟ್ಕೋಶ:— ರೋಮ, ನಾಡಿ, ಅಸ್ಥಿ, ರಕ್ತ, ಮಾಂಸ, ತ್ವಕ್ಕು.
14 ಷಡ್ರಸ:— ಮಧುರ, ಆಮ್ಲ, ತಿಕ್ತ, ಕಟು, ಕಷಾಯ, ಲವಣ.

( 50ನೇ ಪುಟಕ್ಕೆ ಮುಂದುವರಿದಿದೆ)

ಳ

# ಅಹಿಂಸೆಯ ದಸರಯ್ಯ

— ಎಂ. ಚಂದ್ರಶೇಖರ್.

"ರಾಮಗೊಂಡೆ" ಎಂಬ ಊರು. ಅಲ್ಲಿ ಒಬ್ಬ ಭಕ್ತ. ಅವನ ಹೆಸರು ದಸರಯ್ಯ.

ಅವನು ಬಹಳ ದಯಾವಂತ. "ಜೀವ ಇರುವ ಯಾವ ಪಕ್ಷಿ ಪ್ರಾಣಿಗಳಿಗೆ ಮನುಷ್ಯರಿಗೆ ಸಸ್ಯಗಳಿ ಹಿಂಸೆಯಾಗಬಾರದು. ಯಾವ ರೀತಿಯ ಹಿಂಸೆಯೂ ಆಗಬಾರದು". ಎಂದು ನಂಬಿದ್ದವನು. ಹಾಗೇ ನಡೆದು ಕೊಂಡವನು.

'ಜೀವಿಗಾಗುವ ನೋವೇ ದೇವರಿಗಾಗುವ ನೋವು'. ಎಂದು ಅವನ ನಂಬಿಕೆ.

'ಇದು ನನ್ನದು. ಇದು ಅವರದು. ಇವರು ಹಿತವರು. ಇನರು ಅಹಿತರು. ಇದು ಬೇಕು. ಇದು ಬೇಡ.' ಮುಂತಾದ ಯಾವ ಸಣ್ಣ ಭಾವನೆಯೂ ಅವನಿಗೆ ಬರುತ್ತಿರಲಿಲ್ಲ.

ಪ್ರಪಂಚವನ್ನೆಲ್ಲಾ ಅವನು ಪ್ರೀತಿಸುತ್ತಿದ್ದ. ಅವನೊಬ್ಬ ಅಹಿಂಸಾ ಮೂರ್ತಿ. ಇದೇ ಅವನ ಕಾಯಕ. ಯಾರಿಗೂ ಹಿಂಸೆ ಮಾಡದಿರುವುದು. ಯಾವುದಕ್ಕೂ ಹಿಂಸೆಮಾಡದಿರುವುದು ಯಾವುದಕ್ಕೂ ಹಿಂಸೆಮಾಡದಿರುವುದು ಅವನ ಕಾಯಕ.

ದಿನವೂ ಪೂಜೆಗೋಸ್ಕರ ಗಿಡಗಳಿಂದ ಹೂವನ್ನು ಬಿಡಿಸುವಾಗಲೂ ಮೆಲ್ಲಗೆ ಬಿಡಿಸುತ್ತಿದ್ದ. ಹೂವಿಗೇನಾದರೂ ನೋವಾದೀತೋ ಎಂಬ ಚಿಂತೆ.

ಒಂದು ದಿನ ಬೆಳಿಗ್ಗೆ ತೋಟದಲ್ಲಿ ಹೂವನ್ನು ಬಿಡಿಸುತ್ತಿದ್ದಾನೆ 'ಹೂವುಗಳಿಗೆ ಎಲ್ಲಿ ನೋವಾಗುವುದೋ' ಎಂಬ ಚಿಂತೆ ಕಾಡುತ್ತಿದೆ. ಇದ್ದಕ್ಕಿದಹಾಗೆ ಒಂದು ಹೂವು 'ಹಾ! ಅಯ್ಯೋ' ಎಂದ ಹಾಗಾಯಿತು.

ಇವನಿಗೆ ಯೋಚನೆಯಾಯಿತು. ಸಂಕಟವಾಯಿತು ಬಹಳ ಸಂಕಟವಾಯಿತು. 'ನನ್ನಿಂದ ಹೂಗಳಿಗೆ ಹಿಂಸೆಯಾಯಿತಲ್ಲ' ಎಂದು ಮರುಗಿದ.

ಅಂದಿನಿಂದ ಪೂಜೆಗಾಗಿ ಗಿಡಗಳಿಂದ ಹೂಗಳನ್ನು ಕೀಳುವುದನ್ನೇ ಬಿಟ್ಟು ಬಿಟ್ಟ.

'ಪೂಜೆಗೆ ಹೂಗಳಿಲ್ಲದಿದ್ದರೆ ಹೇಗೆ? ಆದರೆ ಹೂವುಳನ್ನು ಹರಿದರೆ ಅವಕ್ಕೆ ಹಿಂಸೆ. ಆದ್ದರಿಂದ ಹೂಗಳನ್ನು ಕೀಳುವುದೇಬೇಡ. ಗಾಳಿಗೆ ತಾವಾಗಿಯೇ ಉದುರಿದ ಹೂಗಳನ್ನೇ ಪೂಜೆಗೆ ಆರಿಸೋಣ. ಎಂದು ನಿರ್ಧರಿಸಿಕೊಂಡ. ನಿಶ್ಚೈಸಿಕೊಂಡ.

ಅಂದಿನಿಂದ ಗಾಳಿಗೆ ಉದುರಿದ ಹೂಗಳನ್ನೇ ಆರಿಸಿದ. ಅವುಗಳಿಂದಲೇ ಪೂಜೆಮಾಡಿದ. ದೇವರಿಗೇ ಇವನ ಅಹಿಂಸಾ ವ್ರತವನ್ನು ನೋಡಿ ಆಶ್ಚರ್ಯವಾಯಿತು!

ಅವನು ದಾರಿಯಲ್ಲಿ ನಡೆಯುವಾಗ ಕ್ರಿಮಿಕೀಟಗಳಿಗೆ ಹಿಂಸೆಯಾದೀತು ಎಂದು ಬಹು ಮೆಲ್ಲಗೆ ನಡೆದ. ನಡೆಯುವಾಗ, ನುಡಿಯುವಾಗ, ಉಸಿರಾಡುವಾಗಲೂ ಎಚ್ಚರಿಕೆಯಿಂದಿದ್ದ. ಬಹಳ ಹುಷಾರಾಗಿದ್ದ.

ಅವನ ಅಹಿಂಸಾ ವ್ರತವನ್ನು ಕಂಡು ಜನಗಳು ಆಶ್ಚರ್ಯಗೊಂಡರು. ಕೆಲವರು ಪರೀಕ್ಷೆ ಮಾಡಲು ಹೊರಟರು.



ಆ ಊರಿನಲ್ಲಿ ಒಬ್ಬಕಳ್ಳ. ಅವನ ಹೆಸರು ಮಲ್ಲ. ಎಲ್ಲರೂ ಅವನನ್ನು ಮಲ್ಲುಗ ಎನ್ನುತ್ತಿದ್ದರು.

ಒಂದು ಸಾರಿ ಕಳ್ಳನಿಗೆ ಕಳ್ಳತನಕ್ಕಾಗಿ ಶಿಕ್ಷೆಯಾಯಿತು. ಅವನ ಕೈಗಳನ್ನು ಕತ್ತರಿಸಿದರು. ಅವನೀಗ ಮೋಟನಾದ. ಎಲ್ಲರೂ ಮೋಟ ಮಲ್ಲುಗ ಎನ್ನುತ್ತಿದ್ದರು.

ಆದರೂ ಅವನು ಬಹಳ ತುಂಟ. ಕೆಲವು ದುಷ್ಟ ಜನಗಳು ಅವನ ಸ್ನೇಹಿತರು. ದಸರಯ್ಯನನ್ನು ಪರೀಕ್ಷೆ ಮಾಡಲು ಹವಣಿಸಿದರು ಯೋಚಿಸಿದರು. ನಿರ್ಧರಿಸಿದರು. ಮೋಟ ಮಲ್ಲುಗನನ್ನು ಹುರಿದುಂಬಿಸಿದರು, ದಸರಯ್ಯನನ್ನು ಕಾರಣವಿಲ್ಲದೇ ಹಿಂಸೆ ಮಾಡಬೇಕು. ಕಷ್ಟಕೊಡಬೇಕು. ಅವನ ಅಹಿಂಸಾ ಕಾಯಕವನ್ನು ಪರೀಕ್ಷೆ ಮಾಡಬೇಕು. ಎಂದು ಹೇಳಿದರು. ಮಲ್ಲುಗ ಒಪ್ಪಿಕೊಂಡ ಸಮಯ ಕಾಯುತ್ತಿದ್ದ.

ಒಂದು ದಿನ ಮೋಟ ಮಲ್ಲುಗ ಭಕ್ತನಂತೆ ವೇಷ ಹಾಕಿದ. ಹೊರಟ; ದಸರಯ್ಯನನ್ನು ಹುಡುಕಿದ. ಅವನಿದ್ದ ಸ್ಥಳಕ್ಕೆ ಬಂದ. ನೋಡಿದ. ದಸರಯ್ಯ ಕಟ್ಟೆ ಮೇಲೆ ಸುಮ್ಮನೆ ಕುಳಿತಿದ್ದ ಧ್ಯಾನದಲ್ಲಿ ತೊಡಗಿದವನಂತಿದ್ದ.

'ಶರಣು, ಶರಣು,' ಎಂದು ಮಲ್ಲುಗ ನಮಸ್ಕರಿಸಿದ.

'ನಮಸ್ಕಾರ, ಶರಣು, ಶರಣಾರ್ಥಿ' ಎಂದು ಪ್ರತಿವಂದಿಸಿದ ದಸರಯ್ಯ.

ಆಗ ಮಲ್ಲುಗ ದಸರಯ್ಯನನ್ನು ಕೆಣಕಿದ. ಕಾರಣವಿಲ್ಲದೇ ಜಗಳ ತೆಗೆದ. ಗುದ್ದ ತೊಡಗಿದ. ದಸರಯ್ಯನನ್ನು ಗುದ್ದಿದ ಗುದ್ದೇ ಗದ್ದಿದ. ದಸರಯ್ಯ ಸುಮ್ಮನಿದ್ದ.!

ಮಲ್ಲುಗ ಗುದ್ದಿದ ಕಾರಣ ಸರಯ್ಯನ ಮೈಕೆಂಪಾಯಿತು. ಒಡೆಯಿತು. ರಕ್ತ ಬಂತು. ನೆತ್ತರು ಸುರಿಯಿತು. ಆದರೂ ದಸರಯ್ಯ ಸುಮ್ಮನಿದ್ದ.

ಮಲ್ಲುಗನಿಗೆ ಗುದ್ದಿ ಗುದ್ದಿ ಕೈ ನೊವಾಯಿತು ಮೈ ಸುಸ್ತಾಯಿತು, ಸಾಕಾಯಿತು. ಸುಸ್ತಾಗಿ ಕೆಳಗೆ ಕುಳಿತ.

ಆಗ ದಸರಯ್ಯ ಮಲ್ಲುಗನನ್ನು ನೋಡಿದ ಪಾಪ ಸಾಕಾಗಿ ಕುಳಿತಿದ್ದಾನೆ. ಸುಸ್ತಾಗಿದ್ದಾನೆ ಅವನನ್ನು ಉಪಚರಿಸಿದ.

ನನ್ನನ್ನು ಗುದ್ದಿಗುದ್ದಿ ನಿಮಗೆ ಮೈಕೈ ನೋವಾಯಿತೆ? ಶ್ರಮವಾಯಿತೆ? ಹಿಂಸೆಯಾಯಿತೆ? ಎಂದು ಉಪಚಾರ ಮಾಡಿದ. ಮಲ್ಲುಗನ ಮೈಕೈ ಒತ್ತಿದ. ತಡವರಿಸಿದ. ಉಪಚರಿಸಿದ.

ಆಶ್ಚರ್ಯ! ಮಲ್ಲುಗನಿಗೇ ಆಶ್ಚರ್ಯ! ದಸರಯ್ಯ ತನ್ನ ಮೈ ಮುಟ್ಟದ ತಕ್ಷಣ ತನ್ನ ಶ್ರಮವೆಲ್ಲಾ ಪರಿಹಾರವಾಯಿತು. ಸುಸ್ತೆಲ್ಲಾ ಹೊಯಿತು.

ನೋಡುತ್ತಾನೆ. ತನ್ನ ಮೋಟ ಕೈಗಳು ಬೆಳೆಯುತ್ತಿವೆ! ತನಗೂ ಕೈಗಳು ಬಂದವು ಮಲ್ಲುಗನಿಗೆ ಮೋಟಾದ ಕೈಗಳೆರಡೂ ಬೆಳೆದವು.

ಭಕ್ತನ ವೇಷವನ್ನು ಮಾತ್ರ ಧರಿಸಿಕೊಂಡಿದ್ದ ಮಲ್ಲುಗ ಈಗ ನಿಜವಾದ ಭಕ್ತನಾದ. ಅವನ ಮನಸ್ಸು ಪರಿವರ್ತನೆಗೊಂಡಿತು.

ಅವನಿಗೆ ತನ್ನ ತಪ್ಪು ಅರ್ಥವಾಯಿತು. ತಾನು ಮಾಡಿದ ಅಪರಾದಕ್ಕೆ ಕ್ಷಮಾಪಣೆ ಕೇಳಿದ. ಪಶ್ಚಾತಾಪ ಪಟ್ಟ.

ದಸರಯ್ಯ ಅವನನ್ನು ಕ್ಷಮಿಸಿದ. ಮನ್ನಿಸಿದ. ಉದ್ಧರಿಸಿದ.

ದಸರಯ್ಯನ ಮಹಿಮೆಯಿಂದ ಮೋಟಮಲ್ಲುಗ ಮಲ್ಲಯ್ಯನಾದ. ಭಕ್ತನಾದ. ಮಹಾಭಕ್ತನಾದ ಶರಣನಾದ.

ದಸರಯ್ಯ ಅಹಿಂಸಾಮೂರ್ತಿ ಮಹಾತ್ಮ. ಜಗತ್ತಿನಲ್ಲಿ ಯಾರ, ಯಾವುದರ ಮನಸ್ಸಿಗೂ ಮೈಗೂ

ನೋವಾಗದಂತೆ ನಡೆದು ಕೊಂಡವನು. ಅಹಿಂಸಾ ಧರ್ಮವನ್ನೇ ತನ್ನ ಕಾಯಕವನ್ನಾಗಿ ಮಾಡಿಕೊಂಡವನು. ಕಾಯಕವೇ ಕೈಲಾಸವೆಂದವನು. ಕೈಲಾಸ ಸೇರಿದನು.



(47 ನೇ ಪುಟದಿಂದ)

15 ಷಡ್ವರ್ಣ:— ಶ್ವೇತ, ಪೀತ, ಕಪಿಲ, ಹರಿತ, ಕೃಷ್ಣ, ಮಾಂಜಿಷ್ಠ.
16 ಷಡ್ಭಾವ ವಿಕಾರ:— ಜಾಯತೇ, ಅಸ್ಥಿತೇ, ಪರಿಣಾಮತೇ, ಪ್ರವರ್ಧತೇ, ಅಪೇಕ್ಷೀಯತೇ, ವಿನಶ್ಯತೇ.
17 ಷಡ್ವಿಸರ್ಗ:— ಪ್ರತಿಭಾ, ಶ್ರವಣ, ವಾರ್ತೆ, ದರ್ಶನ, ಆಸ್ವಾದನ, ಆಘ್ರಾಣ.
18 ಷಡಿಂದ್ರಿಯ:— ಚಕ್ಷು, ಶ್ರೋತ್ರ, ರಸನ, ಘ್ರಾಣ, ತ್ವಕ್ಕು, ಮನ.
19 ಷಡ್ವಿಷಯ:— ರೂಪ, ಶಬ್ದ, ರಸ, ಗಂಧ, ಸ್ಪರ್ಶ, ಜ್ಞಾನ.
20 ಷಟ್ಪದಿ:— ಶರ, ಕುಸುಮ, ಭೋಗ, ಭಾಮಿನೀ, ಪರಿವರ್ಧಿನೀ, ವಾಧಕ.
21 ಷಡಗ್ನಿ:— ಗಾರ್ಹಪತ್ಯ, ಅಹವನೀಯ, ದಕ್ಷಿಣಾಗ್ನಿ, ಸಭ್ಯ, ಅವಸಭ್ಯ, ಔಪಾಸನಾಗ್ನಿ.
22 ಷಡ್ದರ್ಶನ:— ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸಾ, ವೇದಾಂತ.
23 ಷಡ್ದುರ್ಗ:— ಧನ್ವದುರ್ಗ, ಮಹೀದುರ್ಗ, ಗಿರಿದುರ್ಗ, ಮನುಷ್ಯದುರ್ಗ, ಮೃದ್ದುರ್ಗ, ವನದುರ್ಗ.
24 ಗೋಷಡಂಗ:— ಪಂಚಗವ್ಯಗಳು ಮತ್ತು ಗೋರೋಚನ.
25 ಷಡ್ದ್ರವ್ಯ:— ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ.
26 ಹಾವಭಾವಷಟ್ಕ :— ವಿಲಾಸ, ಬಿಬ್ಬೋಕ, ವಿಭ್ರಮ, ಲಲಿತ, ಹೇಲಾ, ಲೀಲಾ.
27 ಷಡಂಗಧೂಪ:— ಸಿತ, ಆಜ್ಯ, ಮಧು, ಗುಗ್ಗುಲ, ಅಗರು, ಚಂದನ.
28 ಷಟ್ಚಕ್ರಗಳು:— ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ. ಆಗ್ನೇಯ.
29 ಷಟ್ಚಕ್ರಸ್ಥಾನಗಳು:— ಬೆನ್ನುಹುರಿಯತುದಿ, ಬೆನ್ನುಹುರಿಯ ತುದಿಗೂ ನಾಭಿಗೂ ಮಧ್ಯಭಾಗ, ನಾಭಿ, ಎದೆ, ಕಂಠ, ಭ್ರೂಮಧ್ಯ.
30 ಷಟ್ಚಕ್ರಗಳ ಆಕಾರ;— ಚತುರಸ್ರ, ಅರ್ಧಚಂದ್ರ, ತ್ರಿಕೋಣ, ಷಟ್ಕೋಣ, ವೃತ್ತ, ಚಿತ್ರಾ.
31 ಷಟ್ಚಕ್ರ ಭೂಗಳು:— ಪೃಥ್ವಿ, ಆಪ್, ತೇಜ, ವಾಯು, ಆಕಾಶ, ಮನಸ್ಸು.
32 ಷಟ್ಚಕ್ರವರ್ಣಗಳು:— ಪೀತ, ಶ್ವೇತ, ರಕ್ತ, ನೀಲ, ಸ್ಫಟಿಕ, ಮಾಣಿಕ್ಯ.
33 ಷಟ್ಚಕ್ರ ಕಮಲದಳಗಳು:— 4 ದಳ, 6 ದಳ, 10 ದಳ, 12 ದಳ, 16 ದಳ,
34 ಷಟ್ಚಕ್ರಾಕ್ಷರಗಳು;— ವಾದಿ ಸಾಂತ, ಬಾದಿಲಾಂತ, ಡಾದಿ ಫಾಂತ, ಕಾದಿಠಾಂತ, ಅಆದಿ ಔಅಂಅ, ಹಂ, ಕ್ಷ.





# ಚಂದ್ರಶೇಖರ ವೆಂಕಟರಾಮನ್ (ಸರ್. ಸಿ. ವಿ. ರಾಮನ್)

ಪ್ರೊ॥— ಡಾ॥ ಕೆ. ಎಂ. ಶಿವಾನಂದಯ್ಯನವರು, ಎಂ. ಎ., ಪಿ. ಹೆಚ್. ಡಿ.,

ಭಾರತೀಯರು ವಿಜ್ಞಾನದಲ್ಲಿ ಪರಕೀಯರಿಗೆ ಕಡಿಮೆಯಿಲ್ಲ ಎಂಬುದಕ್ಕೆ ಸರ್. ಸಿ. ವಿ. ರಾಮನ್ ರವರ ಸಾಧನೆಯೇ ಸಾಕ್ಷಿ. ೧೮೮೮ ನವೆಂಬರ್ ಏಳರಂದು ಜನಿಸಿದ ಶ್ರೀರಾಮನ್ ೧೯೦೭ ರಲ್ಲಿ ಮದ್ರಾಸು ವಿಶ್ವವಿದ್ಯಾಲಯದ ಎಂ. ಎ. ಪಧವೀಧರರಾದರು. ಆ ಕಾಲದಲ್ಲಿ ಪೂರ್ಣ ಸಮಯವನ್ನು ಸಂಶೋಧನೆಗಾಗಿ ಮೀಸಲಾಗಿಸುವುದು ರೂಢಿಯಲ್ಲಿರಲಿಲ್ಲ. ಅದಕ್ಕಾಗಿ ಅವರು ಸರಕಾರೀ ಹುದ್ದೆಯಲ್ಲಿ ಹತ್ತು ವರ್ಷಕಾಲ ಇದ್ದರು. ಆ ಮಧ್ಯೆ ಅವರಲ್ಲಿದ್ದ ಅಸಾಧಾರಣ ವೈಜ್ಞಾನಿಕ ಪ್ರತಿಭೆ ಸರ್ ಅಶುತೋಷ್ ಮುಖರ್ಜಿಯವರ ಗಮನಕ್ಕೆ ಬಂದುದು ಯೋಗಾಯೋಗವೇ. ಸರ್ ಅಶುತೋಷ್ ಅವರನ್ನು ಪಲಿತ್ (Palit) ಪ್ರೊಫೆಸರ್ ಆಗಿ ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ನೇಮಿಸಿದರು. ಸರಕಾರೀ ಹುದ್ದೆಗಳ ಸೌಲಭ್ಯಗಳನ್ನು ತ್ಯಜಿಸಿ ಜ್ಞಾನದ ಬೆಂಬತ್ತಿ ಹೋದುದು ಮತ್ತು ಮುಖರ್ಜಿಯವರು ಸಾಮಾನ್ಯ ಸರಕಾರೀ ಅಫೀಸರನಿಗೆ ಪ್ರೊಫೆಸರ್ ಪದವಿಯನ್ನು ಕೊಟ್ಟುದು ವಿಜ್ಞಾನ ಪ್ರಪಂಚದ ಸುದೈವ ಘಟನೆಗಳು.

ತನ್ನ ಚಿಕ್ಕ ವಯಸ್ಸಿನಲ್ಲೇ ಸರ್ ಸಿ. ವಿ. ರಾಮನ್ ವೀಣೆ, ವಯೋಲಿನ್ ಮುಂತಾದ ವಾದ್ಯಗಳನ್ನು ಧ್ವನಿ ತತ್ತ್ವಗಳನ್ನಭ್ಯಸಿಸುತ್ತಿದ್ದರು. ಮೃದಂಗದ ಬಗ್ಗೆ ಅವರಿಗೆ ವಿಶೇಷ ಆಸಕ್ತಿ ಇತ್ತು. ಎಂ. ಎ. ಪಧವೀಧರರಾಗುವ ಮೊದಲೇ ಮೃದಂಗಸ್ಪಂದನಗಳ ಗಣಿತವನ್ನೇ ಕಂಡುಹಿಡಿದಿದ್ದರು. ಈ ಸಂಶೋಧನೆಯು ಸಾಕಷ್ಟು ಗಹನವಾದುದೂ, ಮೌಲಿಕವಾದುದೂ, ಮೂಲಭೂತವಾದುದೂ ಆಗಿತ್ತು. ಜರ್ಮನ್ ಫಿಸಿಕಲ್ ಸೊಸೈಟಿಯವರು ರಾಮನನವರಿಗೆ ವಾದ್ಯದ ಸೂತ್ರಗಳ ಕುರಿತು ತಮಗೆ ಒಂದು ಲೇಖನವನ್ನು ಕೊಡುವಂತೆ ಕೇಳಿಕೊಂಡರು. ರಾಮನರು ಸಂತೋಷದಿಂದ ಇದಕ್ಕೊಪ್ಪಿದರು. ಇವರು ಕೊಟ್ಟ ಲೇಖನವು ಅಲ್ಲಿನ ಶ್ರೇಷ್ಟ ಭೌತಶಾಸ್ತ್ರ ಸಂಬಂಧದ ಪುಸ್ತಕ ಮಾಲಿಕೆಯಲ್ಲಿ (Hand buch der physik) ಕಾಣಿಸಿಕೊಂಡಿತು. ಭೌತಶಾಸ್ತ್ರ ಜಗತ್ತಿನಲ್ಲೇ ಮುಂದುವರಿದ ಜರ್ಮನರು ರಾಮನರಿಗೆ ಕೊಟ್ಟ ಈ ಆಮಂತ್ರಣ ಅವರ ಪ್ರತಿಭೆಯನ್ನು ಸಾರಿ ಹೇಳುವ ಪ್ರಸಂಗ.

ರಾಮನರು ಸ್ಟಾಕ್ ಹೋಂನಲ್ಲಿ ನೋಬೆಲ್ ಬಹುಮಾನವನ್ನು ಸ್ವೀಕರಿಸಿ ಇಂದಿಗೆ ಮೂವತ್ತೆಂಟು ವರ್ಷಗಳಾದುವು. ಇದಕ್ಕಾಗಿಯೇ ಇಂದು ಅವರು ವಿಶ್ವ ಪ್ರಸಿದ್ಧರಾಗಿದ್ದಾರೆ. ಅವರು ಕಂಡು ಹಿಡಿದ "ರಾಮನ್ ಪರಿಣಾಮ" (Raman Effect) ಎಂಬ ವಿಷಯುವೇ ಅವರಿಗೆ ಈ ಪಾರಿತೋಷಕವನ್ನು ದೊರಕಿಸಿದೆ. ನೊಬೆಲ್ ಪಾರಿತೋಷಕ ಪಡೆದ ಏಕ ಮಾತ್ರ ಭಾರತೀಯ ವಿಜ್ಞಾನಿ ಅವರು.

ಮ್ಯಾಕ್ಸ್‌ವೆಲ್ ಎಂಬ ವಿಜ್ಞಾನಿಯು "ಬೆಳಕು" ರೇಡಿಯೋ ಅಲೆಗಳ ರೂಪವುಳ್ಳವುಗಳೆಂದು ಹೇಳಿದ್ದ. ಈ ಬೆಳಕಿನ ಅಲೆಗಳು ರೇಡಿಯೋ ಅಲೆಗಳಿಗಿಂತ ಲಕ್ಷಪಾಲು ಚಿಕ್ಕ ತರಂಗಾಂತರ ವುಳ್ಳವುಗಳೆಂದೂ ಸಾಧಿಸಿದ್ದ. ಆಲ್ಬರ್ಟ್ ಐನ್‌ಸ್ಟೀನ್‌ರು ಬೆಳಕು ಅಲೆಗಾಗಿಯಲ್ಲದೆ ಸೂಕ್ಷ್ಮ ವಸ್ತು (Particles) ಗಳಂತೆ ಕೂಡ ಚರಿಸಬಲ್ಲುವೆಂದು ಸೂಚಿಸಿದ್ದರು. ಈ ವಿಷಯ 25 ವರ್ಷಗಳವರೆಗೆ ಚರ್ಚಾಸ್ಪದವಾಗಿತ್ತು. ರಾಮನರ ನೂತನ ಪ್ರಯೋಗಗಳಿಂದ ಕೊನೆಗೊಮ್ಮೆ ಈ ವಿಚಾರಕ್ಕೆ ಪುಷ್ಟಿ ದೊರೆಯಿತು

ಬೆಳಕಿನ ಹಸಿರು ಬಣ್ಣದ ಕಿರಣವನ್ನು ಇದನ್ನು ಪಾದರಸದ ಉಗಿಯು ದೀಪ (Mercury vapour lamp) ದಿಂದ ಪಡೆಯುಬಹುದು ಬೆನ್‌ಜಿನನಂತಹ (Benzene) ಪಾರದರ್ಶಕ ವಾಹಕದ ಮುಖಾಂತರ ಹಾದು ಹೊಗುವುದನ್ನು ಗಮನಿಸಿ ಬೆಳಕಿನ ಸೂಕ್ಷ್ಮ ಕಣಗಳನ್ನು ಫೋಟೋನ್ (Photon) ಎಂತ ಕರೆಯುತ್ತಾರೆ. ಈ ಫೋಟೋನ್‌ಗಳೇ ಬೆನ್‌ಜಿನ್‌ನ ಅಣುಗಳ ನಡುವಣ ಕಣ್ಣಿಗೆ ಕಾಣದ ಖಾಲಿ ಜಾಗಗಳ ಮುಖಾಂತರ ತೂರಿಹೋಗಬಹುದು. ಹೀಗೆ ಹೊರ ಬರುವ ಕಣಗಳಲ್ಲಿ ಶಕ್ತಿಯು ಹಿಂದಿನಷ್ಟೇ ಇದ್ದು ಅವುಗಳಲ್ಲಿ ಯಾವುದೇ ವ್ಯತ್ಯಾಸವಾಗಿರುವುದಿಲ್ಲ.

ಆದರೆ ಬೆಳಕಿನ ಕಣಗಳು ಬೆನ್‌ಜಿನ್‌ನ ಅಣುಗಳೊಂದಿಗೆ ಕೆಲವೊಮ್ಮೆ ಘರ್ಷಿಸಬಹುದು. ಇಂಥ ಸಂಭಾವ್ಯ ಘರ್ಷಣೆಯು ಎರಡು ಬಂದೂಕಿನ ಸಿಡಿಗುಂಡುಗಳು ಘರ್ಷಿಸುವ ಸ್ವರೂಪದ್ದು. ಸಿಡಿಗುಂಡುಗಳು ಪರಸ್ಪರ ಘರ್ಷಿಸುವಾಗ ಶಕ್ತಿಯು ಒಂದರಿಂದ ಇನ್ನೊಂದಕ್ಕೆ ಸಾಗಿ ಹೋದರೂ, ಅವುಗಳ ಶಕ್ತಿಯ ಮೊತ್ತವು ಹಿಂದಿನಷ್ಟೇ ಇರುವುದು. ಅದೇ ರೀತಿ ಬೆಳಕಿನ ಕಣವು, ದ್ರವದ ಅಣುಗಳೊಂದಿಗೆ ಘರ್ಷಿಸಿದಾಗ ಅದು ತನ್ನ ತತ್ತಿಯ ಸ್ವಲ್ಪ ಭಾಗವನ್ನು ಕಳೆದುಕೊಳ್ಳಲೂಬಹುದು. ಇಲ್ಲವೇ ಅಣುಗಳಿಂದ ಸ್ವಲ್ಪ ಶಕ್ತಿಯನ್ನು ಹೀರಿಕೊಳ್ಳಲೂ ಬಹುದು. ಕಣವು ಈ ರೀತಿ ಹೊರಬರುವಾಗ ಅದರ ಶಕ್ತಿಯೂ ಒಂದು ವೇಳೆ ಕಡಿಮೆಯಾದಲ್ಲಿ ಈ ಕಡಿಮೆ ಯಾದ ಶಕ್ತಿಯು ಅಣುವಿನೊಂದಿಗೆ ಸೇರಿ ಹೋಗಿರುತ್ತದೆ. ಅದರ ಶಕ್ತಿಯು ಸ್ವಲ್ಪ ಹೆಚ್ಚಾದಲ್ಲಿ ಈ ಹೆಚ್ಚಾದ ಶಕ್ತಿಯು ದ್ರವದ ಅಣುಗಳಿಂದ ಬಂದದ್ದಾಗಿರುತ್ತದೆ.

ಸೂರ್ಯ ಕಿರಣವು Prison ಮುಖಾಂತರ ಹಾದು ಹೋದಾಗ ಸಪ್ತವರ್ಣದ ವರ್ಣ ಪಂಕ್ತಿಯನ್ನು ಕಾಣುತ್ತೇವೆ. ಇದರ ಒಂದು ಕೊನೆಯಲ್ಲಿ ನೇರಳೆ ಬಣ್ಣವೂ ಇನ್ನೊಂದು ತುದಿಯಲ್ಲಿ ಕೆಂಪು ಬಣ ವೂ ಇದ್ದು ಮಧ್ಯೇ ಹಸಿರು ಹಳದಿ ಮುಂತಾದ ಬಣ್ಣಗಳಿರುತ್ತವೆ. ನೇರಳೆ ಕೊನೆಯಿಂದ ಕೆಂಪಿನ ಕೊನೆಗೆ ಹೋಗುವಾಗ ಕಿರಣಗಳ ಶಕ್ತಿಯು ಕ್ರಮೇಣ ಕಡಿಮೆಯಾಗುತ್ತ ಹೋಗುತ್ತದೆ. ಇದರಿಂದಾಗಿ ನೀಲಿ ಬಣ್ಣದ ಕಿರಣದ ಶಕ್ತಿಯು ಹಸಿರು ಬಣ್ಣದ ಕಿರಣದ ಶಕ್ತಿಗಿಂತ ಹೆಚ್ಚಾಗಿಯೂ ಹಸಿರು ಬಣ್ಣದ ಕಿರಣವು ಹಳದಿ ಬಣ್ಣಕ್ಕಿಂತ ಶಕ್ತಿಯುತವಾಗಿಯೂ ಇವೆ.

ಮೇಲಿನ ಪ್ರಯೋಗದಲ್ಲಿನ ಕಣ ಮತ್ತು ಅಣುಗಳ ಘರ್ಷಣೆಯ ಪ್ರಸಂಗದಲ್ಲಿ ಕಣಗಳ ಶಕ್ತಿಯು ಹ್ರಾಸವಾಗಿ ಅದು ಹೊರಬರುವಾಗ ಬಣ್ಣವು ಬದಲಾವಣೆಯಾಗುವುದನ್ನು ನಿರೀಕ್ಷಿಸಬಹುದು. ಬೆಳಕಿನ ಕಣಗಳು ಬೆನ್‌ಜಿನ್ ಮುಖಾಂತರ ಹಾದು ಹೋಗುವಾಗ ಅವುಗಳ ಬಣ್ಣವು ಕೆಂಪು ಕೊನೆಗೆ ಇಲ್ಲವೇ ನೀಲಿ ಕಡೆಗೆ ಸರಿಯುತ್ತದೆ.

ಉದಾಹರಣೆಗಾಗಿ ಅಂತರ್ಗತ ಕಿರಣವು ಹಸಿರು ಬಣ್ಣದ್ದಾದರೆ, ಹೊರಬರುವಾಗ ಅದು ಹಳದಿ ಬಣ್ಣವನ್ನು ಹೊಂದಬಹುದು. ರಾಮನ್‌ರ ಪ್ರಯೋಗಗಳು ಈ ವಿಷಯುವನ್ನು ಪುಷ್ಟೀಕರಿಸಿವೆ. ಬಣ್ಣದ ಈ ಸರಿಯುವಿಕೆಯನ್ನು ರಾಮನ್ ಶಿಫ್ಟ್ (Raman shifit) ಎಂದು ಕರೆಯುತ್ತಾರೆ. ರಾಮನ್ ಶಿಫ್ಟನ್ನು ಅಳೆದು ಹೊರಬಂದ ಬೆಳಕಿನ ಕಣಗಳ ಶಕ್ತಿ ಬದಲಾವಣೆಯನ್ನು ಕಂಡುಹಿಡಿಯುಬಹುದು. ಕಣಗಳು ತಾವು ಕಳೆದು ಕೊಂಡ ಶಕ್ತಿಯನ್ನು ಅಣುಗಳಿಂದ ಸ್ವೀಕರಿಸುವುದರಿಂದ, ಅಣುಗಳ ಆಂತರಿಕ ಶಕ್ತಿಯಲ್ಲಾದ ಮಾರ್ಪಾಟನ್ನು ಅಳೆಯುಬಹುದು. ಇದರಿಂದ ಅಣು ಮತ್ತು ಪರಮಾಣುಗಳ ರಚನೆ (Molecular and atomic structure) ಗಳನ್ನು ಅಭ್ಯಸಿಸುವುದು ಸಾಧ್ಯವಾಗಿದೆ.

ಇಂದು ಎಲ್ಲ ವಿಶ್ವ ವಿದ್ಯಾಲಯುಗಳಲ್ಲೂ, ಹಿರಿಯ ಮಟ್ಟದ ಪ್ರಯೋಗ ಶಾಲೆಗಳಲ್ಲೂ ರಾಮನ್ ಪರಿಣಾಮವನ್ನು ಅಭ್ಯಸಿಸುವ ಉಪಕರಣಗಳನ್ನು ನಾವು ಕಾಣಬಹುದು. ಸಾವಿರಾರು ಧಾತು, ಉಪ ಧಾತುಗಳ ಆಂತರಿಕ ರಚನೆಯುನ್ನು ಈ ಹೊಸ ಪ್ರಯೋಗದಿಂದ ಸುಲಭವಾಗಿ ಅಭ್ಯಸಿಸಲಾಗಿದೆ. ಹಾಗೂ ಅನೇಕಾನೇಕ ಕೃತಕ ಅಣುಗಳನ್ನು ಕಂಡುಹಿಡಿಯಲಾಗಿದೆ. ವರ್ಣ ಚಿತ್ರ ಗ್ರಹಣ (Colour Photograpyh), ಪ್ಲಾಸ್ಟಿಕ್ಸ್, ಕೃತಕರಬ್ಬರ್ ಗಳಂಥ ಅನೇಕ ಉದ್ಯಮಗಳಿಗೆ ರಾಮನ್ ಪರಿಣಾಮವು ನಾಂದಿಯಾಗಿದೆ. ನಾವು ಇಂದು ನೋಡುತ್ತಿರುವ ವಿವಿಧ ಬಣ್ಣಗಳು, ಟೆರಿಲಿನ್ ನಂತ ಕೃತಕ ವಸ್ತ್ರಗಳು, ಇಂಧನಗಳು, ಔಷಧಗಳು ಈ ಪ್ರಯೋಗಗಳ ಮೂಲಕ ಶೋಧಿಸಲ್ಪಟ್ಟವೆ.

1933ರ ವರೆಗೆ ಕಲಕತ್ತಾ ವಿಶ್ವ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದು ಅನಂತರ ಬೆಂಗಳೂರಿನ ಇಂಡಿಯನ್ ಇಸ್ಟಿಟ್ಯೂಟ್ ಆಫ್ ಸೈಯನ್ಸ್‌ನ ಡೈರೆಕ್ಟರರಾಗಿ ಶ್ರೀ ರಾಮನ್ ನಿಯುಕ್ತಿಗೊಂಡರು. ಅಲ್ಲಿ ಹತ್ತು ವರ್ಷ ಕಾಲ ಇದ್ದು, 1943 ರಲ್ಲಿ ತಾವೇ ಸ್ಥಾಪಿಸಿದ ರಾಮನ್ ರಿಸರ್ಚ್ ಇನ್ಸ್ಟಿಟ್ಯೂಟ್‌ನ ಡೈರೆಕ್ಟರರಾಗಿ ಅವರು ದುಡಿಯುತ್ತಿದ್ದಾರೆ. 1948ರಲ್ಲಿ ರಾಷ್ಟ್ರೀಯ ಪ್ರಾಧ್ಯಾಪಕರಾಗಿ ಅವರು, ಮಾನ್ಯತೆ ಪಡೆದರು.

ಸಾಮಾನ್ಯವಾಗಿ ಸಂಶೋಧಕರು ಯಾವುದಾದರೂ ಒಂದೇ ವಿಷಯುದ ಬಗ್ಗೆ ವಿಶೇಷಭಾಗವಹಿಸಿ ತೃಪ್ತರಾಗುತ್ತಾರೆ. ಆದರೆ ರಾಮನ್‌ರು ಭೌತ ಶಾಸ್ತ್ರದ ಅಂಗಗಳಾದ ಸೌಂಡ್ (Sound) ಸ್ಪೆಕ್ಟ್ರೋಸ್ಕೋಪಿ (Specthoscopy) ಅಪ್ಟಿಕ್ಸ್ (Optics) ಎಕ್ಸ್‌ರೇ ಕ್ರಿಸ್ಟಲೋಗ್ರಫಿ (X-ray cystallography,) ಲ್ಯಾಟೀಸ್ ಡೈನಾಮಿಕ್ಸ್ (Lattice dynomics) ಕಲರ್‌ವಿಶನ್ Colour vition) ಮುಂತಾದುವುಗಳಲ್ಲಿ ನುರಿತವರಾಗಿದ್ದಾರೆ. ಹೀಗಾಗಿ ಭೌತಶಾಸ್ತ್ರದ ಎಲ್ಲ ಭಾಗಗಳಲ್ಲೂ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಅಸಂಖ್ಯ ವಿಜ್ಞಾನಿಗಳನ್ನು ಅವರು ತರಪೇತು ಮಾಡಿದ್ದು ಅವರ ಇನ್ನೊಂದು ಸಾಧನೆ. ರಾಷ್ಟ್ರೀಯ ಭೌತಶಾಸ್ತ್ರ ಪ್ರಯೋಗ ಮಂದಿರ (National physical laboratory) ದ ಡೈರೆಕ್ಟರ್ ಆಗಿದ್ದ ಡಿ|| ಕೆ. ಎಸ್. ಕೃಷ್ಣನ್‌ರು ರಾಮನ್‌ರ ವಿದ್ಯಾರ್ಥಿ ರಕ್ಷಣಾ ಖಾತೆಯ ಸಲಹೆಗಾರರಾದ ಡಾ|| ಕೆ. ಎಸ್. ಭಗವಂತಮ್ ಇನ್ನೊಬ್ಬರು. ಇಂಥ ಅನೇಕರ ಹೆಸರುಗಳನ್ನು ಉಲ್ಲೇಖಿಸಬಹುದು.

ಭಾರತದಲ್ಲಿ ಎಫ್. ಆರ್. ಎಸ್. (Fellow of Royal Society) ಚುನಾಯಿತರಾದ ಕೇವಲ ಹದಿನಾರೇ ವಿಜ್ಞಾನಿಗಳಲ್ಲಿ ರಾಮಮನ್‌ರು ಒಬ್ಬರು. 1928 ರಲ್ಲಿ ಭಾರತೀಯ ವಿಜ್ಞಾನ ಅಧಿವೇಶನದ (Natinonal sience congress) ಅಧ್ಯಕ್ಷರಾಗಿಯೂ, 1934 ರಲ್ಲಿ ಇಂಡಿಯನ್ ಅಕೆಡಮಿ ಆಫ್ ಸ್ಯಾಯನ್ಸಸ್ ಅಧ್ಯಕ್ಷರಾಗಿಯೂ ಇವರು ಕಾರ್ಯ ನಿರ್ವಹಿಸಿದ್ದಾರೆ. ಸೋವಿಯತ್ ಆಕೆಡಮಿ ಆಫ್ ಸಾಯನ್ಸ್‌ಸ್ (1947) ಮತ್ತು ಪ್ಯಾರಿಸ್ ಅಕೆಡಮಿ (1949) ಗಳ ಸದಸ್ಯರಾಗಿಯೂ ಚುನಾಯಿತರಾಗಿದ್ದಾರೆ. ನೋಬೆಲ್ ಪಾರಿತೋಷಕದ ಜೊತೆ ಇನ್ನೂ ಅನೇಕ ಶ್ರೇಷ್ಠ ಅಂತರ ರಾಷ್ಟ್ರೀಯ ಪಾರಿತೋಷಕಗಳು ಅವರಿಗೆ ದೊರಕಿವೆ. ಇದು ಪ್ರತಿಯೊಬ್ಬ ಭಾರತೀಯನೂ ಹೆಮ್ಮೆ ಪಡುವಂತಹದ್ದು.

80 ವರ್ಷದ ವಯೋವೃದ್ಧ ರಾಮನರು ಈಗಲೂ ಬೆಂಗಳೂರಿನ ರಾಮನ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿ ಅಹರ್ನಿಶಿ ದುಡಿಯುತ್ತಿದ್ದಾರೆ.

## ಬಡವನ ಕೂಗು

ಮನೆ ಮನೆಯ ಬಾಗಿಲಿಗೇ ಬಂದಿಹೆನು ಅಮ್ಮಾ
ಕೈ ನೀಡಿ ಬೇಡುವೆನು ಹಸಿವಿನಾ ಬೇಗೆಯಿಂದಾ
ತಿರುಕ ತಿರುಕಿ ಎಂದೇಕೆ ನಮ್ಮ ಜಗವು ಕರೆವುದು
ಅಮ್ಮಾ

ನಿಮ್ಮ ಮನೆಯ ಕಂದಾ ನಾನೆಂದು ತಿಳಿಯಿರಮ್ಮ
ಜಗವ ಸುತ್ತಿ ನಾನು ಬಂದಿಹೆನು ಅಮ್ಮಾ
ನಿಮ್ಮ ಕರುಣೆಯಾ ಕಂದಾ ನಾನೆಂದು ತಿಳಿಯ
ರಮ್ಮಾ ||ಮನೆ||

— ಮ. ಚ. ಈಶ್ವರ್.

# “ಚಂದ್ರಮತಿ”

— ಎನ್. ರಾಜಶೇಖರಯ್ಯ, ಎಂ. ಎ.,
ಅಂಕನಹಳ್ಳಿ ಮಠ

ಕನ್ನಡ ಸಾಹಿತ್ಯದಲ್ಲಿ ಸೃಷ್ಟವಾಗಿರುವ ಹಿಂದಿನ ಎಲ್ಲಾ ಕೃತಿಗಳೂ ಮೇರು ಕೃತಿಗಳಲ್ಲ. ಆದರೆ ಮೇರು ಇಲ್ಲದೇ ಇಲ್ಲ. ಉನ್ನತ ಕವಿಯಿಂದ ಉತ್ತಮ ಸಾಹಿತ್ಯ ನಿರ್ಮಾಣವಾಗುತ್ತದೆ. ವಿಶ್ವದ ಮಹಾಕವಿಗಳ ಸಮಗದ್ದುಗೆಯಲ್ಲಿ ಸರಿಸಮರೆಂದು ಕುಳಿತುಕೊಳ್ಳುವ ಕವಿಗಳು ವಿರಳ. ಆದರೆ ಅಂತಹ ಯೋಗ್ಯತೆಯನ್ನು ಪಡೆದ ಕವಿ ಹಂಪೆಯ ಹರೀಶ್ವರನ ಶಿಷ್ಯ ವರ ಕವಿ ರಾಘವಾಂಕನೊಬ್ಬನೆಂಬುದು ನಿರ್ವಿವಾದ ಆತನು ಬರೆದ ಕಾವ್ಯಗಳಲ್ಲಿ ಹರಿಶ್ಚಂದ್ರ ಕಾವ್ಯ ಕನ್ನಡ ಸಾಹಿತ್ಯದಲ್ಲಿ ಅಮರ ಕಾವ್ಯ. ಕನ್ನಡ ಸಾಹಿತ್ಯ ಮೇರುವಿಗೆ ಕಾಂಚನ ಗಂಗಾದಂತೆ.

ಮೇರು ಕೃತಿಯೆಂದರೆ ಗಾತ್ರದಿಂದಲ್ಲ ಗುಣದಿಂದ. ಹಿಂದಿನ ಕನ್ನಡ ಕಾವ್ಯಗಳೆಲ್ಲ ಸಾಮಾನ್ಯವಾಗಿ ಮತ ಪ್ರಧಾನವಾದವುಗಳು. ಈ ರೀತಿ ಬೆಳೆದು ಬಂದಿರುವುದು ಕನ್ನಡ ಸಾಹಿತ್ಯ ಒಂದೇ ಅಲ್ಲ ಜಗತ್ತಿನ ಹಿಂದಣ ಕವಿ ಕೃತಿಗಳನ್ನು ಒಳಹೊಕ್ಕು ವಿಮರ್ಶಿಸಿದಲ್ಲಿ ಮತಾಂಶದ ಎಳೆಗಳು ಕಂಡು ಬರುತ್ತವೆ. ಕವಿಯಾದವನು ಮಾನವನೇ. ಪರಿಸರ, ಸಮಾಜ ಕವಿಯಮೇಲೆ ತಮ್ಮ ಪ್ರಭಾವವನ್ನು ಬೀರದೇ ಇರುವುದಿಲ್ಲ. ಮಹಾಕವಿ ಡಾಂಟೆಯ “ಡಿವೈನ್ ಕಾಮೆಡಿ” ಮಹಾ ಕವಿ ಮಿಲ್ಟನನ “ಪ್ಯಾರಡೈಸ್ ಲಾಸ್ಟ್” ಮತ್ತು “ಪ್ಯಾರಡೈಸ್ ರಿಗೇನ್ಡ್” ಹಾಗೂ ತುಲಸೀದಾಸರ “ರಾಮಾಯಣ” ಹೀಗೆ ಕಾಲ ಧರ್ಮಕ್ಕನುಗುಣವಾಗಿ ಧರ್ಮದ, ಮತದ ಆಧಾರದ ಮೇಲೆ ಕಾವ್ಯಗಳು ಸೃಷ್ಟಿಯಾಗಿವೆ.

ರಾಘವಾಂಕ ಕವಿಯ ಹರಿಶ್ಚಂದ್ರ ಕಾವ್ಯದಲ್ಲಿ ಮತಾಂಶಗಳಿಗಿಂತ ಕಾವ್ಯಾಂಶ ಅಧಿಕವಾಗಿದೆ. ಆದುದರಿಂದಲೇ ಅದು ಸಹೃದಯರಿಗೆ ಮೆಚ್ಚಿಗೆಯಾಗಿದೆ.

ಐತರೇಯ ಬ್ರಾಹ್ಮಣದಲ್ಲಿರುವ ಕಥೆಯನ್ನು ಆಯ್ದು, ಕವಿ ತನ್ನ ಪ್ರತಿಭಾ ಮೂಷೆಯಲ್ಲಿ ಎರಕ ಹೊಯ್ದು ಕಾವ್ಯ ಕಂಗೊಳಿಸುವಂತೆ ಮಾಡಿದ್ದಾನೆ. ಐತರೇಯ ಬ್ರಾಹ್ಮಣದಲ್ಲಿರುವ ಹರಿಶ್ಚಂದ್ರ ಆದರ್ಶನಲ್ಲ. ಆದರೆ ರಾಘವಾಂಕನ ಕಾವ್ಯ ವಾಹಿನಿಯಲ್ಲಿ ಮಿಂದು ಮಡಿಯುಟ್ಟು ಶುದ್ಧ ಚಾರಿತ್ರ್ಯನಾಗಿ, ಸತ್ಯ ಅಹಿಂಸೆಗಳ ಆದರ್ಶ ಮೂರ್ತಿಯಾಗಿದ್ದಾನೆ. ಅಷ್ಟೇ ಅಲ್ಲದೆ. ಬಾಳಿನ ಬಂಧನಗಳನ್ನೂ ನೀಗಿ ಕಡುಕಷ್ಟದ ಎಲ್ಲೆಗಳನ್ನು ಮೀರಿ ಸತ್ಯ ಯಾತ್ರೆಯ ಪಥಿಕರಿಗೆ ಕೈ ದೀವಿಗೆಯಾಗಿದ್ದಾನೆ. ಈ ಕಾವ್ಯದಲ್ಲಿ ರಾಘವಾಂಕನ ಕಲಾ ಪ್ರೌಢಿಮೆ, ಕವಿತಾ ಶಕ್ತಿ, ಪದಪ್ರಯೋಗ, ರಸ ಮಾಧುರ್ಯ, ಏಕಕಾಲದಲ್ಲಿ, ಆಶ್ಚರ್ಯ, ಆನಂದವನ್ನುಂಟುಮಾಡುತ್ತವೆ. ನಡುಗನ್ನಡದ ಪ್ರಯೋಗ, ನಾದ ಮಾಧುರ್ಯ, ಕಾವ್ಯದ ಭಾವ್ಯತೆ ದಿವ್ಯತೆ ಓದುಗನ ಮನಸ್ಸನ್ನು ಆನಂದದ ಮಡುವಿನಲ್ಲಿ ಆರ್ದ್ರಗೊಳಿಸುತ್ತದೆ.

ಕವಿಯು ಕಾವ್ಯದಲ್ಲಿ ಪ್ರತಿಮಾ ರೂಪದಲ್ಲಿ, ಸತ್ಯ ಸಾಕ್ಷಾತ್ಕಾರವನ್ನು, ಅದರ ಬಳಿಗೆ ಮುಂಬರಿಯುವ ಬದಲು ಇರಬೇಕಾದ ಸಿದ್ಧತೆಗಳನ್ನು ಅಣಿ ಮಾಡಿ ಕೊಡುತ್ತಾನೆ. ಹಳೆಯ ಕಥೆ ರಸ ಕವಿಯ ಕೈಗೆ ಸಿಕ್ಕಿ, ಕಗ್ಗಲ್ಲಿನಿಂದ ಬೇಲೂರು ಶಿಲಾ ಬಾಲಿಕೆಯಾದಂತಾಗಿದೆ. ಕನ್ನಡ ಸಾಹಿತ್ಯದಲ್ಲಿ ಏನಿದೆ ಎನ್ನುವವರು, ಸಹನೆಯಿಂದ, ಈ ಕಾವ್ಯವನ್ನು ನೋಡಿದರೆ ಕನ್ನಡ ಪದಗಳ ಸೂಕ್ಷ್ಮ ಪ್ರಯೋಗ ಅರಿವಾಗುತ್ತದೆ. ಕನ್ನಡ ಭಾಷೆಯ ಮೂಲಕ ಅತ್ಯಂತ ನಿಗೂಢವಾದ,





ಕ್ಲಿಷ್ಟವಾದ ವಿಷಯಗಳನ್ನು ಸುಗಮವಾಗಿ, ಸರಾಗವಾಗಿ ನಿರೂಪಿಸಬಹುದೆಂದು ಅರ್ಥವಾಗುತ್ತದೆ.

ಕಾವ್ಯಭಿತ್ತಿಯಲ್ಲಿ ಬರುವ ವ್ಯಕ್ತಿಗಳು ಅವರ ಸಂಸ್ಕಾರ, ಧೈರ್ಯ, ಸ್ಥೈರ್ಯ, ತ್ಯಾಗಮನೋಭಾವ ಬಹಳ ಯೋಗ್ಯ ರೀತಿಯಲ್ಲಿ ಚಿತ್ರಿತವಾಗಿವೆ. ಹರಿಶ್ಚಂದ್ರನ ಸತ್ಯ, ಚಂದ್ರಮತಿಯ ಸಹನೆ, ಮಂತ್ರಿಯ ಸ್ವಾಮಿ ನಿಷ್ಠೆ, ಪ್ರಜೆಗಳ ರಾಜ ಭಕ್ತಿ, ವಶಿಷ್ಠರ ಸಾತ್ವಿಕ ಸ್ವಭಾವ, ವಿಶ್ವಾಮಿತ್ರರ ರುದ್ರಾಟೋಪ, ನಕ್ಷತ್ರಿಕರ ಹಿಂಸಾಬುದ್ಧಿ, ಒಂದಾದ ಮೇಲೊಂದು ಚಲನ ಚಿತ್ರದ ಹಾಗೆ, ಕಣ್ಣ ಮುಂದೆ ಹಾದು ಹೋಗುತ್ತವೆ.

ಹರಿಶ್ಚಂದ್ರನ ಸತ್ಯ ಯಾತ್ರೆಯಲ್ಲಿ ಚಂದ್ರಮತಿ ಸಹ ಯಾತ್ರಿಣಿ. ಒಮ್ಮೊಮ್ಮೆ ಪತಿ ತಡವರಿಸಿದಾಗ ಧೈರ್ಯ ಹೇಳಿ ಮುನ್ನಡಿಯುವಂತೆ ಮಾಡುತ್ತಾಳೆ. ಹೆಣ್ಣುಮಾಯೆ, ತನ್ನ ಪತಿಯನ್ನು ಬಂಧನದಲ್ಲಿ ಬಿಗಿಯುತ್ತಾಳೆ ಎಂಬ ಮಿಥ್ಯಾವಾದಿಗಳಿಗೆ ಹರಿಶ್ಚಂದ್ರ ಕಾವ್ಯವನ್ನು ಓದಿದಾಕ್ಷಣ ಆ ಭಾವನೆ ತೊಲಗಿ ಪತ್ನಿ ಪತಿಯ ಬಾಳಿನ ಸಹಭಾಗಿನಿ, ಪತಿಯ ಜೀವನದಲ್ಲಿ ಪೂರಕಗಳು ಎಂದು ತಿಳಿದು ಬರುತ್ತದೆ. ಇದೇ ಹಿಂದೂ ಧರ್ಮದ ಸಂಸ್ಕೃತಿಯ ವಿಶಿಷ್ಟ ಲಕ್ಷಣ.

ಚಂದ್ರಮತಿಯ ಜೀವನ ಚಿತ್ರವನ್ನು ನೋಡಿದರೆ ರಾಜ ಭೋಗದಲ್ಲಿದ್ದವಳು, ಸುಖದ ಸೋಪಾನದಲ್ಲಿ ಓಲಾಡಿದವಳು. ಕಾಲಗರ್ಭದ ಹೊಡೆತಕ್ಕೆ ಸಿಕ್ಕಿ ಸಕಲವನ್ನು ತೊರೆದು ಗಂಡನನ್ನು ಹಿಂಬಾಲಿಸುತ್ತಾಳೆ ರಾಣಿಯಾಗಿದ್ದಾಗ. ಕೊನೆಗೆ ಅನಾಮಿಕನ ಆಳಾಗಿದ್ದಾಗ ಅದೇ ಪತಿ ಭಕ್ತಿ, ಗೌರವಗಳನ್ನು ಮೈಗೂಡಿಸಿಕೊಂಡಿರುತ್ತಾಳೆ. ಎಂಥಹ ಸಮಯದಲ್ಲಿಯೂ ಧೈರ್ಯಗೆಡದವಳು. ಮುನಿವರನ ಸಾಲದ ಅವಧಿ ಸನ್ನಿಹಿತವಾದುದನ್ನು ಕಂಡು ಮರುಗುತ್ತಿದ್ದ ಹರಿಶ್ಚಂದ್ರನಿಗೆ ಧೈರ್ಯನಿಧಿಯಾದ, ಸಹನಾಶೀಲಳಾದ ಸತಿ ಚಂದ್ರಮತಿ [1] **“ಸಾಲದೊಳು ಪೋದನಿತು ಪೋಗಲೇಮ್ಮಿಬ್ಬರಂ ಮಾರಿಬಳಿಕುಳಿದುದಂ ಕಾಣು ಭೂಭುಜ ಎಂದಳು”** ಸತಿಸುತರ ವಿಕ್ರಯವಾಯಿತು. ಸತಿಸುತರು ಹರಿಶ್ಚಂದ್ರನನು ಅಗಲಲು ಅಪ್ಪಣೆಯನ್ನು ಕೇಳುತ್ತಿರುವಂತೆಯೇ **“ಬೇಹೊಡೆಯ [2] ನಾನಿರಲು ಮಾರಿದವನಂ ಕೇಳ್ವ, ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜ ಗೇಹಕ್ಕೆ ಜರೆಯುತ್ತ ಕೊಂಡೊಯ್ದನವನಿಪನಮನ ಮರುಗಬೇಹುದೆಂದು”**

ಹಿಂದೆ ರಾಣಿಯಾಗಿದ್ದವಳು, ಸುಖದ ಸಾಮ್ರಾಜ್ಯದಲ್ಲಿದ್ದವಳು. ಸಕಲಾವನಿ ಪತಿಯಾದ ಹರಿಶ್ಚಂದ್ರ ರಾಯನ ಮುಂದೆಯೇ ಈ ಗತಿ! ಯಾರಿದ್ದರೇನು ವಿಧಿಯ ವಜ್ರ ಕಠೋರನಿಯಮದ ಮುಂದೆ ಚಂದ್ರಮತಿಯ ತಾಳ್ಮೆ ಸಹನಾಗುಣಗಳನ್ನಿಲ್ಲಿ ಕಾಣಬಹುದು. ಈ ಸಂದರ್ಭ ಎಂತಹ ಪಾಷಾಣ ಹೃದಯಿಯನ್ನಾದರು ಕರುಣಾ ರಸದ ಮಡುವಿನಲ್ಲಿದ್ದಿ, ಕಣ್ಣೀರಿನ ಕಾಲುವೆಯನ್ನು ಹರಿಸುವಂತಹ ಸನ್ನಿವೇಶವಿದು ಚಂದ್ರಮತಿ ತನ್ನ ಇಡೀ ಬಾಳ ಬಟ್ಟೆಯಲ್ಲಿ ಪತಿಗನುಕೂಲೆಯಾಗಿ ಸಹಬಾಳ್ವೆ ನಡೆಸುವುದನ್ನು ಕಾಣಬಹುದು.

ಮೃಗಯಾ ಬೇಟೆಯಿಂದ ಆಯಾಸಗೊಂಡ ಹರಿಶ್ಚಂದ್ರ ನಿದ್ರೆಯಲ್ಲಿ ದುಸ್ವಪ್ನವನ್ನು ಕಂಡು ವ್ಯಥೆಪಡುವಾಗ ಈ ಸಾಧ್ವೀಮಣಿಯೆ ಪತಿಗೆ ಹಿತವಚನವನ್ನಾಡಿ ಸಮಾಧಾನ ಪಡಿಸುತ್ತಾಳೆ

> “ಬಗೆವಡೀ ಕನಸು ಗುರುವಾಜ್ಞೆಯಂ ಮೀರಿತಕ್ಕೊಗೆವ ಸೂಚನೆ; ಮುನಿಯ ಬೇಡ ಮಂತ್ರಿಗೆ ಮಗಂಗೆನಗೆ, ರಾಜ್ಯಕ್ಕೆ, ಚತುರಂಗಸೇನೆಗೆ ಸಕಲ ಭಂಡಾರಕ್ಕೆ ನಗರಕ್ಕೆ, ಸರ್ವ ಪರಿವಾರಕ್ಕೆ ತೇಜದೇಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ ಮಿಗೆಸತ್ಯವಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆನೆಂದಳು” [18]

1) ಹರಿಶ್ಚಂದ್ರ ಕಾವ್ಯಂ, ಪುಟ 155. 2) ಅದೇ ಪುಟ 157, ಪದ್ಯ 11.
18) ಹರಿಶ್ಚಂದ್ರ ಕಾವ್ಯ ಸಂಗ್ರಹ, ಪುಟ 36, ಪದ್ಯ 22.

ರಾಣಿಯಾದ ಚಂದ್ರಮತಿ ಎಷ್ಟು ಲೋಕೋತ್ತರವಾದ ಅನುಭವವನ್ನು ಪಡೆದಿದ್ದಳು ಎಂಬುದಕ್ಕೆ ಮೇಲಿನ ಮಾತುಗಳೇ ಸಾಕ್ಷಿ.

ವಿಧಿಯ ವಿರೋಧಕ್ಕೆ ಸಿಕ್ಕಿ ಕಾಲಕೌಶಿಕನ ಮನೆಯ ತೊತ್ತಾಗಿ ದುಡಿಯುತ್ತಿದ್ದರೂ, ವಿಶ್ವಾಮಿತ್ರನ ಸತ್ಯ ಪರೀಕ್ಷೆ ಅಷ್ಟಕ್ಕೆ ಮುಗಿಯಲಿಲ್ಲ. ತಾಯಿ ಮಗರಿದ್ದ ಮನೆಯ ವಾತಾವರಣವಾದರೋ ಸಹ್ಯಾತೀತವಾದದ್ದು.

"ಒಡೆಯನತಿ ಕೋಪಿ ಹೆಂಡತಿ ಮಹಾ ಮೂರ್ಖೆ
ಮಗ ಕಡು ಧೂರ್ತ ಸೊಸೆಯಾದಡಧಿಕ ನಿಷ್ಠುರಿ
ಮನೆಯ ನಡೆವವರು ದುರ್ಜನರು ನೆರೆಮನೆಯವರು
ಮಿಥ್ಯಾವಾದಿಗಳು ಪಶುಗಳಗಡು।
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾಳ್ಗೆಡ
ವ ಕರಕರಿಪ ಸೆಣಸುವ ತಪ್ಪ ಸಾಧಿಸುವ ಕೆಡೆಯೊ
ದೆವ ಮಾರಿಗಾರದೆ ಸತ್ತು ಹುಟ್ಟುತಿಹರವನಿಪನ
ಸತಿಪುತ್ರರು ‖ [4]

ಈ ರೀತಿ ಹರಿಶ್ಚಂದ್ರನ ಸತಿಪುತ್ರರು ನಾನಾವಿಧ ಸಂಕಷ್ಟಗಳಿಂದ ಸತ್ತು ಹುಟ್ಟುತ್ತಿದ್ದರು.

ಕಷ್ಟಕಾಣದ ಕೋಮಲಾಂಗಿ, ಪರಗೃಹವಾಸದ ಗಂಧವನ್ನರಿಯದ ಪರಮ ಪತಿವ್ರತೆ ಹಸಿವಿನುಬ್ಬೆಗವನ್ನರಿಯದ ಹರಭಕ್ತೆ

"ತಿಂತಿಣಿಯ ಸೂನೆಗಾರರ ನಿಳಯ ರಕ್ಕಸಿಯ
ಮಾಡ ಹಾವಿನ ಹೇಳಿಗೆ।
ಅಂತಕನ ನಗರ ಮೃತ್ಯುವಿನ ಬಲುಬಾಣಸದ ಹಂತಿ
ಮಾರಿಯ ಮೂರಿಯಾಟದೆಡೆಯೆಂಬಾಗಳೆಂತು
ಜೀವಿಪರಕಟ ಮನೆಯವರ ದುರ್ಧರದೊಳವನಿಪನ
ಸತಿ ಪುತ್ರರು" [5]

ಇಷ್ಟು ಸಂಕಟಗಳನ್ನು ತಾಳ್ಮೆಯಿಂದ ನೀಗುತ್ತಿದ್ದಾಗಲೂ ಈಕೆಯ ಬಾಳಿನಲ್ಲಿ ಬಿರುಗಾಳಿ ಬೀಸಿತು. ಬಾಳಿನ ದಾಂಗುಡಿಯಾಗಿದ್ದ, ವಂಶೋದ್ಧಾರಕನಾಗಿದ್ದ ಮಗನನ್ನು ಸರ್ಪದಿಂದ ಕಡಿಸಿ ಚಂದ್ರಮತಿ ಹೊಟ್ಟೆಗೆ ವಿಶ್ವಾಮಿತ್ರ ಕಿಚ್ಚಿಡುತ್ತಾನೆ. ಹಾವು ಕಡಿದು ಮೃತನಾದ ಮಗನನ್ನು ನೋಡಲೂ ಆಕೆಗೆ ಸ್ವಾತಂತ್ರ್ಯವಿಲ್ಲ. ಹೇಳಿದ್ದನ್ನೆಲ್ಲಾ ಮಾಡಿ ಹೋಗಬೇಕಾಯ್ತು. ಸಪ್ತ ಸಮುದ್ರಪರ್ಯಂತ ರಾಜ್ಯದೊಡೆಯನ ಮಡದಿಯಾದ ಚಂದ್ರಮತಿಯೆಲ್ಲಿ? ಭಿಕಾರಣಿಯಾದ ಚಂದ್ರಮತಿಯೆಲ್ಲಿ? ಆಕೆ ಜೀವಹಿಡಿದು ಬದುಕಬೇಕಾದದ್ದು ಇಬ್ಬರಿಗೋಸ್ಕರ ತನ್ನ ಬಾಳಿನ ಬೆಳಕಾಗಿದ್ದ ಮಗ ಮತ್ತು ಸತ್ಯಸಾಧಕನಾದ ಹರಿಶ್ಚಂದ್ರ ಇವರಿಗೆ. ಸತ್ಯಕ್ಕೋಸ್ಕರ ಪತಿ ಅನಾಮಿಕನ ಆಳಾಗಿ ಶ್ಮಶಾನದಲ್ಲಿದ್ದಾನೆ. ಇನ್ನುಳಿದವನು ಮಗನೊಬ್ಬನೇ. ಅವನೂ ಮೃತನಾಗಿದ್ದಾನೆ! ಅದು ಬಡ ಹಾವು ಕಚ್ಚಿ! ಇದರಿಂದ ಚಂದ್ರಮತಿಯ ಶೂನ್ಯ ಹೃದಯಕ್ಕೆ ಬರಸಿಡಿಲೆರಗಿದಂತಾಗಿದೆ.

ಕಠಿಣ ಹೃದಯದ ಒಡೆಯನನ್ನು ಬೇಡಿ ಮಗನಿದ್ದ ತಾಣಕ್ಕೆ ಹೋಗಬೇಕಾದರೆ ಸಾಕುಬೇಕಾಯ್ತು. **"ಕಜ್ಜವೆಲ್ಲವಂ ಮಾಡಿಹೊರವಂಟಳೊಯ್ಯನೆ ಮನೆಯನು"** [6]ಹರಿಶ್ಚಂದ್ರರಾಯನ ಮಡದಿ ತ್ರಿಶಂಕುವಿನ ಸೊಸೆ, ವಶಿಷ್ಠರ ಶಿಷ್ಯೆ, ಹುತ್ತದ ಬಳಿ ಮೃತಿಹೊಂದಿ ಕಂಗೆಟ್ಟು ಬಿದ್ದಿದ್ದ ಮಗನನ್ನು ಕಂಡು ಕಳವಳಿಸಿದಳು. ಚಂದ್ರಮತಿಯ ಸಂಕಟವನ್ನು ಕವಿ ಕಂಡು ಮರುಗಿ ಕಳವಳಿಸಿದ್ದಾನೆ **"ಕುಮಾರಂಗೆ ಬಂದ ಸಂಕಟದ ಸಂವರಣೆಯನದಾವಜೀವರು ಕೇಳ್ವರು"** [7]

ಈ ದುಃಖದ ಹೊರೆಯನ್ನು ನೋಡಿದಾಗ, ಕೇಳಿದಾಗ ಯಾವ ಕಠಿಣ ಹೃದಯಗಳು ತಾನೆ ಕರುಗುವುದಿಲ್ಲ! ಅದನ್ನೂ ಕನ್ನಡ ತಾಯಿ ಚಂದ್ರಮತಿಯ ದುಃಖ ಕಂಠದಿಂದಲೇ ಕೇಳಿ ಸಂಕಟಪಡಬೇಕು. ಮಗನ ಮೃತ ದೇಹವನ್ನು ಅಪ್ಪುತ್ತಾ, ಮುದ್ದಿಸುತ್ತಾ ಕಂಬನಿಯ ಕಡಲನ್ನು ಹರಿಸುತ್ತಾಳೆ.

4) "ಹರಿಶ್ಚಂದ್ರಕಾವ್ಯಂ" ದ್ವಾಶಸ್ಥಲಂ ಪು 167, ಪದ್ಯ 3
5) ಅದೇ 2
6) ಅದೇ ಪುಟ 172, ಪದ್ಯ 20
7) ಅದೇ ಪುಟ 168, ಪದ್ಯ 6



"ಏವೆನೇವೆನೆಲೆಮಗನೇ
ಸಾವೇಕಾಯಿತ್ತೆಲೆ ಚನ್ನಿಗನೇ ‖
ಎತ್ತಣ ಬರಸಿಡಿಲೆರಗಿತೊನಿನ್ನ
ಹುತ್ತಿನ ಹತ್ತಿರ ಒರಗಿದೆ ಚನ್ನ

ಹಾವು ಹಿಡಿಯೆ ಹಾ ಎಂದೊರಲಿದೆಯಾ
ಸಾವಗವ್ವಾ ಎಂದಳಲಿದೆಯಾ

ರನ್ನದ ಕನ್ನಡಿ ಸಿಡಿದುದೊ ದೇವ
ಹೊನ್ನಕಳಸ ಕೆಡೆ ದೊಡೆದುದೊ ದೇವ

ಹೊನ್ನ ಪ್ರತಿಮೆಯಸು ಹಾರಿಹೋಯಿತೊ

...................................

ಇನವಂಶದ ಲತೆ ಕುಡಿ ಮುರಟಿತ್ತೊ
ಜನಪನಿಟ್ಟ ಸುರತರು ಮುರಿಯಿತ್ತೊ

...................................

ಆರ ಸಿರಿಯ ನೆಳೆಕೊಂಡೆನೊ ಮುನ್ನ
ಅರಳಲನು ಸೆಳೆಕೊಂಡೆನೊ ಮುನ್ನ

...................................

ಅಲ್ಲದೊಡೀಯಳಲಪ್ಪುದೆ ತನಗೆ
ಇಲ್ಲಿ ವೃಥಾ ಸಾವಪ್ಪುದೆ ನಿನಗೆ

...................................

ಪಾಪಿಯೆನ್ನ ನೀನೊಮ್ಮೆಯುನೋಡಾ
ಕೊಪವನುಳಿದೊಯ್ಯನೆ ಮಾತಾಡಾ

.... ................ ..............

ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೇ
ತಂದೆ ತಾಯಿಗಗ್ಗಿಯ ನೀಕುಡದೆ
ಮುಂದೆ ಹೋಗಲಹುದೇ ಮನಗುಡದೆ
ಏಳೆನ್ನಾನಂದಾಮೃತ ಶರಧಿ

...................................

ಏಳಖಿಳಗುಣಾರ್ಣವ ಕಳಾನಿಧಿ

ಏಮಾಳ್ಪೆನಾ ಮಾಡಿರ್ದುದನು
ತಾನುಂಬುದು ವಿಧಿಮಾಡಿದ ಹದನು

...................................

ಎನಗಿನ್ನೆಂತೋ ಶಿವನೇ ಶಿವನೇ
ತನಯನ ನೊಯ್ಯನೆ ಕೊಂದೆಯೊಜವನೆ
ಕರುಣಿಸು ಪಾಪಿಗೆ ಪಂಪಾಪತಿಯೆ
ಕರುಣಿಸು ನಾಥಗೆ ಕಾಶೀಪತಿಯೆ. [8]

ಆಕೆಯನ್ನು ಸಮಾಧಾನ ಪಡಿಸುವವರಾರು ತಾನೇ ಸಮಾಧಾನ ತಂದುಕೊಳ್ಳುತ್ತಾಳೆ. ಎಲ್ಲಿಯೇ ಇರಲಿ ಸುಖ ದುಃಖಗಳೆರಡರಲ್ಲೂ ಚಂದ್ರಮತಿಗೆ ಗಂಡ ಮತ್ತು ಮಗನ ಚಿಂತೆ, ಮಗ ಮೃತನಾದ ಸಮಯ "ಕರುಣಿಸು ನಾಥಗೆ ಕಾಶೀಪತಿಯೆ" ಎಂಬುದಾಗಿ ದೇವನನ್ನು ಪ್ರಾರ್ಥಿಸುತ್ತಾಳೆ ಚಂದ್ರಮತಿ ಭಾರತೀಯ ಸತೀತ್ವದ ಪ್ರತೀಕವಲ್ಲವೆ?

ಮಗನ ದುಃಖದಿಂದ ಬೇಗುದಿಗೊಂಡ ಚಂದ್ರಮತಿ ಮಗನನ್ನು ಉರಿಗಿಕ್ಕಲು ಬರುತ್ತಾಳೆ. ಮುದ್ದುಮೊಹದ ಮಗನನ್ನು ಚಿತೆಯ ಮೇಲಿರಿಸಿ "ಬೆಳೆದಲ್ಲಿ ಬೆಳೆ ಹುಟ್ಟದಲ್ಲಿ ಹುಟ್ಟೆಂದು" ರೋದಿಸುತ್ತಾಳೆ. ಆರೋಧನ ಶ್ಮಶಾನದ ಕಾವಲುಗಾರನ ಕಿವಿತಾಗಿತು.

ವಿಧಿಯ ವಂಚನೆಯನ್ನು ಬಲ್ಲವರಾರು? ಶ್ಮಶಾನವನ್ನು ಕಾಯುತ್ತಿದ್ದವನು ಬೇರೆಯವನಲ್ಲ. ಸತ್ಯಕ್ಕೋಸ್ಕರ ಸಕಲಾವನಿಯನ್ನು ತ್ಯಾಗಮಾಡಿದ. ಅನಾಮಿಕನಿಗೆ ಆಳಾಗಿ ಶ್ರದ್ಧೆಯಿಂದ, ಸ್ವಾಮಿನಿಷ್ಠೆಯಿಂದ ತನ್ನೊಡೆಯನ ಸೇವೆಯನ್ನು ಮಾಡುತ್ತಿದ್ದ ಸತ್ಯಹರಿಶ್ಚಂದ್ರ. ಶ್ಮಶಾನಜೀವನ ಸರ್ವ ವಿಧದ ಸಂಕಟಗಳ ನೋವಿನ ತವರು. ಎಂತಹ ಹಮ್ಮು ಬಿಮ್ಮಿನಿಂದ ಮೆರೆಯುವ ಕಲ್ಲೆದೆಯವನಿಗೂ ವೈರಾಗ್ಯದ ಗಾಳಿಬೀಸುವ ಕ್ಷೇತ್ರ ಶ್ಮಶಾನ. ಹರಿಶ್ಚಂದ್ರ ನಿರ್ಲಿಪ್ತನಾಗಿ, ದೃಢಮನಸ್ಸಿನಿಂದ, ತನ್ನದು, ಪರರದು ಎಂಬ ಅಭಿಮಾನರಹಿತನಾಗಿ ತನ್ನ ಒಡೆಯನಾಜ್ಞೆಯಂತೆ, ಶಿರದಕ್ಕಿ ಹೆಣದುಡಿಗೆ ಹಾಗ ಹಣವನ್ನು ವಸೂಲ್ಮಾಡುತ್ತಿದ್ದನು

8) ಹರಿಶ್ಚಂದ್ರಕಾವ್ಯಂ ಪುಟ 175-182
9) ಅದೇ ಪುಟ 183, ಪದ್ಯ 35

ಗೋಳನ್ನು ಕೇಳಿದ ಹರಿಶ್ಚಂದ್ರ ಎಂದಿನಿಂತೆ "ವೀರಿ ಸುಟ್ಟಿಯಾದೊಡೆ ನಿನಗೆ ವೀರ ಬಾಹುಕನಾಣೆ ಕದ್ದು ಸುಡಬಂದೆ ನಿನ್ನನಿಟ್ಟಿಲುವ ಮುರಿವೆ" [10]ಎಂದು ಚಿತೆಯ ಬಳಿಗೆ ಧಾವಿಸಿ "ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ಪಿಡಿದು ಸೆಳೆದು ಬಿಸುಟಂ ಭೂಪನು" ಇಲ್ಲಿಹರಿಶ್ಚಂದ್ರನ ನಿಷ್ಠೆಯ ಪರಾ ಕಾಷ್ಠತೆಯನ್ನು ಕಾಣಬಹುದು.

ಹರಿಶ್ಚಂದ್ರನ ಹಗಡುತನಕ್ಕೆ ಬೆದರಿದ ಚಂದ್ರಮತಿ "ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನೆಂದು ಬೀಳ್ವವನನೆತ್ತಿ" ಅಂಗಲಾಚಿ ಬೇಡಿದಳು ಇಲ್ಲಿ ಮಾತೃ ಹೃದಯ ಮಗನಿಗೋಸ್ಕರ ಮರುಗುವುದನ್ನು ಕಾಣಬಹುದು. ಮಾತಿಗೆ ಮಾತು ನಡೆದು ಹರಿಶ್ಚಂದ್ರನಿಗೆ ಸತ್ತಿರುವವನು ತನ್ನ ಮಗನೆಂದೂ, ದುಃಖ ಭಾಗಿನಿ ಸತಿ ಚಂದ್ರಮತಿಯೆಂದು ಅರ್ಥವಾಯಿತು. ಆದರೆ ಮಾಡುವುದೇನಿದೆ? ಸತ್ಯ ಪರರಿಗೆ ಒಂದಲ್ಲ ಅನ್ಯರಿಗೆ ಮತ್ತೊಂದಲ್ಲ. ನಿರ್ಮಮಕಾರನಾದ ಹರಿಶ್ಚಂದ್ರ ತನ್ನ ಸತಿಯನ್ನು "ತೆರಿಗೆಯನ್ನಿಕ್ಕದೆ ಸುಡಲ್ಬಾರದುಳ್ಳಡೆಕೊಡಿಲ್ಲದಡೆ ಬೇಗದಿ ಹೋಗಿ ನಿನ್ನೊಡಯನಂ ಬೇಡಿತಾ ತಾರದಿರೆ ಸುಡಲ್ಬೇಡೆಂದನು" ಇದಕ್ಕಿಂತ ಮಿಗಿಲಾದ ನಿಷ್ಠೆ, ಸತ್ಯ ಸಾಧನೆ ಮತ್ತಾವುದು! ಅಳಲಿನ ಅಗಳ್ತೆಯಲ್ಲಿ ಬಿದ್ದು ದಗ್ಧ ಹೃದಯನಾದರೂ ಹರಿಶ್ಚಂದ್ರ ತನ್ನ ನಿಷ್ಠೆಯನ್ನು ಮಾತ್ರ ಮರೆಯಲಿಲ್ಲ. ಇಲ್ಲಿ ತಂದೆಯ ಅಳಲನ್ನು ಅಳೆಯುವವರಾರು. "ದಿನಕರಕುಲದ ನೃಪರ ಹೆಸರಂ ನಿಲಿಸಿ ಬಾಳದೀ ಪರಿಯಲುರುಗಂಗೆ ಸವಿದುತ್ತಾಗಿ ಹೋಹರೇ ಸುಕುಮಾರ" "ಮುಂದುವರಿದು "ಕಾಡೊಳಗೆ ಬಡ ಹಾವು ಕಚ್ಚಿ ಮುನಿವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ ಹೇಳೆಂದನು"

ಹಣವನ್ನು ತರುವೆನೆಂದು ಹೊರಟ ಚಂದ್ರಮತಿ ಮಾಯಕಾರ ವಿಶ್ವಾಮಿತ್ರನ ಮತ್ತೊಂದು ದ್ವೇಷದಾವಾಗ್ನಿಗೆ ತುತ್ತಾದಳು. ವಿಶ್ವಾಮಿತ್ರನ ಮಾಯೆಯಿಂದ ಕೊಲ್ಲಲ್ಪಟ್ಟ ಕಾಶೀರಾಜನ ಪುತ್ರ ತನ್ನ ಮಗನೆಂಬ ಭ್ರಾಂತಿಯಿಂದ ಶವದ ಬಳಿ ರೋಧಿಸುತ್ತಾಳೆ. ರಾಜದೂತರು ಬಂದಾಗ ಆ ಕಗ್ಗೊಲೆಗೆ ತಾನೇ ಕಾರಣಳೆಂದು ಒಪ್ಪಿಕೊಳ್ಳುತ್ತಾಳೆ. ರಾಜಭಟರು.

"ಹಸುಳೆಯಂ ಹೊರಿಸಲಾಗೊಸರ್ವರಕುತ।
ತಲೆಯಿಂದ ಸರಿದುಟ್ಟಸೀರೆತೊಪ್ಪನೆ ತೋಯೆ
ಲಲನೆಯಂ ಕಿತ್ತಲಗುಗಳ ನಡುವೆ ಹೆಡಗೈಯ
ಒಲಿದ ನೇಣಂ ಪಿಡಿದು ಬಡಿಬಡಿದು ನಡಸಿತಂದರು"[13]

ರಾಜ ಬೀದಿಯೊಳಗೆ. ಇದು ಚಂದ್ರಮತಿಯ ದೀನಾವಸ್ಥೆ ಕವಿ ಉತ್ತಮ ಮನಶ್ಶಾಸ್ತ್ರಜ್ಞ. ಬಾಳು ಬೇಸರವಾದ ಚಂದ್ರಮತಿಯ ಬಾಯಿಂದ ಮತ್ತೇನನ್ನು ಹೇಳಿಸಿಯಾನು

"ಕೊಂದುದು ದಿಟಂ ಸತ್ತ ಶಿಶು ಕೈಯಲಿದೆಯಿದಕೆ
ತಕ್ಕುದ ನೀಗ ಕಾಬುದೆಂದಾಡಿದಳು ಜೀವದಾಸೆಯ
ನೇನುವಂ ಹಾರದೆ"

ಇನ್ನು ಚಂದ್ರಮತಿಗೆ ಮರಣ ದಂಡನೆಯ ರಾಜಾಜ್ಞೆಯಾಯಿತು. ವೀರಬಾಹುಕನಿಗೊಪ್ಪಿಸಲಾಯಿತು. ವೀರಬಾಹು ತನ್ನ ಸೇವಕ ಹರಿಶ್ಚಂದ್ರನಿಗೆ "ವಸುಧಾಧಿಪತಿಯ ನೇಹದ ಮಗನ ಕೊಂದ ರಕ್ಕಸಿಯಿವಳನಾ ರುದ್ರಭೂಮಿಯೊಳಗೆಯ್ದಿ ತಪ್ಪಿಸದೆ ಕೊರಳಂ ಕೊರೆದು ಬಿಸುಡೆಂದು ಬೆಸನ ಕೊಡಲು" ತಕ್ಷಣವೇ ಹರಿಶ್ಚಂದ್ರ "ಮುಂದಲೆಯ ಪಿಡಿದು ಕುಸಿಕಿ ಕೆಡೆಮೆಟ್ಟಿ ಕೈಗಳ ಸೇರಿ ಬೆಂಗೆ ಬಾಗಿಸಿ ಬಿಗಿದು ಹೆಡಗೈಯ್ಯ ನೇಣಿಂದ ಹೊಡೆದು ದಟ್ಟಿಸಿ ಪಾಪಿ ಹೊಲತಿ ನಡೆನಡೆಯೆಂದು ನಡೆಸಿ ತಂದಂ ತನ್ನ ತವಗದೆಡೆಗೆ" [14]ಸತ್ಯದ ಪಥ ಎಷ್ಟು ಕಟುತರವಾದದ್ದು! ಯಾನಸಹೃದಯನ ಹೃದಯ ತಾನೆ ಶೋಕ ಸಂತಪ್ತವಾಗುವುದಿಲ್ಲ. ಚಂದ್ರಮತಿಯ ದೀನಾವಸ್ಥೆಯ ಚಿತ್ರವನ್ನು ರಸಕವಿ ರಾಘವಾಂಕನು ತನ್ನ ಪ್ರತಿಭಾ ಕುಂಡದಲ್ಲಿ ಎರಕ ಹೊಯ್ದಿದ್ದಾನೆ.

10) ಹರಿಶ್ಚಂದ್ರಕಾವ್ಯಂ, ಅದೇ ಪುಟ 183, ಪದ್ಯ 36.
11) ಅದೇ ಪುಟ, ಪದ್ಯ 37.
12) ಹರಿಶ್ಚಂದ್ರಕಾವ್ಯಂ, ಪುಟ 187, ಪದ್ಯ 51, ಪುಟ 190, ಪದ್ಯ 3,
13) ಹರಿಶ್ಚಂದ್ರಕಾವ್ಯಂ, ಪುಟ 191, ಪದ್ಯ 7,
14) ಪುಟ 191, ಪದ್ಯ 10.





ಹರಿಶ್ಚಂದ್ರನಿಗೆ ಆಕೆ ಚಂದ್ರಮತಿ ಎಂಬುದು ಗೊತ್ತಿಲ್ಲ. ಆಕೆಯ ಅಂತ್ಯ ಪ್ರಾರ್ಥನೆ ಕೇಳಿದಾಗ ಹನ್ನನೆಹಾರುತ್ತಾನೆ. ಅಂತಹ ಕಠಿಣ ಪರಿಸ್ಥಿತಿಯಲ್ಲೂ ಸಹನಾ ಮೂರ್ತಿಯಾದ ಚಂದ್ರಮತಿ ಈ ರೀತಿ ಪ್ರಾರ್ಥಿಸುತ್ತಾಳೆ.

[15] "ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿದಂ
ಜುಲಿವೆರಸಿ ಗುರು ವಶಿಷ್ಠರಿಗೆರಗಿ ಶಿವನ ನಿರ್ಮಲ
ರೂಪ ನೆನೆದು ಮೇಲಂತಿರುಗಿ ನೋಡಿ ಭೂಚಂದ್ರಾ
ರ್ಕ ತಾರಂಬರಂ।
ಕಲಿಹರಿಶ್ಚಂದ್ರರಾಯಂ ಸತ್ಯವೆರಸಿ ಬಾಳಲಿ ಮಗಂ
ಮುಕ್ತನಾಗಲಿ ಮಂತ್ರಿ ನೆನೆದುದಾಗಲಿ ರಾಜ್ಯ
ದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ ಹರಕೆ
ಹೊಡೆಯೆಂದಳು॥

ಹರಕೆಯನ್ನು ಕೇಳಿದ ಹರಿಶ್ಚಂದ ಹನ್ನನೆ ಹಾರಿದ. ಆದರೂ ಕರ್ತವ್ಯಚ್ಯುತನಾಗಲಿಲ್ಲ. ಚಂದ್ರಮತಿಯ ಶಿರಚ್ಛೇದನ ಮಾಡಲು ಖಡ್ಗ ಬೀಸಿದನು.

"ಹೊಡೆದ ಕಡುಗದ ಬಾಯ ಕಡೆಯ ಹೊಡೆತಗಳ
ನಾಂತು.
ಮಡದಿಯೆಡೆಗೊರಳ ನಡುವವಡಸಿ ಮೂಡಿದನು
ಕೆಂಜೆಡೆಯ ಶಶಿಕಳೆಯ ಸುರನದಿಯ ಬಿಧಿಸಿಗಣ್ಣ
ಫಣಿ ಕುಂಡಲದ ಪಂಚಮುಖದ।
ಎಡದ ಗಿರಿಜೆಯ ತಳಿತದಶಭುಜದ ಪುಲಿದೊಗಲಿ
ನುಡುಗೆಯ ಮಹಾವಿಷ್ಣುನಯನವೇರಿಸಿದ ಮೆ
ಲ್ಲಡಿಯ ಕಾಶೀರಮಣ ವಿಶ್ವನಾಥಂ ಸುರರನೆರ
ವಿಜಯಜಯ ಎನುತಿರೆ॥ [15]

ಹರಿಶ್ಚಂದ್ರನು, ನಾನು ನನ್ನದು, ಎಂಬ ಮೋಹವನ್ನು ವನ್ನು ತೊಡೆದು ಹಾಕಲು ಸಿದ್ಧನಾದಾಗ ಸಾಕ್ಷಾತ್ಕಾರವಾಯಿತು. ಸಕಲ ದೇವಾದಿ ದೇವತೆಗಳು ಬಂದರು. ವಶಿಷ್ಠವಿಶ್ವಾಮಿತ್ರರೊಡಗೂಡಿ ಬಂದು ಆಶೀರ್ವದಿಸಿದರು. ಮಗನಿಗೆ ಮರಳಿ ಜೀವ ಬಂದಿತು. ದೇವಾದಿ ದೇವನ ದಿವ್ಯಸಾಕ್ಷಾತ್ಕಾರವಾಯಿತು.

ರಾಘವಾಂಕ ಕವಿಯ ಮಾತಿನ ಮೋಡಿ, ಕಥಾನಕ, ಸಾಕ್ಷಾತ್ಕಾರದ ರೀತಿ ಅಪ್ರತಿಮವಾದುದು. ವರ್ಣನೆಗೆ ನಿಲುಕುವಂತಹುದಲ್ಲ. ಕನ್ನಡ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಸ್ತ್ರೀ ಪಾತ್ರಗಳಲ್ಲಿ ರಾಘವಾಂಕ ಕವಿ, ಚಿತ್ರಿತ ಚಂದ್ರಮತಿಯ ಪಾತ್ರಕ್ಕೆ ಸರಿದೂಗುವ ಹೋಯಿಕಯ್ ಆಗುವ ಚಿತ್ರಗಳು ವಿರಳವೆಂದೇ ಹೇಳಬೇಕು. ಆಕೆಯ ಸತ್ಯದ ಪಥದಲ್ಲಿ ಪಯಣ ಬೆಳೆಸುವ ಸಾಧಕನ ಮನಸ್ಸು ಸಾಕ್ಷಾತ್ಕಾರದ ಬಳಿಗೆ ಮುಂಬರಿಯುವುದರೊಳಗಾಗಿ ಅಂತರ್ ಪರಿಪಾಕವನ್ನು ಹೊಂದುತ್ತದೆ ಆದುದರಿಂದಲೇ ಕವಿ ಈ ದಿವ್ಯ ಚರಿತಳಾದ ಚಂದ್ರಮತಿಯನ್ನು ಈರೀತಿ ಹೊಗಳಿದ್ದಾನೆ.

[16] ವರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು
ಸಿರಿಗೆ ಹೊಯಿಕ್ಕೈ ಜಾಣೆನೊಳು ವಾಣಿಗಿಮ್ಮಿಗಲು
ಚರಿತದೊಳು ಗಂಗೆಗೆ ಸಾನ್ಯ **ಪತಿಭಕ್ತಿ**ಯೊಳರುಂ
ಧರೆಗೆ ಸರಿಜಸದೊಳು।
ಪರಮ ರೋಹಿಣಿಗೆ ಹೆಗಲೆಣೆ ಪುಣ್ಯದೊಳು ಸ್ವಾಧಾ
ತರುಣಿಗೋರಗೆ ವಂದ್ಯತೆಯೊಳು ಗಾಯಿತ್ರಿಗೊರೆ
ದೊರೆಯೆನಿಸಿಮೆರೆವಳು ಹರಿಶ್ಚಂದ್ರನೃಪನರಸಿ
ಚಂದ್ರಮತಿ ಭೂತಳದೊಳು.

"ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು: ಎರಡಿಲ್ಲ" ಎನ್ನುವ ದಿವ್ಯ ಸಂದೇಶದೊಡನೆ ಹರಿಶ್ಚಂದ್ರ ಚಂದ್ರಮತಿಯರ ಚಾರಿತ್ರ್ಯ ಮುನ್ನಡೆದಿದೆ. "ಈ ಕಾವ್ಯ ವೀರಕರುಣರಸಗಳ ಮಡುವಾಗಿ ಕನ್ನಡ ಸಾಹಿತ್ಯದಲ್ಲಿಯೇ ಹೆಸರಾಂತ ಕೃತಿಯೆನಿಸಿಕೊಂಡಿದೆ."[17]

16) ಹರಿಶ್ಚಂದ್ರಕಾವ್ಯ, ಪುಟ 194, ಪದ್ಯ 19, ಪುಟ 12, ಪದ್ಯ 44.
17) ಸೋಮನಾಥ ಚಾರಿತ್ರ, ಮುನ್ನುಡಿ.

## ಗ್ರಂಥಋಣ


1. ಹರಿಶ್ಚಂದ್ರ ಕಾವ್ಯಂ ಸಂಪಾದಕರು ಶ್ರೀ ಎಲ್. ಬಸವಾರಾಧ್ಯ ಮತ್ತು ಎಸ್. ಬಸಪ್ಪ
2. ಹರಿಶ್ಚಂದ್ರ ಕಾವ್ಯ ಸಂಗ್ರಹ ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿ
3. ಸೋಮನಾಥಚಾರಿತ್ರ್ಯ ಶ್ರೀ ಡಾ॥ ಆರ್. ಸಿ. ಹಿರೇಮಠ ಮತ್ತು ಎಂ. ಎಸ್. ಸುಂಕಾಪುರ
4. ಮಹಾಕವಿ ರಾಘವಾಂಕ ಶ್ರೀ ಡಾ॥ ಆರ್. ಸಿ. ಹಿರೇಮಠ
5. ಗುರುರಾಜ ಚರಿತ್ರ ಸಂಪಾದಕ ಪ್ರೊ॥ ಸಂ. ಶಿ. ಭೂಸನೂರಮಠ, ಎಂ.ಎ.,
6. ರಾಘವಾಂಕ ಚರಿತೆ ಸಂಪಾದಕರು ಪ್ರೊ. ಸ. ಸ. ಮಾಳವಾಡ, ಎಂ.ಎ.,


## ನ ಗೆ ಹ ನಿ

1) ಚಿಕ್ಕಪೇಟೆಯಲ್ಲಿ ಹೋಗುವ ಬರುವವರನ್ನೆಲ್ಲ ವ್ಯಾಪಾರಕ್ಕಾಗಿ ಕರೆಯುವ ಜವಳಿ ಅಂಗಡಿಯ ಹುಡುಗ ಕರೆದಾಗ ಒಳಗೆ ಹೋದ ಒಬ ಮನುಷ್ಯನನ್ನು:-
ಅಂಗಡಿಯವ - ಏನುಬೇಕು ತಮಗೆ
ಮನುಷ್ಯ - ಬಾಗಿಲಲ್ಲಿರುವ ನಿಮ್ಮ ಹುಡುಗ ಹೋಗುಬರುವವರನ್ನೆಲ್ಲ ಬನ್ನಿ ಎಂದು ಕರೆಯುದಿರುವುದುಬೇಕು.

2) ಪಠ್ಯಪುಸ್ತಕದಲ್ಲಿ " ಉದಯವಾಗಲಿ ನಮ್ಮ ಕನ್ನಡನಡು" ಎಂಬ ತಪ್ಪು ವಾಕ್ಯವನ್ನು ಉಪಾಧ್ಯಾಯರು ಮಕ್ಕ
ಳಿಗೆ ವ್ಯಾಖ್ಯಾನಮಾಡುತ್ತ-ನಮ್ಮ ಕನ್ನಡಿಗರ ನಡಗಳ ಉದಯವಾಗಬೇಕು ಎಂದರೆ ಈಗಿರುವುದಕ್ಕಿಂತಲೂ ದಪ್ಪ
ನಾಗಬೇಕು. ಅಂದರೆ ನಮಗೆ ಬಲಹೆಚ್ಚಾಗಬೇಕು.
ಇನ್ಸ್‌ಪೆಕ್ಟರ್ - ಏನ್ರೀ ಹೀಗೇಕೆ ಹೇಳುತ್ತೀರಿ?
ಉಪಾಧ್ಯಾಯ - ಹೌದುಸ್ವಾಮಿ ಬುಕ್ಕಿನಲ್ಲಿ ಕನ್ನಡ ನಾಡು ಉದಯವಾಗಲಿ ಎಂದಿದೆಯಲ್ಲಾ! ಅದಕ್ಕನುಸರಿಸಿ
ಹೀಗೇ ಹೇಳಬೇಕಲ್ಲವೆ?

3) ಉಪಾಧ್ಯಾಯರನ್ನ ಕುರಿತು-
ವಿದ್ಯಾರ್ಥಿ: - ಸಾರ್ ತಾವು ನೋಟ್ಸು ಕೊಡಬೇಡಿ ಹಾಗೆ ಹೇಳಿಬಿಡಿ.
ಉಪಾಧ್ಯಾಯ - ಯಾಕಯ್ಯ?
ವಿಧ್ಯಾರ್ಥಿ - ತಾವು ಕೊಟ್ಟ ನೋಟ್ಸು ರಿಕಾರ್ಡ್ ಆಗುತ್ತದೆ. ಇನ್ಸ್‌ಪೆಕ್ಟರ್ ಯಾರಾದರೂ ನೋಡಿದರೆ ತಮ್ಮ
ಒಡತಿಗೆ ಏನಾದರೂ ತೊಂದರೆ ಆದೀತಲ್ಲ ಅಂತ!

4) ಕಳ್ಳನೊಬ್ಬನು ಒಂದು ಮನೆಯ ಬೀಗವನ್ನು ತೆಗೆಯಲು ಪ್ರಯತ್ನಿಸುತ್ತಿದ್ದಾಗ
ಪೋಲೀಸರು - ಏನಯ್ಯ ಬೀಗ ಮುರಿಯಲು ಪ್ರಯತ್ನಿಸುವೆಯಾ?
ಕಳ್ಳ - ಇಲ್ಲ ಸ್ವಾಮಿ ನಾನು ಅಂಥ ಕೆಲಸವನ್ನೇ ಕಲಿತಿಲ್ಲ ಬೀದಿಯಲ್ಲಿ ಈ ಬೀಗ ಸಿಕ್ಕಿತು. ಯಾರು ಕಳೆದುಕೊಂಡಿರು
ವರೋ ಪಾಪ! ಇದು ಯಾರ ಮನೆಯ ಬೀಗಕ್ಕೆ ಸರಿಹೋಗುವುದೋ ಪರೀಕ್ಷಿಸಿ ಅವರಿಗೆ ಕೊಡೋಣ ಅಂತ
ಈ ಪ್ರಯತ್ನ ಮಾಡ್ತಿದ್ದೇನೆ.

5) ಕಳ್ಳನೊಬ್ಬ ತೋಟವೊಂದರ ತೆಂಗಿನಮರವನ್ನು ಹತ್ತಿ ಕಾಯಿಕೆಡುವಲು ಪ್ರಯತ್ನಿಸುತ್ತಿದ್ದಾಗ ತೋಟಿಗನು ಬಂದು
ಬೈಯುತ್ತ " ಯಾರಯ್ಯ ಗಿಡಹತ್ತಿರುವವರು?"
ಕಳ್ಳ - ನಾನೇ ಸ್ವಾಮಿ, ನಿಮ್ಮ ಕಾಯಿ ಯಾರಿಗೆ ಬೇಕು. ನಮ್ಮ ಮನೆಯ ಹಸು ಇಂದೇ ಕರು ಹಾಕಿತ್ತು. ಎಲ್ಲೂ
ಹಸಿರು ಹುಲ್ಲು ಸಿಕ್ಕಲಿಲ್ಲ. ಇಲ್ಲಿ ಮೇಲೆ ಹಚ್ಚಗೆ ಕಾಣುತ್ತಿತ್ತು. ಇಲ್ಲಿಯಾದರೂ ಸಿಕ್ಕೀತೆಂದು ಹತ್ತಿದೆ. ಇಲ್ಲೂ
ಇಲ್ಲ. ಇಗೋ ಇಳಿಯುತ್ತಿದ್ದೇನೆ ನೋಡಿ.



# ಧರ್ಮ - ದರ್ಶನ

ಲೇ: —ಅಚಲ ಶರಣ್

ಭೂತ – ಭವಿಷ್ಯತ್ – ವರ್ತಮಾನಕಾಲದ ಕಕ್ಷೆಯಲ್ಲಿ ನಮ್ಮ ವೈಚಾರಿಕ ಒಲವಿನ ಮುಂದೆ, ಧರ್ಮದ ಬಗ್ಗೆ ಸಂಬಂಧಿಸಿದಂತೆ ಕಾಣುವ ಪ್ರಶ್ನೆಗಳು ಎಂದರೆ ಧರ್ಮದ ಅಂತರಂಗ ಯಾವುದು? ಅದರ ಬಾಹ್ಯ ಲಕ್ಷಣಗಳೇನು? ಅದು ವಿಕೃತಿಗೊಳ್ಳುವುದು, ಆಚರಣೆಯಲ್ಲಿ ಅಂಕುರಿಸಿದ ದೋಷದಿಂದಾಗಿಯೆ ಅಥವಾ ಅದರ ವಿವೇಚನೆಯಲ್ಲಿನ ದೋಷದಿಂದಾಗಿಯೆ? ಅದರ ಸಂದೇಶವೇನು? ಇತ್ಯಾದಿ.

ಧಾರಣ ಮಾಡಬಲ್ಲದ್ದು ಧರ್ಮ– 'ಧಾರಣಾತ್ ಧರ್ಮಃ.' ಎಂದಾಗ ಯಾವುದೇ ಮಾರ್ಗ, ನೀತಿ, ನಡತೆ, ಸಂಪ್ರದಾಯ, ಶ್ರದ್ಧೆ, ನಂಬಿಕೆ, ಇತ್ಯಾದಿ ಮಾನವ ಮೂಲ್ಯಗಳನ್ನು ನಿರ್ವಿಕಾರವಾಗಿ ಸಮೀಕ್ಷಿಸಿ ಸರ್ವಗುಣ ಗ್ರಾಹಿಯಾದ ಒಂದು ವಿಶಿಷ್ಟ ಆಚರಣೆಯೇ 'ಧರ್ಮ' ಎನ್ನುವ ಅರ್ಥಕ್ಕೆ ಸಮೀಪ ಸಾಮ್ಯ.

'ನಾ ಹೇಳಿದುದೇ ಧರ್ಮ; ಈ ಆಚರಣೆಯೇ ಸರ್ವಶ್ರೇಷ್ಠ. ಈ ರೀತಿಯ ಜೀವನ ಕ್ರಮವೇ ಮುಕ್ತಿಯ ಆಗರ.' – ಎಂದರೆ ಅದು 'ಮತ' ವಾದೀತು. 'ಏಕಂ ಸತ್, ವಿಪ್ರಾ ಬಹುಧಾ ವದಂತಿ; ಮಾರ್ಗ ವಿವಿಧವಾದರೂ ಸತ್ಯದರ್ಶನ ಅಂತಿಮವಾಗಿ ಒಂದೇ. ಇಷ್ಟಾದರೂ 'ಧರ್ಮ' ವನ್ನು ಪೂರ್ಣ ವಿವರಿಸಲು ಶಬ್ದಗಳಿಗೆ ದಾರಿದ್ರ್ಯ ತಪ್ಪಿದುಂಟೇ? ಇಲ್ಲ.

ಪರಂಪರೆಯಲ್ಲಿ ರೂಢಿಗೊಂಡ 'ಧರ್ಮ' ದ ಅರ್ಥ ವಿಶಾಲವಾದುದೆ. ಅರ್ವಾಚೀನ ದೃಷ್ಟಿಯಲ್ಲಿ ಅದಕ್ಕೆ ಸಂಕುಚಿತತೆಯ ಚೌಕಟ್ಟನ್ನು ಹಾಕಿ ಪ್ರದರ್ಶಿಸಲಾಗಿದೆ. 'ಧರ್ಮ' ಅಂದು ವಿಶಾಲ ಹೃದಯದ ಸುಸಂಸ್ಕೃತಿಯ ಆಗರವಾಗಿ, ಸುಭದ್ರ ನೆಲೆಗಟ್ಟಿನ ಮೇಲೆ ನಿಂತಿತ್ತು.

ಹಾಗಾದರೆ ಅದರ ಇಂದಿನ ಅವಸ್ಥೆಗೆ ಕಾರಣವೇನು, ಎಂದರೆ, ಅದನ್ನು 'ಮತ' ದ ವ್ಯಾಪ್ತಿಗೆ ಒಳಪಡಿಸಿ ಮೂಲದ ವ್ಯಾಪಕ ಅರ್ಥ ಕಲ್ಪನೆಗಳನ್ನು ಮೊಟಕು ಗೊಳಿಸಿದ ಸ್ವಾರ್ಥ ಸಂಜಯತೆಯ ದೋಷವೆನ್ನ ಬೇಕು. ಅಂದರೆ ಐಹಿಕ ಭೋಗ ಭಾಗ್ಯದ ಅಮಲಿನಲ್ಲಿ ಒಂದು ಕಟ್ಟು, ಒಂದು ನಿಯಮ ಒಂದು ಸೂತ್ರಕ್ಕೆ ಬದ್ಧ ವಾಗುವ ಪ್ರವೃತ್ತಿ, ರಾಷ್ಟ್ರ ಹಾಗೂ ಸಮಾಜದ ಹಿತದ ದೃಷ್ಟಿಯಿಂದಲೂ, ಇಲ್ಲವಾದ ಕಾರಣ, ಧಾರಣ ಶಕ್ತಿಯ ಹ್ರಾಸವಾಗಿ, ಧರ್ಮದ ಅರ್ಥ–ಅಂತರಂಗವು ಸಂಕುಚಿತಗೊಳಿಸಲ್ಪಟ್ಟದೆ.

ಈ ಮೇಲಿನ ಮಾತು, ಮಾನವ ಸಹಜ ಪ್ರವೃತ್ತಿಯಾದ ಲೈಂಗಿಕಾನುಷ್ಠಾನಕ್ಕೆ ಎರವಾಗಿ, ಸಾಮಾಜಿಕ ಶ್ರೇಯೋಸಂತಾನಕ್ಕೆ ಮಿತಿ ಹಾಕುವುದಿಲ್ಲವೇ ಎನ್ನಬಹುದು. ಹಾಗೆಂದರೆ ವಿಕೃತಾರ್ಥವಾಗುತ್ತದೆ. ಧರ್ಮದ ಆಚರಣೆಯಲ್ಲಿ ಮಾನವ ಸಹಜ ಪ್ರವೃತ್ತಿಗಳ ಸಂಯಮಿತ ಚಾಲನೆಗೆ ಅವಕಾಶವಿರಲು, ಅಂತಹ ಸಂದೇಹವೇಕೆ ಸುಳಿಯಬೇಕು? "ಸತಿ ಪತಿ, ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು" ಎಂದು ಭಕ್ತಿ ಬಂಡಾರಿ ಬಸವಣ್ಣನವರ ನುಡಿ ಇದೆ. ಅಲ್ಲದೆ ಯೋಗ–ಭೋಗ ಸಮನ್ವಯ ಮೂರ್ತಿ ಭರತೇಶನ ಜೀವನ ಈ ದಿಶೆಯಲ್ಲಿ ಸಂರಕ್ಷಣ ಯೋಗ್ಯವಾಗಿದೆ.

ಹರಿದು ಬರುವ ಗಂಗಾನದಿ ಕೊಳೆ ಕಶ್ಮಲಗಳನ್ನು ತರುವಂತೆ, ಪರಂಪರೆಯಿಂದ ಹರಿದುಬಂದ 'ಧರ್ಮ ಗಂಗಾ' ಪ್ರವಾಹವೂ ಕಶ್ಮಲಗಳನ್ನು ಅಂಟಿಸಿಕೊಂಡು ಬರುವುದೂ ಸಹಜ. ಅಂತಹ ಪಾಪ ಲೇಪನ ಹೆಚ್ಚು ಎನಿಸಿದಾಗ ಗಂಗಾದೇವಿಯನ್ನು ಸತಿ ಅನುಸೂಯಾ

ಪಾರು ಮಾಡಿದಂತೆ, ಧರ್ಮ ಗ್ಲಾನಿಯನ್ನು ಮಹಾ ಮಹಾ ಪುರುಷರು ಹುಟ್ಟಿ ಪರಿಹರಿಸಿದ್ದಾರೆ. ಶ್ರೀಕೃಷ್ಣನ ಗೀತಾವಾಕ್ಯದಂತೆ, ಬುದ್ಧ, ಬಸವ, ಇತ್ಯಾದಿ ಅವತಾರ ಪುರುಷರ ನೆಲೆವೀಡಲ್ಲವೆ? ಭಾರತ ಜಗದ ಸದ್ದೆಲ್ಲ ಅಡಗಿ ನಿದ್ದೆಯಲ್ಲಿರಲು, ಬುದ್ಧನೊಬ್ಬ ಎದ್ದು ಬೆಳಕು ನೀಡಲಿಲ್ಲವೆ? ಕರ್ಮ ಜಡವಾಗಿ, ಜಾತೀಯತೆಯ ಆ ವಿಷಯುದಲ್ಲಿ ಮುಳುಗಿದ್ದ ಸಮಾಜಕ್ಕೆ, ಸಮಾಜದ ಜನಕ್ಕೆ 'ಧರ್ಮ'ದ ಬಾಗಿಲನ್ನು ತೆರೆದು ಅದರ ಅಂತರಂಗದ ದರ್ಶನ ಮಾಡಿದವರು ಬಸವಣ್ಣನವರಲ್ಲವೆ?

ನಾಗರೀಕತೆಯ ಮುಸುಕಿನಲ್ಲಿ, ವಿಜ್ಞಾನದ ಹೆಸರಿನಲ್ಲಿ ಧರ್ಮದ ಅರ್ಥವನ್ನು ಮತ ಪುನರ್ಜನ್ಮ, ಪವಾಡ, ಸಂಪ್ರದಾಯ ಜಡತೆ, ಅಂಧ ಶ್ರದ್ಧೆಗಳಲ್ಲೇ ಮುಳುಗಿಸಿ ಅದನ್ನು ಪ್ರಶ್ನಿಸುವಂತೆಯೇ ಧರ್ಮದ ಸೋಗು ಪ್ರಶ್ನಿಸದು; ಬದಲು ಧರ್ಮದ ಅಂತರಾತ್ಮ-ಸತ್ವ ಪ್ರಶ್ನಿಸುತ್ತದೆ, ನಾಗರೀಕತೆ ಎಂದರೆ ಬರೀ ಐಹಿಕ ಭೋಗ ಭಾಗ್ಯದ ಕೊನೆಯೇ? ಮನುಜನ ಬದುಕಿನ ಅಂತರಂಗ ಯಾವುದು? ಭೋಗ ಭಾಗ್ಯಗಳನ್ನು ಪಡೆದ ವ್ಯಕ್ತಿಯೂ ಮನಶ್ಯಾಂತಿ ಇಲ್ಲದೆ ತೊಳಲುವುದೇಕೆ? ನಾಗರೀಕತೆ-ವಿಜ್ಞಾನಗಳ ಹಾದಿ ಸತ್ಯದ ಪಥವೆಂದರೆ, ಇವುಗಳಿಗೆ ಪೂರ್ಣಉತ್ತರ ನೀಡ ಬಲ್ಲುದೆ?

ವರ್ತಮಾನ ವ್ಯಕ್ತಿಯಲ್ಲಿ, ಈ ಧರ್ಮ, ಸಂಪ್ರದಾಯಗಳು ಮೂಢ ನಂಬಿಕೆಗಳೆಂದೂ, ನಿಷ್ಕ್ರಿಯ ಜೀವನದ ಕುರುಹುಗಳೆಂದೂ, ಪ್ರಗತಿ ವಿಮುಖ ಪಥವೆಂದೂ ಜರಿಯುವ ಪ್ರವೃತ್ತಿ ಕಾಣುತ್ತದೆ. ಆದರೆ ಅತಂಹ ವ್ಯಕ್ತಿ ಪ್ರವೃತ್ತಿ ಆರಿಸಿಕೊಂಡ ಜೀವನದಲ್ಲಿ ಬದುಕಿನಲ್ಲಿ ಯಾವ ರೀತಿಯ ಶಾಂತಿ ಇದೆ? ವ್ಯವಸ್ಥೆ ಇದೆ! ಮಾನವ ಮೂಲ್ಯಗಳಲ್ಲಿ, ಪ್ರಗತಿ ಇದೆ! ಅಲ್ಲದೆ ಮುಷ್ಕರ ಪೀಡಿತ ಮನೋಭಾವದಿಂದ ಸದ್ಯದ ತರುಣ ಪೀಳಿಗೆಯು ಅಶಾಂತಿಯಲ್ಲಿ ತುಮುಲಿಸುತ್ತಿರುವುದೇಕೆ? ಮತ್ತು ಹಿಂದಿನವರ ಸಹನೆ ಶಾಂತಿ ಅಂತರಿಕ ಸುಖ ಬುದ್ಧಿ ಭಾವ ಪ್ರಗತಿ ಇತ್ಯಾದಿಗಳನ್ನು ಅವರಿಗಿಂತಲೂ ಹೆಚ್ಚು ಪಡೆದುಕೊಂಡಿದ್ದೇ ಆದರೆ 'End justiries the means' ಎನ್ನುವಂತೆ ನಮ್ಮ ತರುಣರ ಮಾರ್ಗ ಯಾವುದಿದ್ದರೂ ಮೆಚ್ಚುಗೆಯಾಗುತ್ತಿತ್ತು.

ನಮ್ಮ ತರುಣ ಪೀಳಿಗೆಯು ತನ್ನ ಶಕ್ತಿಯನ್ನು ಮನೋವಿಪ್ಲವವನ್ನು ಹೀಗೆಲ್ಲ ವ್ಯೈಥುನಗೊಳಿಸಿದರೆ ಅದು ಶ್ರೇಯೋ ಮಾರ್ಗವೆನಿಸದು. ಅಪಕ್ವತೆ, ಮನಸ್ವೀವರ್ತನೆ, ಅನಿರ್ದಿಷ್ಟ ಗುರಿ ಇತ್ಯಾದಿಗಳು ವಯೋಗುಣವೆನ್ನುವುದಿದ್ದರೂ ಅದರ ಮಿತಿ ಮೀರುವುದು ಔಚಿತ್ಯರಾಹಿತ್ಯವೆನಿಸುವುದು. ನಾವು ನಮ್ಮ ಹಿರಿಯರೆಸಗಿದುದರಲ್ಲಿ ದೋಷವನ್ನೇ ಹುಡುಕಿ ಎತ್ತಿ ಒಳ್ಳೆಯದರ ಬಗ್ಗೆ ಮೌನತಾಳಿ, ಅದು ಗಣನೀಯವಲ್ಲದ್ದು ಎನ್ನಬಹುದು. ಅವರುಗಳು ಮಾಡಿದ ಕಾರ್ಯ ನಡೆದ ರೀತಿ ಅವರ ಕಾಲಕ್ಕೆ ರೂಢಿ ಬದ್ಧವಾಗಿಯೋ ಅಥವಾ ಕಾಲದೇಶ/ಳ ಪರಿಸ್ಥಿತಿಗನುಗುಣವಾಗಿಯೋ, ಸಂದರ್ಭದ ಸನ್ನಿವೇಷದ ಮಿತಿಯಿಂದಾಗಿಯೋ ಇದ್ದು, ಸಾದ್ಯವಾದುದನ್ನು, ಸಂದುದನ್ನು ತಮ್ಮ ಮುಂದಿನ ತಲೆಮಾರಿಗೆ ಬಿಟ್ಟು ಹೋದರು. ಸದ್ಯದ ಮಾನದಂಡದಿಂದ ಅಳೆದು ನೋಡಿ ಅದನ್ನು ಹೀಗಳೆವುದು ಹೀನಬುದ್ಧಿಯ ದ್ಯೋತಕವಾಗದೆ? ಮಹಾ ವಿಜ್ಞಾನಿ ನ್ಯೂಟನ್ ಕೂಡ, ವಿನಮ್ರನಾಗಿ ತನ್ನ ಹಿರಿಯ ವಿಜ್ಞಾನಿಗಳ ಬಗ್ಗೆ ತೋರಿಸುವ ಕೃತಜ್ಞತೆಯ ನುಡಿಗಳು:—

'If I have seen a little further than others it is because I have stood on the shoulders of giants'. ತನ್ನ ಹಿರಿಯರು ಮಾಡಿದ್ದ ಕೃತಿಯ ಸ್ಫೂರ್ತಿಯ ಪ್ರೇರಣೆಯಿಂದಾಗಿ ತನ್ನ ಜ್ಞಾನ ಮುಂಚೂಣಿಯ ವಿಕಾಸಕ್ಕೆ ಮಾರ್ಗವೆನ್ನುವ ಈ ಭಾವ ಎಂತಹ ವಿನಯಶ್ರೀ!

ಇನ್ನು 'ಮರಹಿಂಗೆ ಹಿರಿದು ಕಿರಿದು ಉಂಟಲ್ಲದೆ, ಅರಿವಿಂಗೆ ಹಿರಿದು ಕಿರಿದು ಉಂಟೇ' – ಎಂಬ ಕರ್ಮಯೋಗಿ ಸಿದ್ಧರಾಮನ ಮಾತು 'ಮನುಜ' ತನದ ಮೂರ್ಖ ಭಾವನೆಗೆ ಕೊಟ್ಟ ಶರಣತ್ವದ ಉಳಿಪೆಟ್ಟು. ಅದು ಜ್ಞಾನ ದಾಸೋಹದ ಹಿರಿಮೆ.



ಪ್ರತಿ ತಲೆಮಾರಿನ ತರುಣ ಜನಾಂಗ, ತನ್ನ ಹಿರಿಯರ ಮಹಾಕೀರ್ತಿಯಲ್ಲಿ, ವ್ಯಕ್ತಿತ್ವದ ಔನ್ನತ್ಯದಲ್ಲಿ ತನ್ನ ಅಸ್ತಿತ್ವ ಮರೆಯಾಗಕೂಡದೆಂದು ಬಯಸುವುದು ಸ್ವಾಭಾವಿಕ. ಆದರೆ ಅದಕ್ಕಾಗಿ ಅನುಸರಿಸುವ ಮಾರ್ಗ! ಈ ಸಂದರ್ಭದಲ್ಲಿ ರಾಷ್ಟ್ರಪತಿ ರಾಧಾಕೃಷ್ಣನ್ ಅವರು ಹೇಳಿದ ಮಾತು ಸ್ಮರಣ ಸೂಕ್ತವಾಗಿದೆ.— "If we cannot convince others it does not mean we should take law in to our own hands", ಮತ್ತೊಬ್ಬರಿಗೆ ನಮ್ಮ ಭಾವನೆ, ದೃಷ್ಟಿ, ಧ್ಯೇಯಗಳನ್ನು ನಂಬುವಂತೆ ಮೆಚ್ಚುವಂತೆ ಮಾಡಲು ಶಕ್ತಿ ಇಲ್ಲದಾಗ, ಅವರ ಮೇಲೆ ದುಂಡಾವೃತ್ತಿಗೆಳೆಸುವುದು ಸಲ್ಲುವ ಕೃತಿಯಿಲ್ಲ.

ಯಾವುದೇ ವಿಷಯಕ್ಕಾದರೂ, ಜನತೆ ಹಾಗೂ ಸರ್ಕಾರದ ಗಮನ ಸೆಳೆಯಲು ಚಳುವಳಿ, ಮುಷ್ಕರಗಳೇ ನಮ್ಮ ಧರ್ಮ ಎನ್ನುವಷ್ಟು ಮಟ್ಟಿಗೆ ದಸ್ಯ ಜನಮನ ಪ್ರವೃತ್ತಿ ಕಂಡುಬರುತ್ತಿದೆ. ಇದು ಏಕಪಕ್ಷೀಯ ದೋಷವಲ್ಲ. ಯಾರು ಸಮಸ್ಯೆಗಳನ್ನು ಪರಿಹರಿಸಬೇಕೋ ಸಮಾಧಾನಕರ ತೀರ್ಪು ನೀಡಬೇಕೋ ಅವರಿಂದಲೇ ಮರುಸಮಸ್ಯೆಗಳು ಹುಟ್ಟಿದರೆ, ಬೇಲಿಯೇ ಹೊಲ ಮೇಯುಂತೆ, ಪರಿಸ್ಥಿತಿ, ಅಂತೇ ಎಷ್ಟೇ ವಿಶಾಲವಾಗಿ 'ಧರ್ಮ'ದ ಬಗ್ಗೆ ಮಾತನಾಡಿದರೂ ನೈಸರ್ಗಿಕ ಗುಣಗಳನ್ನು ದಮನಮಾಡಿ, ಸ್ವತಃ ಆಚರಣೆಯಲ್ಲಿ ಅಧರ್ಮದ ಅನುಸರಣೆಯಿರುವಾಗ ಮತ್ತೊಬ್ಬರಿಗೆ ಉಪದೇಶಿಸುವ ನೈತಿಕ ಅಧಿಕಾರವಾದರೂ ಎಲ್ಲಿದೆ. ಇದು ಎರಡೂ ಕಡೆಗೂ ರಾಷ್ಟ್ರೀಯ ಸತ್ಯವೆ.

ಈ ಕಾರಣ, ನಾವು ನಡೆದು ಕೊಳ್ಳುವ ಜೀವನಕ್ರಮ ಇಟ್ಟುಕೊಂಡ ಧ್ಯೇಯ ಇತ್ಯಾದಿಗಳನ್ನು ನಮ್ಮ ಮುಂದಿನ ಪೀಳಿಗೆಯೂ ಪ್ರಶ್ನಿಸಿ, ಆಪಾದಿಸಿ, ತಾನು ಹೊಸತೊಂದನ್ನು ಕಂಡುಕೊಳ್ಳುವ ಅಥವಾ ವರ್ತಮಾನರಾದ ನಮಗೆ ಸರಿಯಲ್ಲದಿರಬಹುದಾದ ರೀತಿಯಲ್ಲಿ ನಡೆದು ತನ್ನ ನಡೆನುಡಿಗಳ ಸಮರ್ಥನೆಗೆ ಹಾದಿ ಮಾಡಿಕೊಳ್ಳುವುದನ್ನು ಬಿಡದು. ಇದು ಯುಗದ ಚೇತನದ ಲಕ್ಷಣ. ಆದರೆ ಇದು ಸಲ್ಲಕ್ಷಣವಾಗಿರಬೇಕಾದುದು ಸಾಪೇಕ್ಷಣೀಯ. ಮತ್ತು "ಅಜಕೋಟಿ ವರುಷದವರೆಲ್ಲರೂ ಹಿರಿಯರೆ? ಒಂದನಾಡ ಹೋಗಿ ಮತ್ತೊಂದ ನಾಡುವರೆಲ್ಲರೂ ಹಿರಿಯರೆ?"—ಎಂದು ನುಡಿದು ಅರಿವಿನ ಸೆಲೆಯಾಗಿ ಬಂದ ಶ್ರೀ ವನಿತೆ ಅಕ್ಕಮಹಾದೇವಿಯ ನಿಲವಿಂಗೆ ಮೆಚ್ಚಿಕೊಳ್ಳುವ ಜ್ಞಾನಿ ಚನ್ನಬಸವಣ್ಣನ ನುಡಿಯಂತೆ ಯುವಜನಾಂಗದ ಮನೀಷೆ ಮೂಡಿದರೆ, ಉದ್ಧಾರದ, ಧರ್ಮ ಸೌಷ್ಠವತೆಯಾದೀತು.

ನಮ್ಮ ಮೇಲಾಗಿರುವ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಆ ದೃಷ್ಟಿಕೋನಕ್ಕೇ ಅನುರಕ್ತಿಗೊಳ್ಳುವುದು ಸಹಜವೆನಿಸದು. ಬದುಕಿನಲ್ಲಿ ಐಹಿಕವಾಗಿ ಸುಖದ ತುಟ್ಟತುದಿಯಲ್ಲಿರುವ ಪಾಶ್ಚಾಮಾತ್ಯರೂ ಮನಶ್ಯಾಂತಿ ಆತ್ಮ ಶಾಂತಿಗಳಿಲ್ಲದೆ ಭಾರತೀಯ ತತ್ವಮೌಲ್ಯಗಳತ್ತ ದೃಷ್ಟಿಯಿಡುತ್ತಿರುವಾಗ ನಮಗೆ ಆ ಬಗ್ಗೆ ಹೆಮ್ಮೆ ಇರಲಿ ಕುತೂಹಲವೂ ಇಲ್ಲ. ಬದಲು ಅವರು ಬಿಸುಡಬೇಕೆಂದಿರುವ, ಬಿಟ್ಟಿರುವ ರೀತಿ, ನೀತಿಗಳ ಅಂಧಾನುಸರಣೆಯಲ್ಲಿ ನಮ್ಮ ಅಭಿಮಾನ ಆಸಕ್ತವಾಗಿದೆ. ಹೀಗೆ ಯಾವುದರಲ್ಲೂ ಅಂಧಾನುಸರಣೆಯೇ ಆಚರಣೆಯಾದರೆ ಅದು ಅನುರಕ್ತಿ; ಅನುಸರಣೆ ಗುಣಗ್ರಾಹಿಯಾದಾಗ ಅದು ಸದ್ವಿವೇಕದ ಸಗುಣಶಕ್ತಿ.

ಆದ್ದರಿಂದ ಪರಂಪರೆಯಲ್ಲಿ ಮೂಡಿಬಂದ ಓರೆಕೋರೆಗಳನ್ನು ತಿದ್ದಿ ನಮ್ಮ ಬದುಕಿನ ಶಾಶ್ವತಮೌಲ್ಯಗಳ ಬಗ್ಗೆ ದೃಷ್ಟಿ ಶ್ರೇಯೋನಾವೀನ್ಯತೆಯ ಒಲವನ್ನೂ ಬೆಳಸಿಕೊಂಡರೆ ಧರ್ಮದ ವಿಕಾಸಕ್ಕೆ ಹಾದಿಯಾದೀತು. ಬಹಿರಂಗ ಶುದ್ಧಿ, ಅಂತರಂಗ ಶುದ್ಧಿಗಳ ಪಾಲನೆಗೆ, ಈರ್ಷ್ಯಾ ಜಗತ್ತಿನ, ಸಂಘರ್ಷಗಳ ಮಾನವ ವೈಫಲ್ಯಗಳ ನಡುವೆ ಎಷ್ಟು ಮಟ್ಟಿಗೆ ಅವಕಾಶವಾಗುವುದು? ಎಂಬ ಪ್ರಶ್ನೆಯೂ ಮುಂದೆ ನಿಲ್ಲುತ್ತದೆ. ಆದರೆ ಮಾನವ ಬದುಕು ಕೇವಲ ವಿಫಲತೆಯ ಆಗರವಲ್ಲ; ಸಫಲತೆಯ ಸುಸಿಲೂ ಅಲ್ಲ. ಆ ಎರಡರ ಸಮನ್ವಯವಷ್ಟೆ.

ಈ ನಿಷ್ಕಾಮಪ್ರವೃತ್ತಿ ವರ್ತಮಾನ "ಧರ್ಮ

ದೀಕ್ಷೆ"ಗೆ ಎಂದಿನವರೆವಿಗೂ ಮಾಡುವುದಿಲ್ಲವೋ ಅಂದಿನ ವರೆವಿಗೂ ಅಶಾಂತಿಯ ಅಗ್ನಿತಾಂಡವ ಆರದು. ಅಂತೇ 'ಧರ್ಮದ' ಅಂತರಾತ್ಮದ ಆಸೆ "ಅನ್ಯತತ್ವ ಸ್ಯತುನ ಆಶಾ ಆಸ್ತಿ ವಿತ್ತೇತಿ, ಆಗಲೆಂದೇ. ಅದೇ ಸಮ ನ್ವಯ ಶೀಲತೆಯ ಧರ್ಮದ ವೈಶಿಷ್ಯ.



## ಕಾದಾಡಬೇಡಿ

ಜಗದಾಚಾರ್ಯರ ತತ್ವವನುಳಿದು
ಗುಂಪುಗುಳಿತನವ ಮಾಡದಿರಿ ।
ಹಗರಣವೆನಿಸಿದ ಜಾತಿಯ ಪದ್ಧತಿ
ತೊರೆಯಿರಿ; ಅನ್ಯತವ ನಾಡದಿರಿ ॥

* * * *

"ಆಸೆಯೆ ದುಃಖಕೆ ಮೂಲವು ಬಿಡಿರದ
ಎಂದನು ಮಹಾನುಭಾವನಲಾ ।
"ಕ್ಲೇಶವ ಕಳೆಯುವ ಅಹಿಂಸೆ ಬಿಡದಿರಿ"–
ಎಂದು ವಿಧಿಸಿದವ ಜಾಣನಲಾ ॥
"ಪ್ರೇಮವೆ ಲೋಕದ ಜೀವವದೆಂ"ದನು
ಕೆಲ್ಲು ಮನದ ಜನರೆದುರಿನಲಿ ।
"ಸ್ವಾಮಿಯು ಮೆಚ್ಚಲು ಸತ್ಯವ ನುಡಿಯಿರಿ"–
ಯೆಂದು ನುಡಿದನವ ಘಾಸಿಯಲಿ ॥
"ನಾನಾರೆಂಬುದ ನಿಜದಿಂದರಿಯಿರಿ"
ಎಂದವನುಸುರಿದ ಒಳಿತಕ್ಕೆ ।
"ನಾನಾದೇವನ ಸೇವಕನೆ"ನ್ನುತೆ
ಬಗೆದು ತೋರಿದನು ವೃಂದಕ್ಕೆ

"ದೇವನನೆಲ್ಲರು ನಂಬಿ ಭಜಿಸುತ್ತಿರಿ"
ಎಂದು ಸಾರಿದನು ಕೂಗಿಟ್ಟು ।
"ಪಾವನರಾಗಲು ದಯೆಯೇ ಮೂಲವು"
ಎಂದನು ಒಳದನಿಗೋಗೊಟ್ಟು"

ವಿರೋಧವೇನಿದೆ ಯಿಾಬೋಧೆಗಳಲಿ?
ತಿಳಿಯಿರಿಯೆಲ್ಲವು ಒಂದೆಂದು ।
ಅರಾಜಕತೆಯದು ತಪ್ಪಿಸಲೋಸುಗ
ಬಾಳಿರಿ ಐಕ್ಯದೊಳೆಂದೆಂದು ॥

ದೊಡ್ಡವರ ಹೆಸರಿನಲಿ ಭಿನ್ನದಳಗಳ ರಚಿಸಿ
ಜಾತಿಯೆಂದವಕೆ ನೀವ್ ಹೆಸರಿಡಲೇ ಬೇಡಿ ।
ದಡ್ಡರದನನುಸರಿಸಿ ಹೋರುವರು ತಮ್ಮಲ್ಲೆ
ರಾಷ್ಟ್ರಪ್ರಜ್ಞೆಯುನುರೆತು ಗುಂಪಾಗಿ ಕೂಡಿ ॥

ದುರ್ಲಾಭ ದೌರ್ಜನ್ಯ ನಿರ್ಮೂಲ ಮಾಡಿ ।
ಕೈಮುಗಿದು ಬೇಡುವೆನು ಕಾದಾಡಬೇಡಿ ॥

(ದಿನಾಂಕ 19-10-1969 ರಂದು ಮೈಸೂರಿನ ಕ್ರಾಫರ್ಡ್ ಹಾಲ್‌ನಲ್ಲಿನಡೆದ ದಸರಾ ಕವಿ-ಸಮ್ಮೇಳನದಲ್ಲಿ ಹಾಡಿದ ಕವನ)

— ಕೆ. ಪಿ. ಶಿವಲಿಂಗಯ್ಯ.



# "ಗಾಂಧೀ ಅರ್ಥ ವಿಚಾರ"

ಅನುವಾದ: **ಜಿ. ವಿ. ನಾರಾಯಣಮೂರ್ತಿ**

(1968ರ ಡಿಸೆಂಬರ್ 16 ರಿಂದ 18ರ ವರೆಗೆ, ಸುಪ್ರಸಿದ್ಧ ಅರ್ಥ ಶಾಸ್ತ್ರಜ್ಞರೂ, ಗಾಂಧೀ ವಿಚಾರವೇತ್ತರೂ, ಗುಜರಾತ್ ರಾಜ್ಯದ ಗವರ್ನರೂ ಆಗಿರುವ ಶ್ರೀ ಶ್ರೀಮನ್ನಾರಾಯಣ ಅವರು ಪಟೇಲ್ ಸ್ಮಾರಕ ಉಪನ್ಯಾಸಗ ಳನ್ನು ಮಾಡಿದರು. ಡಿಸೆಂಬರ್ 18 ರಂದು ಮಾಡಿದ ಕಡೆಯ ಉಪನ್ಯಾಸ "ಗಾಂಧೀ ಅರ್ಥ ವಿಚಾರ"ಕ್ಕೆ ಸಂಬಂಧ ಪಟ್ಟದೆ. ಅದರ ಪೂರ್ಣ ಪಾಠವನ್ನು ಇಲ್ಲಿ ಅನುವಾದ ಮಾಡಿಕೊಡಲಾಗಿದೆ.)

ಶಾಸ್ತ್ರೀಯ ಪರಿಭಾಷಾ ದೃಷ್ಟಿಯಿಂದ ಮಹಾತ್ಮಾ ಗಾಂಧೀ ಅರ್ಥ ಶಾಸ್ತ್ರಜ್ಞರಾಗಿರಲಿಲ್ಲ ವೆಂಬುದು ಬಹಳ ಸ್ಪಷ್ಟ. ಅವರು ಅರ್ಥ ಶಾಸ್ತ್ರ ವನ್ನು ಶಿಕ್ಷಣದ ಪಾಠಕ್ರಮವಾಗಿ ವ್ಯಾಸಂಗ ಮಾಡಿರ ಲಿಲ್ಲ. ಅವರು ಆಧುನಿಕ ಅರ್ಥಶಾಸ್ತ್ರವನ್ನು ತಿಳಿಸುವ ಪ್ರಮಾಣ ಗ್ರಂಥಗಳನ್ನು ಓದುವ ಅವಕಾಶವನ್ನೂ ಹೊಂದಿರಲಿಲ್ಲ. ಸರ್ವ ವಿದಿತವಾಗಿರುವಂತೆ, ಗಾಂಧೀಜಿ ದಕ್ಷಿಣ ಆಫ್ರಿಕೆಯಲ್ಲಿದ್ದಾಗ ರಸ್ಕಿನ್ ಬರೆದ 'ಅನ್‌ಟು ದಿಸ್ ಲಾಸ್ಟ್' ಹೊತ್ತಗೆಯನ್ನು ಓದಿದರು. ಆ ಹೊತ್ತಗೆ ಅವರ ಜೀವನ ಮತ್ತು ವಿಚಾರಗಳ ಮೇಲೆ ಪ್ರಚಂಡ ಪ್ರಭಾವ ಬೀರಿತು. ಬೈಬಲಿನ ವ್ಯಾಸಂಗವೂ ಅವರ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳನ್ನು ರೂಪಿಸಿತು. "ಕ್ವಿಟ್ ಇಂಡಿಯಾ' ಆಂದೋಳನದ ಕಾಲದಲ್ಲಿ ಸೆರೆ ಮನೆಯಲ್ಲಿದ್ದಾಗ ಬಾಪೂ ಕಾರ್ಲ್ ಮಾರ್ಕ್ಸನ 'ದಾಸ್ ಕ್ಯಾಪಿಟಲ್' ಗ್ರಂಥವನ್ನು ಅವಲೋಕಿಸಲು ಕಾಲಾವಕಾಶ ಸಿಕ್ಕಿತ್ತು. ಇವೆಲ್ಲ ಹೇಗಿದ್ದರೂ, ಅವರು ಭಾರದಲ್ಲಿ ಎದ್ದು ಕಾಣುವ ಭಿನ್ನ ಭಿನ್ನ ಆರ್ಥಿಕ ಸಮಸ್ಯೆಗಳನ್ನು ಕುರಿತು, ಅದರಲ್ಲಿಯೂ ವಿಶೇಷವಾಗಿ ನಿರುದ್ಯೋಗ ಮತ್ತು 'ಉದ್ಯೋಗ ಕೊರತೆ' (Under-employment) ಇವುಗ ಳನ್ನು ಕುರಿತು, ಹೇರಳವಾಗಿ ಬರೆದರು. ಖಾದೀ ಮತ್ತು ಗ್ರಾಮೋದ್ಯೋಗಗಳನ್ನು ತೀವ್ರವಾಗಿ ವ್ಯವಸ್ಥೆ ಗೊಳಿಸಿ, ಉದ್ಯೋಗರಹಿತರಿಗೆ ಆದಾಯ ತಂದು ಕೊಡುವ ಕೆಲಸ ಒದಗಿಸಬೇಕೆಂದು ಪ್ರತಿಪಾದಿಸಿದರು.

ಗಾಂಧೀಜಿಗೆ ಆಧುನಿಕ ಅರ್ಥ ಶಾಸ್ತ್ರದ ಪರಿಭಾಷೆ ಅಷ್ಟಾಗಿ ಪರಿಚಯವಿಲ್ಲದಿದ್ದರೂ ಅವರ ಅಭಿಪ್ರಾಯ ಗಳು, ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಪ್ರಧಾ ನವಾಗಿರುವ ಆರ್ಥಿಕ ಸಮಸ್ಯೆಗಳ ಬಗೆಗೆ ವ್ಯವಹಾರ ಯುಕ್ತವೂ ವಿಚಾರ ಬದ್ಧವೂ ಆದ ಪರಿಹಾರ ಮಾರ್ಗ ವನ್ನು ತೋರಿಸಿದವು. ನಮ್ಮ ದೇಶದಲ್ಲಿ, ಅದರ ಲ್ಲಿಯೂ ವಿಶೇಷತಃ ವಿದ್ಯಾವಂತ ವರ್ಗದವರಲ್ಲಿ, ಗಾಂಧೀ ಅರ್ಥ ವಿಚಾರದ ಬಗೆಗೆ ಇನ್ನು ಅನೇಕ ತಪ್ಪು ಭಾವನೆಗಳು ಇರುವುದು ದುರದೃಷ್ಟಕರ. ಈ ಉಪ ನ್ಯಾಸಪಲ್ಲಿ ಅವುಗಳನ್ನು ಕುರಿತು ವಿವೇಚಿಸಿ, ಗಾಂಧೀ ಅರ್ಥ ವಿಚಾರವನ್ನು ತಾತ್ವಿಕ ಹಾಗೂ ವೈಜ್ಞಾನಿಕ ವಿಧಾನದಿಂದ ಮಂಡಿಸುವ ಪ್ರಾಮಾಣಿಕ ಪ್ರಯತ್ನ ನಡೆದಿದೆ.

### ಸರಳ ಜೀವನ ಮತ್ತು ಉದಾತ್ತ ಚಿಂತನ

ಗಾಧೀಜಿಯ ಅರ್ಥ ವಿಚಾರದ ಪ್ರಥಮ ಮೂಲ ತತ್ವವಾದ 'ಸರಳ ಜೀವನ ಮತ್ತು ಉದಾತ್ತ ಚಿಂತನ' ಕ್ಕೆ ವಿಶೇಷ ಪ್ರಾಶಸ್ತ್ಯವಿದೆ. ಭಾರತದಂಥ ಅಭಿವೃದ್ಧಿ ಕೊರತೆ ಇರುವ ದೇಶಗಳಲ್ಲಿರುವ ಜನಕೋಟಿಯ ಹೀನ ಸ್ಥಿತಿಯ ಜೀವನ ಮಟ್ಟಗಳನ್ನು ಮೇಲಕ್ಕೆ ಏರಿಸ ಬೇಕೆಂಬ ವಿಷಯದಲ್ಲಿ, ಗಾಂಧೀಜಿ ವಿರುದ್ಧ ಅಭಿ ಪ್ರಾಯ ತಳೆದಿರಲಿಲ್ಲ. 1944ರಲ್ಲಿ ಅವರು ಸೇವಾ ಗ್ರಾಮದಲ್ಲಿದ್ದಾಗ ಅವರಿಗೆ ನನ್ನ 'ಗಾಂಧೀ ಯೋಜ ನೆಯ ಕರಡನ್ನು ತೋರಿಸಿ, ಅವರ ಕಲ್ಪನೆಯ

ಆರ್ಥಿಕ ಯೋಜನೆಯಲ್ಲಿ ಭಾರತದ ಕೆಲವರು ಉದ್ದಿಮೆಗಾರರು ತಯಾರಿಸಿದ್ದ 'ಮುಂಬೈಯೋಜನೆ'ಯ ಗುರಿಗಳೊಡನೆ ಹೋಲಿಸಿ ಅನ್ನ, ಬಟ್ಟೆ ಮತ್ತು ವಸತಿಗಳ ಬಗೆಗೆ ಯಾವ ಕನಿಷ್ಠ ಮಟ್ಟ ವಿರಬೇಕೆಂದು ಪ್ರಶ್ನಿಸಿದಾಗ, ಅವರು ಕೊಟ್ಟ ಉತ್ತರವಿರುದು. "ಮುಂಬೈ ಯೋಜಕರು ಇಟ್ಟು ಕೊಂಡಿರುವ ಕನಿಷ್ಟ ಮಟ್ಟದ ಗುರಿಗಿಂತ ಎಳ್ಳಷ್ಟೂ ಕಡಿಮೆ ಮಟ್ಟದ ಗುರಿಯನ್ನು ನಾನು ಯೋಚಿಸಲಾರೆ. ಇಡೀ ಜೀವನದ ಮಟ್ಟ ಎಲ್ಲ ನಾಗರಿಕರಿಗೂ ದೊರಕುವ ಭರವಸೆ ಇರಬೇಕು; ಕೆಲವರಿಗೆ ಮಾತ್ರ ಲಭಿಸಿದರೆ ಸಾಲದು ಎಂದು ನನ್ನ ಇಚ್ಛೆ. ಸುಭದ್ರ ಸ್ಥಿತಿಯಲ್ಲಿರುವವರು ಪೂರ್ಣ ರೊಟ್ಟೆಯನ್ನು ತಿಂದು, ಬಡವರಿಗೆ ಏನನ್ನು ಇಲ್ಲದಂತೆ ಮಾಡುವುದಕ್ಕಿಂತ ಎಲ್ಲರಿಗೂ ಕನಿಷ್ಠ ಅರ್ಧ ರೊಟ್ಟೆಯಾದರೂ ಸಿಗುವಂತಾಗುವುದು ಮೇಲು." ಜನತೆಯ ಈ ಅತ್ಯಂತ ದುರ್ಬಲ ವರ್ಗಗಳ ಬಗೆಗೆ, ದೀನದಲಿತರ ಬಗೆಗೆ ಸದಾ ಉದ್ಧಾರದ ಚಿಂತನೆಯೇ ಗಾಂಧೀ ದೃಷ್ಟಿಯ ಯೋಜನೆ ಮತ್ತು ಆರ್ಥಿಕ ಅಭಿವೃದ್ಧಿಯ ವೈಶಿಷ್ಟ್ಯ.

ಇದಲ್ಲದೆ, ಕೇವಲ ಆರ್ಥಿಕ ಸಮೃದ್ಧಿಯೇ ಜನತೆಗೆ ನಿರಾಕುಲ ಜೀವನವನ್ನು ತಂದುಕೊಡಲಾರದೆಂಬುದು ಗಾಂಧೀಜಿಯ ಅಭಿಪ್ರಾಯವಾಗಿತ್ತು. ಎಲ್ಲ ನಾಗರಿಕರಿಗೂ ಕನಿಷ್ಠ ಮಟ್ಟದ ಜೀವನ ಸೌಲಭ್ಯವನ್ನು ಒದಗಿಸಲು ಸಕಲ ಪ್ರಯತ್ನ ಮಾಡುವುದರ ಜತೆಗೆ, ಪಶ್ಚಿಮದ ಅಗಾಧವಾಗಿ ಅಭಿವೃದ್ಧಿಹೊಂದಿದ ಹಾಗೂ ಯಂತ್ರೀಕೃತ ದೇಶಗಳನ್ನು ನಾವು ಅನುಕರಿಸಬಾರದು. ಒಂದು ಕಡೆ ಆರ್ಥಿಕ ಅಭಿವೃದ್ಧಿ ಮತ್ತು ಪ್ರಗತಿ, ಮತ್ತೊಂದು ಕಡೆ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನಗಳಲ್ಲಿ ನೈತಿಕ ಆಧ್ಯಾತ್ಮಿಕ ಮೂಲ್ಯಗಳ ಹೆಚ್ಚಳ, ಇವುಗಳಿಗೆ ಗಮನ ಕೊಡಬೇಕು. "ಕೇವಲ ಬಯಕೆಗಳನ್ನು ಹೆಚ್ಚಿಸಿಕೊಳ್ಳುವುದು ಅವುಗಳ ಪೂರೈಕೆಗೆ ಯಂತ್ರಗಳನ್ನು ವೃದ್ಧಿ ಮಾಡುವುದು, ಇವುಗಳಿಂದ ಜಗತ್ತು ಒಂದು ಹೆಜ್ಜೆಯೂ ತನ್ನ ಗುರಿಯೆಡೆಗೆ ಹೋಗಲಾರದೆಂದು ನನ್ನ ನಂಬಿಕೆ" ಎಂದಿದ್ದರು ಗಾಂಧೀಜಿ. "ದೂರ ಮತ್ತು ಕಾಲಗಳನ್ನು ನಾಶಮಾಡಲು ಹೊರಟಿರುವ ಈ ಹುಚ್ಚು ಆಶೆಯನ್ನು ಮನಃ ಪೂರ್ವಕವಾಗಿ ನಿರಾಕರಿಸುತ್ತೇನೆ. ಹಾಗೆಯೇ ಈ ಪಾಶವೀ ತೃಷೆಗಳನ್ನು ಹೆಚ್ಚಿಸಿಕೊಂಡು, ಇವುಗಳ ತೃಪ್ತಿಗಾಗಿ ಜಗತ್ತಿನ ಮೂಲೆ ಮೂಲೆಗೂ ಅರಸಿಕೊಂಡು ಹೋಗುವುದನ್ನು ಹೇಸುತ್ತೇನೆ." ಬಾಪೂ, ಬಹಳ ಹಿಂದೆ ಬರೆದ ಹೊತ್ತಗೆ "ಹಿಂದ್ ಸ್ವರಾಜ್ಯ" ದಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. "ಮನಸ್ಸು ಬಂದು ವಿಶ್ರಾಂತಿಯರಿಯದ ಪಕ್ಷಿಯಂತೆ; ತೃಪ್ತಿಯಾದಷ್ಟು ಬಯಕೆಗಳು ಹೆಚ್ಚುತ್ತವೆ, ತೃಪ್ತಿಗಾಗಿ ಹಾತೊರೆಯುತ್ತವೆ. ಇಂದ್ರಿಯ ಸುಖ ಅನುಭವಿಸಿದಷ್ಟೂ ಅದು ಅಂಕೆ ತಪ್ಪುತ್ತದೆ. ಆದುದರಿಂದ ನಮ್ಮ ಪೂರ್ವಜರು ಭೋಗಕ್ಕೆ ಮಿತಿಯನ್ನು ವಿಧಿಸಿದ್ದರು. ಸುಖವೆಂಬುದು ಬಹುಮಟ್ಟಿಗೆ ಮಾನಸಿಕ ಎಂಬುದು ಅವರಿಗೆ ಅರಿವಾಗಿತ್ತು.. .....ಯಂತ್ರಗಳನ್ನು ನಿರ್ಮಾಣ ಮಾಡುವ ಶಕ್ತಿ ಅವರಲ್ಲಿ ಇರಲಿಲ್ಲವೆಂದಲ್ಲ ಅಂಥ ಆವಶ್ಯಕತೆಗಳ ಕಡೆ ಮನಸ್ಸು ಹರಿದರೆ, ನಾವು ಗುಲಾಮರಾಗಿ, ನೈತಿಕ ದಾರ್ಢ್ಯ ಕಳೆದುಕೊಳ್ಳುತ್ತೇವೆಂದು ಅವರು ನಂಬಿದ್ದರು."

ಗುರುದೇವ ರವೀಂದ್ರನಾಥ ಠಾಕೂರರೂ ತಮ್ಮ ಅಸದೃಶ ಭಾಷೆಯಲ್ಲಿ ಇದೇ ರೀತಿ ಭಾವಗಳನ್ನು ತಿಳಿಸಿದ್ದರು: "ಸಂಗ್ರಹ ಮಾಡಿ, ಮಾಡಿ, ಮಾಡಿ ಏನು ಪ್ರಯೋಜನ? ಧ್ವನಿಯನ್ನು ಏರಿಸುತ್ತಾ ಹೋದಂತೆ ಬರುವುದು ಅಪಸ್ವರವೇ. ಧ್ವನಿಯನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದರಿಂದ, ಅದಕ್ಕೆ ಪೂರ್ಣ ಲಯದ ಮಾಧುರ್ಯವನ್ನು ಕೊಡುವುದರಿಂದ ಮಾತ್ರ, ಸಂಗೀತ ಉತ್ಪನ್ನವಾದೀತು..."

ಕೌಟಿಲ್ಯ ಕ್ರಿ.ಪೂ. 4ನೆಯ ಶತಮಾನದ ಪ್ರಸಿದ್ಧ ಭಾರತೀಯ ವಿಚಾರವಂತ. ಅವನು ಲೌಕಿಕ ಜಾಣತನಕ್ಕೆ ಹೆಸರಾಂತವನು; ತನ್ನ ಅರ್ಥ ಶಾಸ್ತ್ರದಲ್ಲಿ ಹೀಗೆ ಉಲ್ಲೇಖಿಸಿದ್ದಾನೆ: "ಎಲ್ಲ ಶಾಸ್ತ್ರಗಳ ಗುರಿಯೂ ಇಂದ್ರಿಯ ನಿಗ್ರಹವಲ್ಲದೆ ಮತ್ತೇನೂ ಅಲ್ಲ. ಯಾರು ಇಂದ್ರಿಯಗಳನ್ನು ದಮನಮಾಡದೆ, ಚತುರ್ದಿಕ್ಕುಗಳಿಂದ ಆವೃತವಾದ ಭೂಮಂಡಲವನ್ನೇ ಹೊಂದಿದ್ದರೂ ಶೀಘ್ರವೇ ನಾಶವಾಗುವರು." ಅವನು "ಸುಖಸ್ಯ



ಮೂಲಂ ಧರ್ಮ:" (ಸುಖದ ಮೂಲ ಧರ್ಮ) ಎಂದು ಒತ್ತಿ ನುಡಿದಿದ್ದಾನೆ.

ಪೂರ್ವ ದೇಶಗಳ ಜನಗಳ ಮನಸ್ಸಿಗೆ ಇದೆಲ್ಲ ಅಭಿಪ್ರಾಯಗಳು ವೈಚಾರಿಕವೆಂದೂ, ಒಪ್ಪುವಂಥವೆಂದೂ ಗೋಚರಿಸುತ್ತದೆ. ಆದರೆ, ಪಾಶ್ಚಾತ್ಯ ದೇಶಗಳಿಗೆ ಇವು ಕನಸಿನ ಕಲ್ಪನೆಯೆಂದೂ ತಾತ್ವಿಕ ಭಾವುಕತೆಯೆಂದೂ ಭಾಸವಾಗುತ್ತವೆ. ಭಾರತವು ತನ್ನ ಸ್ವಯಂ ವಿಭೂತಿ ಮತ್ತು ಪ್ರಾಚೀನ ಸಂಸ್ಕೃತಿಗಳ ಆಧಾರದ ಮೇಲೆ ಪ್ರಗತಿಪರ ಆರ್ಥಿಕ ವ್ಯವಸ್ಥೆಯನ್ನು ಹೊಂದಿ, ಜೀವನ ಸರಳತೆ ಮತ್ತು ಉದಾತ್ತ ಭಾವಗಳಿಗೆ ಊಣೆಯ ಬರದ ರೀತಿಯಲ್ಲಿ ಹೆಚ್ಚೆಚ್ಚು ಅಭಿವೃದ್ಧಿಯನ್ನು ಸಾಧಿಸಬೇಕೆಂಬ ವಿಷಯದಲ್ಲಿ ಗಾಂಧೀಜಿಗೆ ಎಳ್ಳಷ್ಟೂ ಸಂಶಯವಿರಲಿಲ್ಲ.

ಅಮೇರಿಕದ ನಿಯತಕಾಲಿಕೆ 'ಲೈಫ್' ಪತ್ರಿಕೆಯ ಈಚಿನ ಸಂಚಿಕೆಯೊಂದರಲ್ಲಿ ಅಮೆರಿಕ ಮತ್ತು ಯೂರೋಪಿನ ಅನೇಕ ಯುವಕ ಯುವತಿಯರು ಕ್ರೀಟ್ ದ್ವೀಪದ ಮಟಾಲಾ ಗುಹೆಗಳಲ್ಲಿ ಈಗ ವಾಸಿಸುತ್ತಿರುವರೆಂದು ಓದಿ ಆಶ್ಚರ್ಯಭರಿತನಾದೆ. ಒಬ್ಬ ಪತ್ರಿಕಾಕರ್ತ ಅವರನ್ನು ಪ್ರಶ್ನಿಸಿದಾಗ ಈ ಯುವಕರು ತಮ್ಮ ಮನಸ್ಸನ್ನು ಶುದ್ಧ ಮಾಡಿಕೊಳ್ಳಲು ಈ ಗುಹೆಗಳಿಗೆ ಬಂದುದಾಗಿ ಉತ್ತರ ವಿತ್ತರು. ಕೆಲವರು ಹೀಗೆ ಹೇಳಿದರು: "ನಾವು ಅಮೆರಿಕಾಕ್ಕೆ ಹಿಂದಕ್ಕೆ ಹೋಗುತ್ತೇವೆ. ಎಲ್ಲೋ ಒಂದು ಕಡೆ, ಉತ್ತರ ಕ್ಯಾಲಿಫೋರ್ನಿಯಾದಲ್ಲಾದರೂ ಆಗಬಹುದು, ಸ್ವಲ್ಪ ಭೂಮಿಯನ್ನು ಹಿಡಿದು, ಅಲ್ಲಿ ಇತರ ಯುವಕರೊಂದಿಗೆ ಒಂದು ವಸಾಹತನ್ನು ನಿರ್ಮಿಸುತ್ತೇವೆ; ಕೃಷಿ ಮಾಡುತ್ತೇವೆ, ಸಣ್ಣದೊಂದು ಮನೆ, ಆಡು ಇಷ್ಟೆ; ಅಲ್ಲಿ ಟಲಿವಿಷನ್ ಇರುವುದಿಲ್ಲ. ಮಕ್ಕಳು ಇಲ್ಲಿ ತಪ್ಪಿಸಿಕೊಳ್ಳಲಾರರು. ನಾವು ವಸ್ತು ಸಮೃದ್ಧಿಯ ಬಗೆಗೆ ಬಂಡಾಯವೆದ್ದಿಲ್ಲ, ಜನರದನ್ನು ಹೇಗೆ ಉಪಯೋಗಿಸಿಕೊಳ್ಳುವರೆಂಬ ಬಗೆಗೆ ಬಂಡಾಯವೆದ್ದಿದ್ದೇವೆ."

ಅಮೆರಿಕಾದಲ್ಲಿ ನಡೆಯುವ ಘೋರ ಕೊಲೆಗಳು, ಅದರಲ್ಲಿಯೂ ಅಧ್ಯಕ್ಷ ಕೆನ್ನಡಿ ಮತ್ತು ಆತನ ಸೋದರ ರಾಬರ್ಟ್ ಹಾಗೂ ನಿಗ್ರೋ ನಾಯಕ ಡಾ॥ ಮಾರ್ಟಿನ್ ಲೂಥರ್‌ಕಿಂಗ್ ಇವರುಗಳ ಕೊಲೆಗಳಂತೂ ಪಾಶ್ಚಾತ್ಯ ಜಗತ್ತಿನ ಮೂಲವನ್ನೇ ಅಲುಗಿಸಿವೆ. ಅಪರಾಧಿಗಳ ಮೇಲೆ ನಡೆಸಿದ ಈಚಿನ ಸಂಶೋಧನೆಗಳು ಮತ್ತು ವಿಚಾರಣೆಗಳಿಂದ ವ್ಯಕ್ತವಾಗುವ ಅಂಶವೆಂದರೆ, ಈ ಘೋರ ಕೃತ್ಯಗಳನ್ನು ಮಾಡಲು ಕಾರಣ ಅ ವ ರಿ ಗೇ (ಪಾತಕಿಗಳಿಗೇ) ತಿಳಿಯದಿರುವುದು. "ಜೀವನ–ಮನಃ ಶಾಸ್ತ್ರ" ಎಂಬ ಹೊಸ ಶಾಸ್ತ್ರವು, ಈ ಘೋರ ಪಾತಕಿಗಳು ಇಂದ್ರಿಯ ಭೋಗಲಾಲಸೆಯಲ್ಲಿ ಮತ್ತರಾದವರೆಂದು ತಮ್ಮ ಮನಸ್ಸು ಮತ್ತು ನರಗಳ ಮೇಲೆ ಸಂಯಮ ಕಳೆದುಕೊಂಡವರೆಂದು ವ್ಯಕ್ತಪಡಿಸಿದೆ. ಈ ಅನುಭವಗಳು, ಕೇವಲ ಆರ್ಥಿಕ ಅಭಿವೃದ್ಧಿಯಿಂದ ಮಾನವರಿಗೆ ನಿಜವಾದ ಸುಖ ದೊರಕುವುದಿಲ್ಲವೆಂಬ ಭಾರತೀಯ ತತ್ವಜ್ಞಾನದ ಮೂಲ ಅಭಿಪ್ರಾಯವನ್ನು ಸಮರ್ಥಿಸುತ್ತವೆ.

ಅಲಹಾಬಾದ್ ವಿಶ್ವವಿದ್ಯಾನಿಲಯದ ಪ್ರೊ. ಜೆ. ಕೆ. ಮೆಹತಾ ಪ್ರಸಿದ್ಧ ಭಾರತೀಯ ಅರ್ಥಶಾಸ್ತ್ರಜ್ಞ, ಅವರೂ ಈ ಸ್ಪಷ್ಟ ನಿರ್ಧಾರಕ್ಕೆ ಬಂದಿದ್ದಾರೆ. "ಮಾನವನಲ್ಲಿರುವ ಪರಸ್ಪರ ವಿರೋಧಶಕ್ತಿಗಳು, ಪ್ರವೃತ್ತಿಗಳು, ಆಸೆರಹಿತ ಸ್ಥಿತಿಯಲ್ಲಿ ಶಾಂತಮಯ ಪರಿಹಾರವನ್ನು ಹೊಂದುತ್ತವೆ." ಅವರು, "ನಮ್ಮ ಆಶೆಗಳಿಗೆ ಅತಿ ಲಾಲಸೆ ಸಲ್ಲದು. ಅವುಗಳನ್ನು ದಮನ ಮಾಡೋಣ, ಗೆಲ್ಲೋಣ. ಮಾನವನ ಪರಮ ಗುರಿ ಆಶಾರಹಿತನಾಗಿ, ಅಂತೆಯೇ ಇರುವುದು. ಆರ್ಥಿಕ ಜೀವನದ ಸತ್ಯವೂ ಇದೇ ಆಗಿದೆ."

ಕೆಲವು ವರ್ಷಗಳ ಕೆಳಗೆ ಅಮೆರಿಕದ ಖ್ಯಾತ ಅರ್ಥಶಾಸ್ತ್ರಜ್ಞ ಪ್ರೊಫೆಸರ್ ಗಾಲ್ ಬ್ರೈಪ್ ಅವರೊಡನೆ ನಮ್ಮ ಯೋಜನಾ ಆಯೋಗ ನಡೆಸಿದ ಸಂಭಾಷಣೆ ನೆನಪಿಗೆಬರುತ್ತದೆ. ಅವರು ಆಗತಾನೆ ಲ್ಯಾಟಿನ್ ಅಮೆರಿಕಾ ದೇಶಗಳ ದೀರ್ಘಪ್ರವಾಸವನ್ನು ಮುಗಿಸಿಕೊಂಡು ಬಂದಿದ್ದರು. ಅವರು ಹೀಗೆ ಹೇಳಿದರು: "ಈ ದೇಶಗಳಲ್ಲಿರುವ ಜನತೆಯ ಘೋರ ಬಡತನ ನೋಡಿ ನನಗೆ ಬಹಳ ದುಃಖವಾಯಿತು. ಭಾರತದ ಬಡರೈತನ ಕಣ್ಣಿನಲ್ಲಿ ಒಂದು ಬಗೆಯ

ದಲ್ಲಿದ್ದರೂ ರಹ. ಆದರೆ, ವ್ಯಾಟ್, ಅಮೆರಿಕಾ ದೇಶಗಳ ಬಡತನ ತೇಜಸ್ಸನ್ನು ನಾನು ಕಂಡಿದ್ದೇನೆ; ಅವನು ಬಡತನ ವ್ಯಸನಕರ ಮತ್ತು ಉತ್ತೇಜನ ಹೀನವಾದುದು. "ಭಾರತದ ಬಡತನ ಬಗೆಗೆ ನಾನು ಇನ್ನೂ ಪ್ರಶ್ನಿಸಿದಾಗ ಆತ ಹೀಗೆ ಉತ್ತರಿಸಿದರು: "ಭಾರತದ ಹಳ್ಳಿಗಳಲ್ಲಿರುವ ಬಡಜನದ ಮುಖದಲ್ಲಿ ಒಂದು ಬಗೆಯ ಸ್ವಯಂ–ಅವಲಂಬನ ಮತ್ತು ನೈತಿಕ ದಾರ್ಢ್ಯವನ್ನು ನಾನು ಕಂಡಿದ್ದೇನೆ. ಇದು, ಒಂದು ದೃಷ್ಟಿಯಲ್ಲಿ ಅವರ ಬಡತನದ ಭಾಗ್ಯ." ನಮ್ಮ ಕೋಟಿ ಕೋಟಿ ಗ್ರಾಮಾಂತರ ಜನರಲ್ಲಿರುವ ಈ ಸ್ವಾವಲಂಬನೆ ಮತ್ತು ಸಾಂಸ್ಕೃತಿಕ ಮೂಲ ಸತ್ವ ನಶಿಸದಂತೆ ನೋಡಿಕೊಳ್ಳುವುದು ನಮ್ಮ ಕರ್ತವ್ಯ.

## ಕೆಲಸದ ಹಕ್ಕು

ಹೀಗೆ ಜೀವನ ಸರಳವೂ ಸಾರ್ಥಕವೂ ಆಗಿರಬೇಕೆಂದು ಒತ್ತಿಹೇಳುವುದರ ಜತೆಗೆ, ದುಡಿಯಲು ಕಾಯಶಕ್ತಿಯಿರುವ ಪ್ರತಿಯೊಬ್ಬ ನಾಗರಿಕನಿಗೂ, ಜೀವನ ನಡೆಸಲು ಅನುವಾಗುವಂತೆ ಕೆಲಸ ಪಡೆಯುವ ಮೂಲ ಹಕ್ಕನ್ನೂ ಗಾಧೀಜಿ ಒತ್ತಿ ಒತ್ತಿ ಹೇಳುತ್ತಿದ್ದರು. ಭಾರತವು ಸ್ವಲ್ಪವೂ ವಿಳಂಬ ಮಾಡದೆ ಸಮಹರಿಸಬೇಕಾದ ಪ್ರಶ್ನೆ–ನಿರುದ್ಯೋಗ ಮತ್ತು ಉದ್ಯೋಗ–ಕೊರತೆ, ಇವಕ್ಕೆ ಸಂಬಂಧಪಟ್ಟದು. ನಮ್ಮ ರಾಜ್ಯಘಟನೆಯೂ ಈ ಮೂಲಹಕ್ಕನ್ನು ಪೂರೈಸುವ ಹೊಣೆ ಹೊತ್ತಿದೆ. ಜಗತ್ತಿನಲ್ಲೆಲ್ಲ ಪೂರ್ಣ ಉದ್ಯೋಗವು–ಎಲ್ಲರಿಗೂ ಉದ್ಯೋಗಕಲ್ಪಿಸುವುದು ಆರ್ಥಿಕ ಯೋಜನೆಯ ಪ್ರಾಥಮಿಕ ಗುರಿಯಾಗಿದೆ. ಸ್ವಾತಂತ್ರ್ಯ ಪೂರ್ವಕಾಲದಿಂದಲೂ, ವಿಧಿಯಿಲ್ಲದೆ ಸೋಮಾರಿತನದಿಂದ ತೊಳಲುವ ನಮ್ಮ ಲಕ್ಷಾಂತರ ಪ್ರಜೆಗಳಿಗೆ ಉತ್ಪಾದಕ ಕ್ರಿಯೆಯನ್ನು ಪ್ರಧಾನವಾಗಿ ಒದಗಿಸುವ ದೃಷ್ಟಿಯಿಂದಲೇ ಗಾಂಧೀಜಿ ಖಾದಿ ಮತ್ತು ಗ್ರಾಮೋದ್ಯೋಗಗಳನ್ನು ಪ್ರತಿಪಾದಿಸುತ್ತಿದ್ದರು. ೧೯೪೪ರಲ್ಲಿ ನನ್ನ ಗಾಂಧೀಯೋಜನೆಯನ್ನು ಸಿದ್ಧಪಡಿಸುತ್ತಿದ್ದಾಗ, ಯಂತ್ರಗಳ ಬಗೆಗೆ ತಮ್ಮ ಅಭಿಪ್ರಾಯಗಳನ್ನು ವಿವರಿಸಬೇಕೆಂದು ನಾನು ಗಾಧೀಜಿಯನ್ನು ಒಂದುದಿನ ಸೇವಾಗ್ರಾಮದಲ್ಲಿ ಪ್ರಶ್ನಿಸಿದೆ. ಅವರು ಈ ಖಚಿತ ಉತ್ತರವನ್ನು ಇತ್ತರು: "ಈ ವಿಚಾರದಲ್ಲಿ ನನ್ನ ಯಾವ 'ಗೀಳೂ' ಇಲ್ಲ. ಕೆಲಸ ಮಾಡಲು ಅಪೇಕ್ಷಿಸುವ ಪ್ರತಿಯೊಬ್ಬ ಭಾರತೀಯನಿಗೂ, ಅವನ ಜೀವನ ನಡೆಸಲು ಉದ್ಯೋಗವನ್ನು ಕಲ್ಪಿಸಬೇಕೆಂಬುದು ನನ್ನ ಇಚ್ಛೆ. ವಿದ್ಯುಚ್ಛಕ್ತಿ, ಅಣುಶಕ್ತಿ ಯಾವುದನ್ನು ಬಳಸಿಕೊಂಡರೂ ಅದು ಮಾನವ ಪರಿಶ್ರಮಕ್ಕೆ ಸಂಚಾಕಾರ ತರದಿದ್ದರೆ, ನಿರುದ್ಯೋಗವನ್ನು ಉಂಟು ಮಾಡದಿದ್ದರೆ, ಅವುಗಳ ವಿರುದ್ಧ 'ಚ'ಕಾರದ ನುಡಿಯೂ ಇಲ್ಲ. ಜನಸಂಖ್ಯೆ ಅಧಿಕವಾಗಿದ್ದು, ಬಂಡವಾಳ ಬಹಳ ಕಡಮೆಯಿರುವ ನಮ್ಮ ದೇಶದಲ್ಲಿ ಈ ರೀತಿ ಸಾಧ್ಯವೆಂದು ನನಗಿನ್ನೂ ನಂಬಿಕೆಯುಂಟಾಗಬೇಕಾಗಿದೆ." ಭಾರತದಂಥ ಅಭಿವೃದ್ಧಿ ಪಥದಲ್ಲಿರುವ ದೇಶಕ್ಕೆ ಯಂತ್ರೀಕರಣ ನೀತಿಯ ಬಗೆಗೆ ಗಾಂಧೀಜಿಯ ಇಷ್ಟು ಸ್ಪಷ್ಟವಾದ ವಿವರಣೆಯಲ್ಲಿ ಯಾವ ಆಧುನಿಕ ಅರ್ಥಶಾಸ್ತ್ರಜ್ಞನೂ ತಪ್ಪೆಣಿಸಿಯಾನೆಂದು ನನಗೆ ಅನಿಸದು. ಬಾಪೂ ಇನ್ನೂ ಸ್ಪಷ್ಟವಾಗಿ ಹೇಳಿದ್ದರು: "ಖಾದೀ ಮತ್ತು ಗ್ರಾಮೋದ್ಯೋಗಗಳ ನೆರವಿಲ್ಲದೆ, ನಮ್ಮ ಜನಕ್ಕೆ, ಸರಕಾರ ಪೂರ್ಣ ಉದ್ಯೋಗವನ್ನು ಒದಗಿಸುವುದಾದರೆ, ಸಂಬಂಧಿಸಿದ ನಿರ್ಮಾಣ ಕಾರ್ಯಕ್ರಮವನ್ನು ನಾನು ನಿಲ್ಲಿಸಿಬಿಡಲು ಸಿದ್ಧನಿದ್ದೇನೆ." ೧೯೫೪ ರಲ್ಲಿ ಇದೇ ವಿಷಯವನ್ನು ಕುರಿತು ಯೋಜನಾ ಆಯೋಗದೊಡನೆ ಚರ್ಚಿಸುತ್ತಾ ವಿನೋಬಾ, ಎಲ್ಲ ಕೆಲಸಮಾಡುವ ಶಕ್ತಿಯಿರುವ ಜನರಿಗೂ ಸರಕಾರ ಬೇರೆ ಮಾರ್ಗದ ಉದ್ಯೋಗಗಳನ್ನು ಕೊಡುವುದಾದರೆ, "ತಮ್ಮ ಮರದ ಚರಖಾವನ್ನು ಒಂದು ದಿನದ ಅಡಿಗೆ ಮಾಡಲು ಸುಟ್ಟುಬಿಡಲು ಹಿಂದೆ ಮುಂದೆ ನೋಡುವುದಿಲ್ಲವೆಂದು ತಿಳಿಸಿದ್ದರು. ಆದುದರಿಂದ, ಖಾದೀ ಮತ್ತು ಗ್ರಾಮೋದ್ಯೋಗಗಳ ಬಗೆಗೆ ಗಾಂಧೀಜಿಯ ಅಭಿಪ್ರಾಯಗಳನ್ನು 'ಗಾಂಧೀ ಗೀಳು, ಮತ್ತು ಕೇವಲ ಕನಸು ಎನ್ನುವುದು ಅತ್ಯಂತ ಅನ್ಯಾಯವೇ ಸರಿ.

ಇಲ್ಲಿ ಮುಖ್ಯವಾದ ವಿಷಯವೆಂದರೆ, "ಉದ್ದೇಶಿತ ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಅಂತ್ಯಕ್ಕಾದರೂ ನಾವು ನಮ್ಮ ಜನಕೋಟಿಗೆ ಪೂರ್ಣ ಉದ್ಯೋಗವನ್ನು ನೀಡಲು ಶಕ್ತರಾಗುವವೇ" ಎಂಬುದು, ಯೋಜನಾ ಆಯೋಗದವರೇ ಮಾಡಿರುವ ಲೆಕ್ಕಾಚಾರದ



ಪ್ರಕಾರ, ನಾಲ್ಕನೆಯ ಯೋಜನೆಯ ಎಲ್ಲ ಕಾರ್ಯಕ್ರಮಗಳು ಆಚರಣೆಗೆ ಬಂದರೂ, ಯೋಜನೆಯ ಕಾಲಾಂತ್ಯಕ್ಕೆ ಕಂಡು ಬರುವ ನಿರುದ್ಯೋಗಸ್ಥರ ಪ್ರಮಾಣ ೨೮ ಮಿಲಿಯಾ ಎಂದು ಹೇಳಲಾಗಿದೆ. ಯಾವ ದೃಷ್ಟಿಯಿಂದಲೂ ಇದು ಉತ್ಪ್ರೇಕ್ಷೆಯಲ್ಲ, ಬಹಳ ಸಂಕುಚಿತ ಸಂಖ್ಯೆ. ಈ ಪ್ರಶ್ನೆಯನ್ನು ನೇರವಾಗಿ ಎದುರಿಸಬೇಕಾದ ಕಾಲ ಈಗ ಸನ್ನಿಹಿತನಾಗಿದೆ; ಇನ್ನು ಇದರ ಬಗೆಗೆ ನಾವು ಏನೋ ಹೇಗೋ ಲಘುವಾಗಿ ಇರಲು ಸಾಧ್ಯವಿಲ್ಲ. ಕೆಲಸ ಮಾಡಲು ಸಮರ್ಥನಿದ್ದು ಅದನ್ನು ಕೇಳುವ ಪ್ರತಿಯೊಬ್ಬ ನಾಗರಿಕನಿಗೂ ನಾವು ಒಂದು ಉತ್ಪಾದಕ ಕ್ರಿಯೆಯನ್ನು ಕೊಡಲು ಸಿದ್ಧವಿರಬೇಕು, ಇಲ್ಲವಾದರೆ ನಿರುದ್ಯೋಗಸ್ಥ ಕೇಳುವ ಪಡಿ ಭಿಕ್ಷ ಮಾಸಿಕ (Dole) ಹಣವನ್ನು ಅಥವಾ ಜೀವನ ಭತ್ಯ ಕೊಡಲು ಒಪ್ಪಿಕೊಳ್ಳಬೇಕು. ಗಾಂಧೀಜಿ ಪಡಿಭಿಕ್ಷ ಹಣ ಕೊಡುವುದಕ್ಕಿಂತ ಉದ್ಯೋಗ ಕೊಡುವುದೇ ಮೇಲೆಂದು ಭಾವಿಸಿದ್ದರು. ಪಂಡಿತ ನೆಹರೂ ಸಹ ಈ ಅಭಿಪ್ರಾಯವನ್ನೇ ಒತ್ತಿ ಹೇಳಿದ್ದರು.

ನಮ್ಮ ದೇಶದಲ್ಲಿ ಖಾದೀ ಮತ್ತು ಗ್ರಾಮೋದ್ಯೋಗಗಳನ್ನು ಪೂರ್ಣವಾಗಿ ಬೆಳೆಸಿದ ಹೊರತು, ಜನಕೋಟಿಗೆ ಪೂರ್ಣ ಉದ್ಯೋಗದ ಭರವಸೆಯನ್ನು ನೀಡಲು ಸಾಧ್ಯವಾಗುವುದಿಲ್ಲವೆಂದು ನನ್ನ ನಂಬಿಕೆ. ಈಗ ಬಳಕೆಯಲ್ಲಿರುವ ತಂತ್ರ ವಿಧಾನವನ್ನು ಆಧುನಿಕ ವಿಜ್ಞಾನ ಮತ್ತು ಸಂಶೋಧನೆಗಳ ನೆರವಿನಿಂದ ಉತ್ತಮ ಪಡಿಸಿಕೊಳ್ಳಬೇಕೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ, ಗ್ರಾಮೀಣ ಕಸುಬುಗಳು ಹೆಚ್ಚು ಉತ್ಪಾದಕ ಮತ್ತು ಸಮರ್ಥಕ ಆಗಬೇಕಾದರೆ, ಅದಕ್ಕಾಗಿ ತುಂಬ ಶ್ರಮಿಸಬೇಕು. ಈ ಸಣ್ಣ ಪ್ರಮಾಣದ ಕಸುಬುಗಳು ರಾಜ್ಯದಿಂದ ಹೇರಳ ಧನದ ನೆರವನ್ನು ಪಡೆಯುವ ದೊಡ್ಡ ಪ್ರಮಾಣದ ಕೈಗಾರಿಕೆಗಳೊಡನೆ ಯಶಸ್ವಿಯಾಗಿ ಸ್ಪರ್ಧೆನಡೆಸಬಲ್ಲವೆಂದು ನಿರೀಕ್ಷಿಸುವುದು ಸಕಾರಣವೆನಿಸದು. ಭಾರತದ ಹತ್ತಿಗಿರಣಿಗಳು ಮತ್ತು ಸಕ್ಕರೆ ಕಾರ್ಖಾನೆಗಳು ಇದಕ್ಕೆ ನಿದರ್ಶನ. ರಾಜ್ಯವು ಸಣ್ಣ ಪ್ರಮಾಣದ ಗ್ರಾಮ ಮತ್ತು ಗುಡಿ ಕೈಗಾರಿಕೆಗಳಿಗೆ ಎಲ್ಲ ನೆರವನ್ನು ನೀಡಬೇಕು, ಉತ್ಪಾದನೆಯ ಕೆಲವು ಭಾಗಗಳನ್ನು ಮೀಸಲಿಡಬೇಕು; ಸಾಲ, ಮಾರಾಟ ಮತ್ತು ತಾಂತ್ರಿಕ ಸೌಲಭ್ಯ ಇವನ್ನೂ ಪರಮಾವಧಿ ಒದಗಿಸಬೇಕು.

ಈ ವಿಕೇಂದ್ರೀಕೃತ ಉದ್ಯಮಗಳಿಗೆ ದೊಡ್ಡ ಯೋಜನೆಯನ್ನು ಕೈಗೊಳ್ಳಲು ನಮಗೆ ಮನಸ್ಸಿಲ್ಲದಿದ್ದರೆ, ನಿರುದ್ಯೋಗಿಗಳೆಂದು ದಾಖಲೆ ಮಾಡಿಸಿಕೊಳ್ಳುವ ಎಲ್ಲರಿಗೂ 'ಪಡಿಭಿಕ್ಷೆ' ಹಣ ಅಥವಾ ಜೀವನ ಭತ್ಯ' ನೀಡಲು ನಾವು ಸಿದ್ಧರಿದ್ದೇವೆಯೆ? ನಾಲ್ಕನೆಯ ಯೋಜನೆಯ ಅಂತರದಲ್ಲಿ ಇಂಥ ನಿರುದ್ಯೋಗಸ್ಥ ಹತ್ತು ಮಿಲಿಯಾ ಜನರಿಗೆ ದಿನಕ್ಕೆ ಒಂದು ರೂಪಾಯಿಯಂತೆ ಅಲ್ಪ ಪಡಿಭಿಕ್ಷ ಹಣ ಅಥವಾ 'ಜೀವನ ಭತ್ಯ' ನೀಡಲು ನಿಯೋಜಿಸಿದರೂ, ವರ್ಷಕ್ಕೆ ೩೬೫ ಕೋಟಿಗಳೂ, ೫ ವರ್ಷಗಳಿಗೆ ೧೮೦೦ ಕೋಟಿ ರೂಪಾಯಿಗಳ ಮೇಲ್ಪಟ್ಟೂ ಆಗುತ್ತದೆ. ಈ ವೆಚ್ಚ ಮಾಡಲು ಸಾಧ್ಯವೆ? ಇದಕ್ಕೆ ಪ್ರತಿಯಾಗಿ ಖಾದೀ ಮತ್ತು ಗ್ರಾಮದ್ಯೋಗಿಗಳ ವ್ಯವಸ್ಥೆಗಾಗಿ, ಮುಂದಿನ ಕೆಲವು ವರ್ಷಗಳಲ್ಲಿ ವೆಚ್ಚಮಾಡಲು ೫೦೦ ಕೋಟಿ ರೂಪಾಯಿಗಳ ಒಂದು ಆವೃತ್ತ ನಿಧಿಯನ್ನು ಮೀಸಲಿಟ್ಟು, ಕೆಲವು ಸ್ಪಷ್ಟ ನೀತಿ ನಿರ್ಣಯಗಳನ್ನು ಮಾಡಿ, ಉತ್ಪಾದನೆಯ ಕೆಲವು ಕ್ಷೇತ್ರಗಳನ್ನು ಮೀಸಲಿಟ್ಟರೆ ದೇಶದ ನಿರುದ್ಯೋಗ ಹಾಗೂ ಉದ್ಯೋಗ–ಕೊರತೆಯ ಸಮಸ್ಯೆಯನ್ನು ಬಹುಮಟ್ಟಿಗೆ ಪರಿಹರಿಸಬಹುದೆಂದು ನನ್ನ ನಂಬಿಕೆ, ಈಗಲೂ ಭಾರತದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗಗಳ ಆಯೋಗವು ೫೬ ಕೋಟಿ ರೂಪಾಯಿಗಳ ಆವೃತ್ತ ಬಂಡವಾಳದಿಂದ ೨೪ ಲಕ್ಷ ಕೆಲಸಗಾರರಿಗೆ ಉದ್ಯೋಗವನ್ನು ಕಲ್ಪಿಸಿರುವುದು, ಗಮನಾರ್ಹವಾಗಿದೆ.

ಈಚೆಗೆ ಅಮೆರಿಕಾದಲ್ಲಿ ನಡೆದ ಒಂದು ಅಭಿಪ್ರಾಯ ಸಂಗ್ರಹಣೆ ಸರ್ವೆಯ ಪ್ರಕಾರ ಶೆ. 78 ಭಾಗ ಜನ ಖಚಿತವಾದ ಉದ್ಯೋಗದ ಭರವಸೆಯನ್ನು, ಅಪೇಕ್ಷಿಸಿದರೇ ಹೊರತು ಜೀವನ ಭತ್ಯವನ್ನಲ್ಲ ಎಂಬುದು ವಿಚಾರಾರ್ಹ. ಭಾರತದಲ್ಲಿಯೂ, ಈ ಸಹಾಯ ದ್ರವ್ಯ ನೀಡುವ ಪದ್ಧತಿಗಿಂತ ಉದ್ಯೋಗವನ್ನು ಒದಗಿಸುವ ಪದ್ಧತಿಯೇ ಹೆಚ್ಚು ಅಪೇಕ್ಷಣೀಯ ನಮ್ಮ ಸಂಸ್ಕೃತಿಯ ಪರಂಪರೆ "ಕರ್ಮಮಾಡದೆ

ತಿನ್ನುವವನು ಕಳ್ಳನಿದ್ದಂತೆ" ಎಂಬ ತತ್ವದ ಆಧಾರ ಹೊಂದಿದೆ. ಕೆಲವು ವರ್ಷಗಳ ಹಿಂದೆ ನಾನು ಉತ್ಕಲದಲ್ಲಿಯೂ ಮತ್ತು ಬಿಹಾರದಲ್ಲಿಯೂ ಪ್ರವಾಹ ಪೀಡಿತ ಪ್ರದೇಶಗಳ ಹಲವು ದೃಶ್ಯಗಳಿನ್ನು ನೋಡಿದೆ. ಜನಸಮೂಹ ಬೆಳೆಯನ್ನೆಲ್ಲ ಕಳೆದು ಕೊಂಡಿತ್ತು; ವಾಸದ ಗುಡಿಸಲುಗಳೊಂದಿಗೆ ಸರ್ವಸ್ವವೂ ಕೆಟ್ಟುಹೋಗಿತ್ತು ಅವರು ಬಹುತೇಕ ನಗ್ನ ಸ್ಥಿತಿಯಲ್ಲಿದ್ದರು: ಕಡು ಬವಣೆಯ ಪರಿಸ್ಥಿತಿ. ಆದರೂ ಮಾನವ ಪೌರುಷ ಭಾರ ಶಿಥಿಲವಾಗಿರಲಿಲ್ಲ. ಅವರು ಆಹಾರ, ವಸ್ತ್ರ ರೂಪದ ಭಿಕ್ಷೆ ಬೇಡಲಿಲ್ಲ. ಅವರು ಬೇಡಿದುದು ಸಣ್ಣ ಪ್ರಮಾಣದ ಗ್ರಾಮ ಕೈಗಾರಿಕೆ. ಜನತೆಯ ಈ ಸ್ಥೈರ್ಯವನ್ನು ಕಂಡು ನಾನು ಮೂಕನಾದೆ; ನನ್ನ ಹೃದಯ ಸ್ವಚ್ಛವಾಯಿತು. ಭಾರದ ಕೋಟಿ ಕೋಟಿ ಜನರಲ್ಲಿರುವ ಈ ದಿವ್ಯ ಗುಣ ಸಿಥಿಲವಾಗಲು ನಮ್ಮ ಲೋಪದೋಷಗಳು ಕಾರಣವಾಗದಿದ್ದರೆ ಸಾಕೆಂದು ಪ್ರಾರ್ಥಿಸುತ್ತೇನೆ.

ಸರಕಾರವು ಖಾದೀ ಮತ್ತು ಗ್ರಾಮೋದ್ಯೋಗ ಉತ್ಪನ್ನಗಳನ್ನು ತನ್ನ ಭಿನ್ನ ಭಿನ್ನ ಇಲಾಖೆಗಳ ಉಪಯೋಗಕ್ಕೆ ಕೊಂಡುಕೊಳ್ಳುವ ಹೊಣೆ ಹೊತ್ತುಕೊಳ್ಳಬೇಕು; ಹಾಗೂ ಜನತೆ ರಾಷ್ಟ್ರೀಯ ಮನೋಭಾವದಿಂದ ಇವುಗಳನ್ನು ಕೊಳ್ಳಲು ಪ್ರೋತ್ಸಾಹಿಸಬೇಕು. ಖಾದೀ ಕೊಳ್ಳಲು ವೆಚ್ಚವಾದ ಹಣ ಜನತೆ ಜನತೆಗಾಗಿಯೇ ಸಂತಸದಿಂದ ಇಚ್ಛಾಪೂರ್ವಕ ಕೊಡುವ ನಿರುದ್ಯೋಗ ತೆರಿಗೆ ಎಂದು ಭಾವಿಸಲ್ಪಡಬೇಕು. ಪ್ರೊ. ಕೋಲ್‌ರಂಥ ಪ್ರಸಿದ್ಧ ಬ್ರಿಟಿಷ್ ಅರ್ಥಶಾಸ್ತ್ರಜ್ಞರು ಹೀಗೆ ಸ್ಪಷ್ಟವಾಗಿ ನುಡಿದಿದ್ದಾರೆ: "ಗೃಹೋತ್ಪನ್ನ ವಸ್ತ್ರ ಕೈಗಾರಿಗೆ. ಖಾದೀ ಬೆಳವಣಿಗೆಗಾಗಿ ಗಾಂಧೀ ನಡೆಸುವ ಚಳುವಳಿ, ಗತಕಾಲದ ಎನೋ ಒಂದು ಅಂಶವನ್ನು ಪುನರುಜ್ಜೀವನ ಗೊಳಿಸುವಗೀಳಲ್ಲ; ದೇಶದ ಬಡತನವನ್ನು ಪರಿಹರಿಸುವುದಕ್ಕೆ ವ್ಯವಹಾರಯುಕ್ತ ಪ್ರಯತ್ನ, ಭಾರತೀಯ ಗ್ರಾಮೀಣನ ಜೀವನ ಮಟ್ಟವನ್ನು ಉತ್ತಮ ಪಡಿಸುವ ಪ್ರಯತ್ನ."

ಸ್ವೀಡನ್ನಿನ ಸುಪ್ರಸಿದ್ಧ ಅರ್ಥಶಾಸ್ತ್ರವಿದ ಪ್ರೊಫೆಸರ್ ಗುನ್ನಾರ್ ಮಿರ್‌ಡಾಲ್ ಅವರು, ತಮ್ಮ ಇತ್ತೀಚಿನ ಗ್ರಂಥ 'ಏಷ್ಯಾನ್ ಡ್ರಾಮಾ' ಎಂಬುದರಲ್ಲಿ ಗಾಧೀಜಿಯ ಗ್ರಾಮೋದ್ಯೋಗಗಳ ರಕ್ಷಣೆ ಮತ್ತು ಅಭಿವೃದ್ಧಿಯ ಯೋಜನೆಯನ್ನು ಬಲವಾಗಿ ಸಮರ್ಥಿಸಿದ್ದಾರೆ: "ಗ್ರಾಮೋದ್ಯೋಗಗಳೊಡನೆ ನೇರವಾಗಿ ಸ್ಪರ್ಧೆ ನಡೆಸುವ ಕೈಗಾರಿಕೆಗಳಿಗೆ ಕೊಡುವ ಪ್ರೋತ್ಸಾಹದಿಂದ ಲಕ್ಷಾಂತರ ಜನಕ್ಕೆ ಅನ್ನ, ಕೆಲಸ ಎರಡೂ ಇಲ್ಲದಂತಾಗುತ್ತದೆ. ಅವರಿಗೆ ಪರ್ಯಾಯ ಉದ್ಯೋಗವಾಗಲೀ ವರಮಾನವಾಗಲೀ ಇಲ್ಲದಂತಾಗುತ್ತದೆ; ಇದು ಯೋಜನೆಯ ದೃಷ್ಟಿಯಿಂದ ವಿಚಾರಯುತ ಎನಿಸಲಾರದು."

ಅವರೇ ಮುಂದುವರೆದು ಹೀಗೆ ಹೇಳಿದ್ದಾರೆ: "ಗ್ರಾಮ ಕೈಗಾರಿಕೆಗಳ ಯೋಜನೆಯನ್ನು ತಾತ್ಕಾಲಿಕ ಯೋಜನೆ ಎಂದು ಪರಿಗಣಿಸುವ ಭಾವನೆಯಿದೆ; ಇವು ದೊಡ್ಡ ಪ್ರಮಾಣದ ಔದ್ಯೋಗೀಕರಣ ಬೆಳೆದು, ಶ್ರಮಜೀವಿಗಳಿಗೆ ದೊಡ್ಡ ಪ್ರಮಾಣದ ಉದ್ಯೋಗ ಅವಕಾಶ ಕಲ್ಪಿಸಿ ಕೊಡುವವರೆಗೆ ಸಾಧ್ಯವೆಂದೂ ಹೇಳುವುದುಂಟು. ಆದರೆ, ದಕ್ಷಿಣ ಏಷ್ಯಾದಲ್ಲಿ, **ದಶಕಗಳು ಕಳೆದರೂ,** ಈ ಗೃಹ ಕೈಗಾರಿಕೆಯ ಕೆಲಸಗಾರರಿಗೆ ದೊಡ್ಡ ಪ್ರಮಾಣದ ಕೈಗಾರಿಕಾ ಕಾರಣದಿಂದ ಉದ್ಯೋಗ ದೊರಕುವ ಭವಿಷ್ಯವೇ ಕಾಣ ಬರುತ್ತಿಲ್ಲ; ಏಕೆಂದರೆ, ಈ ಶತಮಾನದ ಅಂತ್ಯದ ವರೆಗೂ ಪರಿಶ್ರಮ ವರ್ಗ ವೇಗವಾಗಿ ವೃದ್ಧಿಯಾಗುತ್ತಲೇ ಹೋಗುತ್ತದೆ."

ಪ್ರೊ. ಗುನ್ನಾರ್ ಮಿರ್‌ಡಾಲ್‌ರವರ ಈ ಅರ್ಥಪೂರ್ಣ ಹೇಳಿಕೆಯ ದೃಷ್ಟಿಯಲ್ಲಿ ನಮ್ಮ ಯೋಜನಾ ತಜ್ಞರೂ ಅರ್ಥ ಶಾಸ್ತ್ರಜ್ಞರು ಗಾಂಧೀ ಅರ್ಥ ವಿಚಾರದ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಪರಿಶೀಲಿಸಿ ಕೊಳ್ಳುವರೆಂದು ನಂಬುತ್ತೇವೆ.

## ಆಹಾರ ಸ್ವಾವಲಂಬನೆ

ರಾಷ್ಟ್ರಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದ ತರುವಾಯ, ಮೂರು ಪಂಚವಾರ್ಷಿಕ ಯೋಜನೆಗಳು ಕಾರ್ಯಗತವಾಗಿದ್ದರೂ, ಆಹಾರ ಕೊರತೆ ಮತ್ತು ಅನ್ನ ಸಮಸ್ಯೆ ಪರಿಹರಿದಿಲ್ಲವೆಂಬುದು ವ್ಯಸನದ ಸಂಗತಿ.



ವಿದೇಶಗಳಿಂದ ಮಿಲಿಯ ಗಟ್ಟಲೆ ಟನ್‌ಗಳ ಆಹಾರವನ್ನು ಇನ್ನೂ ಆಮದು ಮಾಡಿಕೊಳ್ಳುತ್ತಿದ್ದೇವೆ. ಇದು ಆರ್ಥಿಕ ದೃಷ್ಟಿಯಿಂದ ಅನಪೇಕ್ಷಿತವಷ್ಟೇ ಅಲ್ಲ, ರಾಷ್ಟ್ರದ ರಕ್ಷಣ ಮತ್ತು ಭದ್ರತೆಗಳ ದೃಷ್ಟಿಯಿಂದಲೂ ಅಪಾಯಕರ. ಕೇಂದ್ರ ಮತ್ತು ರಾಜ್ಯ ಸರಕಾರಗಳು ದೇಶದಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸಲು ಆಗಲೇ ಹಲವಾರು ಕಾರ್ಯಕ್ರಮ ನಿಯೋಜಿಸಿವೆ. ಇದೆಲ್ಲ ಆದರೂ, ಮುಂದಿನ ಕೆಲವು ವರ್ಷಗಳಲ್ಲಿ ಆಹಾರ ಸ್ವಾವಲಂಬನೆ ಸಾಧಿಸಲು ಗಾಂಧೀಜಿ ನೀಡುತ್ತಿದ್ದ ತುರ್ತು ಆದ್ಯತೆಯನ್ನು ಈ ಕೆಲಸಕ್ಕೆ ನೀಡಬೇಕಾಗಿದೆ.

ಬಾಪೂ ಯಾವ ಕಾರ್ಯಕ್ರಮವನ್ನು ಕೈಗೊಂಡರೂ ಅದಕ್ಕೆ ಅವರು ವ್ಯವಹಾರ ಭರಿತ ತೀವ್ರತೆಯನ್ನು ಕೊಡುತ್ತಿದ್ದರು. ೧೯೪೬ರಲ್ಲಿ ಆಹಾರಾಭಾವ, ದೇಶದಲ್ಲಿ ವಿಜೃಂಭಿಸಿದಾಗ, ಗಾಂಧೀಜಿ ಹರಿಜನ ಪತ್ರಿಕೆಯ ಮೂಲಕ ಕೃಷಿಉತ್ಪನ್ನವನ್ನು ಹೆಚ್ಚಿಸುವುದಕ್ಕೆ ಅನೇಕ ಸಲಹೆಗಳನ್ನಿತ್ತರು. ದೇಶದಲ್ಲಿ ಕೃಷಿ ಯೋಗ್ಯವಾದ ಎಲ್ಲ ಭೂಮಿಯೂ, ರಾಷ್ಟ್ರಪತಿ ಭವನದ ಹಾಗೂ ಹೊಸ ದೆಹಲಿಯ ಎಲ್ಲ ಬಂಗಲೆಗಳಲ್ಲಿ ಕೃಷಿ ಯೋಗ್ಯವಾದ ಭೂಮಿಯೂ ಆಹಾರ ಬೆಳೆ ತೆಗೆಯುವುದಕ್ಕೆ ಉಪಯೋಗವಾಗಬೇಕೆಂದು ಸೂಚಿಸಿದ್ದರು. ಒಂದು ದಿನ, ಸೇವಾಗ್ರಾಮದಲ್ಲಿ ಗಾಧೀಜಿ ಸಾಯಂಕಾಲದ ಸಂಚಾರ ಮುಗಿಸಿಕೊಂಡು ಬಂದಮೇಲೆ, ಕಸ್ತೂರಬಾ ಅವರ ಪಾದ ತೊಳೆಯುತ್ತಿದ್ದರು. ದಿನವೂ ಹೀಗೆ ತೊಳೆದ ನೀರನ್ನು ಹತ್ತಿರದಲ್ಲಿದ್ದ ಗುಲಾಬಿ ಪಾತಿಗಳಿಗೆ ಹಾಕುತ್ತಿದ್ದರು. ಬಾವೂ ನನ್ನ ಕಡೆ ನೋಡಿ: "ಈ ದೇಶದಲ್ಲಿ ಆಹಾರಾಭಾವವಿರುವ ಈ ಕಾಲದಲ್ಲಿ ಆಶ್ರಮಕ್ಕೆ ಈ ಗುಲಾಬಿಗಳು ಶೋಭಿಸವು. ಇವುಗಳ ಜಾಗದಲ್ಲಿ ಗೋಧಿ ಬೆಳೆಯುವ ಪಾತಿಯನ್ನೇಕೆ ಮಾಡಬಾರದು" ಎಂದರು. ಮರುದಿನ ಇದು ಕಾರ್ಯರೂಪಕ್ಕೆ ಬಂದೇ ಬಿಟ್ಟಿತ್ತು. ಇಂಥ ಉತ್ಸಾಹದಿಂದಲೇ ಗಾಂಧೀಜಿ ಎಲ್ಲ ಕಾರ್ಯಕ್ರಮಗಳನ್ನು ಆರಂಭಿಸಿದುದು.

## ಬೆಲೆಗಳ ಏರಿಕೆ

ದೇಶದಲ್ಲಿ ಇನ್ನೊಂದು ಜಟಿಲ ಸಮಸ್ಯೆಯೆಂದರೆ, ದಿನ ನಿತ್ಯ ಬಳಕೆಯ ವಸ್ತುಗಳ ಬೆಲೆ ಏರಿಕೆ. ಕೇದ್ರ ಮತ್ತು ರಾಜ್ಯ ಸರಕಾರಗಳು ಬೆಲೆಗಳನ್ನು ಹಿಡಿತಕ್ಕೆ ತರಲು ಹಲವಾರು ವಿಧಾನಗಳನ್ನು ಆರಂಭಿಸಿವೆ. ಆದರೆ ಪರಿಣಾಮ ನಿರೀಕ್ಷಣೆಗೆ ತಕ್ಕಂತೆ ಸಾಗಿಲ್ಲ. ಶೀಘ್ರ ಕಾಲದಲ್ಲ, ಈ ಬಳಕೆ ವಸ್ತುಗಳ ಬೆಲೆ ಅಪೇಕ್ಷಣೀಯ ಮಟ್ಟದಲ್ಲಿ ಹಿಡಿತಕ್ಕೆ ಬರಬೇಕಾದರೆ, ಅದು ಹೇರಳ ಉತ್ಪನ್ನದಿಂದ ಮಾತ್ರ ಸಾಧ್ಯವೆಂಬುದು ಸ್ವಯಂವಿದಿತ. ಇದರ ಜತೆಗೆ, ಬಳಕೆದಾರರ ಹಾಗೂ ಉತ್ಪಾದಕರ ಹಿತವನ್ನು ಸಂರಕ್ಷಿಸಲು ಮತ್ತು ಅವರನ್ನು ಮಧ್ಯವರ್ತಿ ಜನರ ಲಾಭದಿಂದ ಪಾರು ಮಾಡಲು ಸಹಕಾರಿ ಬಳಕೆದಾರರ ಸಂಘಗಳು ಅಸಂಖ್ಯವಾಪ್ತಿ ಬೆಳೆಯಬೇಕು. ಗಾಂಧೀಜಿ ನಮ್ಮ ಅರ್ಥವ್ಯವಸ್ಥೆಯ ತೀವ್ರ ನಿಯಂತ್ರಣವನ್ನು ಅನುಮೋದಿಸುತ್ತಿರಲಿಲ್ಲ, ಸಾಮಾನ್ಯರ ಆರ್ಥಿಕ ಹಿತ ರಕ್ಷಣೆಗಾಗಿ ಯಾವ ನಿಯಂತ್ರಣಗಳು ಅತ್ಯಂತ ಆವಶ್ಯಕವೋ ಅಂಥವನ್ನು ಮಾತ್ರ ಅವರು ಒಪ್ಪುತ್ತಿದ್ದರು; ಆರಿಸಿದ ಮತ್ತು ಕೆಲವು ಉಪಾಯದ ನಿಯಂತ್ರಿತ ನೀತಿಯನ್ನು ಒಪ್ಪುತ್ತಿದ್ದರು. ಭಾರತ ಸರಕಾರವು ಈ ನೀತಿಯನ್ನು ಹೆಚ್ಚು ಹೆಚ್ಚಾಗಿ ಅನುಸರಿಸುತ್ತಿದೆ. ಸಿಮೆಂಟ್, ಉಕ್ಕು ಮತ್ತು ಸಕ್ಕರೆ ಇವುಗಳ ಪೂರ್ಣ ಅಥವಾ ಆಂಶಿಕ ಹಂಚಿಕೆಯ ನಿಯಂತ್ರಣವನ್ನು ತೆಗೆದು ಹಾಕಿದೆ. ಇತರ ವಸ್ತುಗಳ ಮೇಲಿನ ನಿಯಂತ್ರಣವನ್ನು ಕಾಲ ಕಾಲಕ್ಕೆ ಪರಿಶೀಲಿಸಿ, ಯಾವು ವು ಅಗತ್ಯವಲ್ಲವೋ ಅಂಥವನ್ನು ತೆಗೆದು ಹಾಕುವುದು ಉಪಯುಕ್ತ.

ಗಾಂಧೀಜಿ ಅನೇಕ ವರ್ಷಗಳ ಕಾಲ ಅಹಮದಾಬಾದಿನಲ್ಲಿ ಇದ್ದಾಗ ಒಂದು ಉತ್ತಮ ಕಾರ್ಮಿಕ ನೀತಿಯನ್ನು ರೂಪಿಸಿದ್ದರು. ಟೆಕ್ಸ್‌ಟೈಲ್, ಕಾರ್ಮಿಕ ಸಂಘವು, ಕಳೆದ ಎರಡು ದಶಕಗಳಿಗೆ ಮೇಲ್ಪಟ್ಟು, ಗಾಂಧೀಜಿಯ ಈ ಅಭಿಪ್ರಾಯಗಳನ್ನು ಕಾರ್ಯಗತ ಮಾಡಲು ಶ್ರಮಿಸುತ್ತಿದೆ. ಬಾಪೂ ಕಾರ್ಮಿಕರ ಹಕ್ಕು ಬಾಧ್ಯತೆ ಹಾಗೂ ಕರ್ತವ್ಯಗಳ ಕಡೆಗೆ ಗಮನವನ್ನು ಸೆಳೆಯುತ್ತಿದ್ದರು. ಉತ್ಪನ್ನದ ಹೆಚ್ಚಳಕ್ಕೂ ಕಾರ್ಮಿಕರು ಮಜೂರಿಗೂ ಅಗತ್ಯವಾದ ಸಂಬಂಧವಿರಬೇಕು. ಕಾರ್ಮಿಕರು ಕೈಗಾರಿಕಾ ಉತ್ಪನ್ನವನ್ನು ಹೆಚ್ಚಿಸಲು ಶ್ರಮಿಸದೆ, ಹೆಚ್ಚುವರಿ ಮಜೂರಿಯನ್ನು ಮಾತ್ರ

ಬೇಡುತ್ತಾ ಹೋದರೆ, ಬಳಕೆಯ ವಸ್ತುಗಳ ಬೆಲೆಯು ಮಟ್ಟ ಏರುತ್ತಾ ಹೋಗಿ, ಅದರಿಂದ ಒಂದು ವಿಷ ಚಕ್ರವೇ ನಿರ್ಮಾಣವಾಗುತ್ತದೆ.

## ಕೊಟ್ಟಿಗೆ ಗೊಬ್ಬರ

ಫಲವತ್ತಿಲ್ಲದ ಭೂಮಿಯನ್ನು ಉತ್ತಮ ಪಡಿಸುವುದಕ್ಕೆ ಕೊಟ್ಟಿಗೆಯ ಮತ್ತು ಹಸಿರು ಗೊಬ್ಬರವನ್ನು ಹೆಚ್ಚಾಗಿ ಬಳಕೆಗೆ ತರಬೇಕೆಂದು ಗಾಧೀಜಿ ಅನೇಕ ಸಂದರ್ಭಗಳಲ್ಲಿ ಹೇಳಿದ್ದರು. ರಾಸಾಯನಿಕ ಗೊಬ್ಬರವನ್ನು ಉಪಯೋಗಿಸಿ, ಉತ್ಪನ್ನವನ್ನು ಹೆಚ್ಚಿಸುವ ವಿಷಯದಲ್ಲಿ ಆಕ್ಷೇಪವಿಲ್ಲದಿದ್ದರೂ ಆ ಗೊಬ್ಬರ ಕಾಂಪೋಸ್ಟ್ ಗೊಬ್ಬರದೊಂದಿಗೆ ಸರಿಯಾಗಿ ಮಿಶ್ರವಾಗಿ, ಅದರಿಂದ ಎರಡಕ್ಕೂ ಒಂದು ರೀತಿಯ ಸಮತೋಲ ಉಂಟಾಗಬೇಕು. ಕೆಲವು ವರ್ಷಗಳ ಕೆಳಗೆ ಪಂಡಿತ್‌ಜೀ ನನ್ನನ್ನು ಜಪಾನಿಗೆ ಕಳಿಸಿ, ಅಲ್ಲಿನ ಕೃಷಿ ಕ್ರಮಗಳನ್ನು ಅರಿತುಕೊಂಡು ಬರುವುದಕ್ಕೂ ಅಲ್ಲಿನ ಉತ್ಪನ್ನ ನಮ್ಮ ಎಕರೆಯೊಂದರ ಮೂರರಷ್ಟು ಹೆಚ್ಚಾಗಲು ಕಾರಣವನ್ನು ತಿಳಿದು ಕೊಳ್ಳುವುದಕ್ಕೂ ಅಜ್ಞಾಪಿಸಿದರು. ನಾನು ಜಪಾನಿನ ಹಳ್ಳಿಗಳಲ್ಲಿ ಸಂಚಾರಮಾಡಿ ನೋಡಿದಾಗ, ಅಲ್ಲಿನ ರೈತರು ಕೊಟ್ಟಿಗೆ ಗೊಬ್ಬರವನ್ನು ಕಾಂಪೋಸ್ಟ್ ಗೊಬ್ಬರವನ್ನೂ ಉಪಯೋಗಿಸುವುದು ಕಂಡು ಬಂದಿತು. ಇವು ರಾಸಾಯನಿಕ ಗೊಬ್ಬರದೊಂದಿಗೆ ಹೆಚ್ಚು ಪ್ರಮಾಣದಲ್ಲಿ ಮಿಶ್ರವಾಗಿರುತ್ತವೆ. ಜಪಾನಿನ ಹಳ್ಳಿಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಒಂದು ಗಾದೆಯೂ ಪ್ರಚಲಿತವಿದೆ. "ರಾಸಾಯನಿಕ ಗೊಬ್ಬರವನ್ನು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸುವುದು ಇಂದು (ತಂದೆ ತಾಯಿಗಳಿಗೆ) ಒಳ್ಳೆಯದಾದರೂ ಉತ್ತರೋತ್ತರ (ಮಕ್ಕಳಿಗೆ) ಕೆಡಕನ್ನು ಮಾಡುತ್ತದೆ." ಇದಕ್ಕೆ ಕಾರಣವನ್ನು ಪ್ರಸ್ತಾಪಿಸಿದಾಗ, ರಾಸಾಯನಿಕ ಗೊಬ್ಬರಗಳನ್ನು ಅತಿ ಪ್ರಮಾಣದಲ್ಲಿ ಉಪಯೋಗಿಸುವುದರಿಂದ ಆರಂಭದಲ್ಲಿ ಕೆಲವು ಅಧಿಕ ಬೆಳೆಬಂದರೂ ಮುಂದಿನ ವರ್ಷಗಳಲ್ಲಿ ಅದು ಭೂಮಿಯ ಸಾರವನ್ನು ಅಧಿಕ ಪ್ರಮಾಣದಲ್ಲಿ ಹೀರಿಬಿಡುವುದೆಂದೂ ತಿಳಿದು ಬಂದಿತು.

## ಪಶು ಪಾಲನೆ

ಕೃಷಿ ಸುಭದ್ರವಾಗಿ ವ್ಯವಸ್ಥಿತವಾಗಬೇಕಾದರೆ, ಪಶುಪಾಲನೆ ಪ್ರಮುಖ ಸ್ಥಾನವನ್ನು ವಹಿಸಬೇಕೆಂದು ಗಾಂಧೀಜಿ ಹೇಳುತ್ತಿದ್ದರು. ಅವರು 'ಗೋಸೇವೆ' ಗಾಗಿಯೇ ವಿವರವಾದ ಕಾರ್ಯಕ್ರಮ ನಿಯೋಜಿಸಿದ್ದರು ಆದರೆ ಈ ಕಾರ್ಯಕ್ರಮ ವ್ಯವಸ್ಥೆಯಿಂದ ಮುಂದುವರಿಯಲಿಲ್ಲ. ಇದರ ಪರಿಣಾಮವಾಗಿ ಕೆಲವರು ಗೋರಕ್ಷಣೆಯ ಹೆಸರಿನಲ್ಲಿ ರಾಜಕಾರಣವನ್ನು ಬೆಳೆಸುವಂತಾಗಿದೆ. ಜಪಾನಿನಲ್ಲಿ ಟ್ರಾಕ್ಟರುಗಳು ಮತ್ತು ವಿದ್ಯುತ್ ನೇಗಿಲುಗಳೂ ಅಧಿಕವಾಗಿ ಉಪಯೋಗದಲ್ಲಿರುವ ಕಡೆಗಳಲ್ಲಿಯೂ ರೈತರು ಕ್ರಮೇಣ ಪಶುಪಾಲನೆಯ ಕಡೆಗೆ ಒಲುತ್ತಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು, ಈ ಬದಲಾವಣೆಗೆ ಕಾರಣವನ್ನು ಪ್ರಸ್ತಾಪಿಸಿದಾಗ, ಆ ರೈತರು ಕೊಟ್ಟ ಉತ್ತರವಿದು: "ಟ್ರಾಕ್ಟರುಗಳು ನಮಗೆ ಹಾಲನ್ನು ಕೊಡುವುದಿಲ್ಲ, ಗೊಬ್ಬರವನ್ನು ಕೊಡುವುದಿಲ್ಲ." ಜಪಾನಿನ ರೈತರು ಭೂಮಿಯ ಉಳಿಮೆಗಾಗಿ ಹಸುವನ್ನೂ ಉಪಹೋಗಿಸುತ್ತಾರೆ. ಕಾಂಪೋಸ್ಟ್ ಗೊಬ್ಬರದ ಪ್ರತಿಯೊಂದು ಔನ್ಸ್ ಸಹ, ಭೂಮಿಯನ್ನು ಉತ್ತಮ ಪಡಿಸಲು ಉಪಯೋಗವಾಗುತ್ತದೆ. ಹಾಲಿನ ಕೇಂದ್ರಗಳೂ ಸಂಘಟಿತವಾಗಿ, ಹಾಲಿನ ವಿವಿಧ ಉತ್ಪನ್ನಗಳು ಸಣ್ಣ ಕೈಗಾರಿಕೆಗಳಾಗಿ ನಡೆಯುತ್ತಿವೆ.

ಆರುವರ್ಷಗಳ ಹಿಂದೆ ಭಾರತ ಸರಕಾರ ಜರ್ಮನ್ ತಜ್ಞರ ಒಂದು ತಂಡವನ್ನು ಆಹ್ವಾನಿಸಿ, ಸುಧಾರಿತ ವ್ಯವಸಾಯದ ಸಾಧನಗಳನ್ನು ಉಪಯೋಗಿಸುವ ಬಗೆಗೆ ವಿಚಾರಬದ್ಧವಾದ ಯೋಜನೆಯನ್ನು ಸಲಹೆ ಮಾಡಲು ಅಜ್ಞಾಪಿಸಿತು. ತಂಡದ ತಜ್ಞರು ದೇಶದಾದ್ಯಂತ ಸಂಚಾರ ಮಾಡಿ, ಕೊನೆಗೆ ಯೋಜನಾ ಆಯೋಗದೊಂದಿಗೆ ಚರ್ಚೆ ನಡೆಸಿದರು ತಂಡದ ನಾಯಕ ನಮಗೆ ಖಂಡ ತುಂಡವಾಗಿ ತಿಳಿಸಿದ. "ಭಾರತಕ್ಕೆ ಯಾವ ಸುಧಾರಿತ ವ್ಯವಸಾಯ ಸಾಧನಗಳ ಬಳಕೆಯನ್ನು ನಾವು ಸಲಹೆ ಮಾಡಲಾರೆವು. ನಿಮ್ಮ ನಿರ್ಬಲ ಪಶುಗಳು ಯಾವುದೇ ಬಗೆಯ ಭಾರವಾದ ಸಾಧನಗಳನ್ನು ಎಳೆಯಲಾರವು. ಆದುದ



ರಿಂದ, ಸುಧಾರಿತ ವ್ಯವಸಾಯ ಉಪಕರಣಗಳನ್ನು ಉಪಯೋಗಿಸಲು ಯೋಚಿಸುವುದಕ್ಕೆ ಮುಂಚೆ ಭಾರತವು ವೈಜ್ಞಾನಿಕ ರೀತಿಯ ಪಶು ಸಂಗೋಪನ ಕಾರ್ಯವನ್ನು ಆಚರಣೆಗೆ ತರಬೇಕು."

ಈ ನಿದರ್ಶನಗಳು, ನಮ್ಮ ಗ್ರಾಮೀಣ ಅರ್ಥ ವ್ಯವಸ್ಥೆಯ ಮೂಲವಾದ ಗೋರಕ್ಷಣೆಯ ಅಭಿವೃದ್ಧಿಗೆ ಕಾರಣವನ್ನು ತೋರಿಸುತ್ತವೆ. ಗೋರಕ್ಷಣೆಯ ಬಗೆಗೆ ಜನದಲ್ಲಿರುವ ಭಾವವನ್ನು ಈ ಉದ್ಯಮಕ್ಕೆ ಕ್ರಿಯಾತ್ಮಕವಾಗಿ ಉಪಯೋಗಿಸಿಕೊಳ್ಳಬೇಕು.

## ಯಂತ್ರದ ಬಗೆಗೆ ಗಾಂಧೀ ದೃಷ್ಟಿ

ವ್ಯವಸಾಯದಲ್ಲಿಯೂ, ಕೈಗಾರಿಕೆಯಲ್ಲಿಯೂ ಯಂತ್ರಗಳ ಉಪಯೋಗಕ್ಕೆ ಗಾಧೀ ವಿರೋಧವಾಗಿದ್ದರೆಂಬ ಭಾವನೆ ಸಾಮಾನ್ಯವಾಗಿ ಹರಡಿ ಹೋಗಿದೆ. ಇದು ಒಂದು ತಪ್ಪು ಭಾವನೆ. ಗಾಂಧೀಜಿ ಅರ್ಥ ವಿಚಾರದ ಬಗೆಗೆ ಅನಾವಶ್ಯಕ ತಪ್ಪು ಕಲ್ಪನೆಗೆ ಕಾರಣವಾಗಿದೆ. ಬಾಪೂ ಹೀಗೆ ಸ್ಪಷ್ಟವಾಗಿ ನುಡಿದಿದ್ದರು: "ಎಲ್ಲರ ಸೌಕರ್ಯಕ್ಕಾಗಿ ನಿರ್ಮಾಣವಾದ ಪ್ರತಿಯೊಂದು ಯಂತ್ರವನ್ನೂ ನಾನು ಸ್ವಾಗತಿಸುತ್ತೇನೆ. ಗುಡಿಸಲುಗಳಲ್ಲಿ ವಾಸಿಸುವ ಕೋಟಿ ಕೋಟಿ ಜನರ ಜೀವನ ಭಾರವನ್ನು ಇಳಿಸುವ ಪ್ರತಿಯೊಂದು ಯಂತ್ರವನ್ನು ನಾನು ಸ್ವಾಗತಿಸುತ್ತೇನೆ. ಗಾಂಧೀಜಿ ನಿಜವಾಗಿಯೂ ವಿರೋಧಿಸಿದ್ದುದು- "ಯಂತ್ರಗಳಿಗಾಗಿ ಹುಚ್ಚು ಬಯಕೆಯನ್ನು, ಅವುಗಳ ತಾರತಮ್ಯವಿಲ್ಲದ ಹೆಚ್ಚಳಿಕೆಯನ್ನು." ಅವರು ಹೀಗೆ ಹೇಳಿದ್ದಾರೆ: "ಕೆಲಸ ಹೆಚ್ಚಾಗಿದ್ದು, ಮಾಡುವ ಕೈಗಳು ತೀರ ಕಡಮೆಯಿದ್ದಾಗ ಯಂತ್ರೀಕರಣ ಒಳ್ಳೆಯದೇ. ಕೊಡಬೇಕಾದ ಕೆಲಸಕ್ಕಿಂತ ಹೆಚ್ಚಾಗಿ ಕೈಗಳಿರುವಾಗ ಭಾರತದಲ್ಲಿರುವಂತೆ ಅದು ಕೆಡುಕನ್ನು ಮಾಡುತ್ತದೆ."

ಅಮೇರಿಕಾದಂಥ ಅತ್ಯಂತ ಅಭಿವೃದ್ಧಿ ಹೊಂದಿದ ದೇಶದಲ್ಲಿಯೂ ೪೦ ಮಿಲಿಯ ಜನರು ಬಡವರಾಗಿದ್ದಾರೆಂಬುದು ಗಮನಾರ್ಹವಾದ ಅಂಶ ಆದೇಶಪಲ್ಲಿ. "ನಿರುದ್ಯೋಗವು ಪ್ರತಿ ೨೦ ಮಂದಿಯಲ್ಲಿ ಒಬ್ಬನನ್ನು

ಕಾಡುತ್ತಿದೆ; ಪಟ್ಟಣದ ನೀಗ್ರೋ ವಸತಿಗಳಲ್ಲಿಯೂ ಮತ್ತು ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲಿಯೂ ಅದು ಹೆಚ್ಚಾಗಿ ಕಂಡುಬರುತ್ತದೆ. ಎಲ್ಲವನ್ನೂ ಯಂತ್ರಗಳಿಂದಲೇ ಮಾಡಿಸಬೇಕೆಂಬ ಉತ್ಸಾಹ, ಆರ್ಥಿಕಸ್ಥಿತಿಯನ್ನು ಹದಗೆಡಿಸುತ್ತದೆ. ಪ್ರೊ. ಗಾಲ್ ಬ್ರೈಲ್ ಅಮೆರಿಕಾದ ಬಡತನವನ್ನು ಕುರಿತು 'ಅದು ಕಿರಿ ಕಿರಿಯನ್ನಷ್ಟೇ ಅಲ್ಲ, ಅಪಮಾನವನ್ನೂ ತಂದಿದೆ' ಎಂದಿದ್ದಾರೆ. ಸೋವಿಯತ್ ಒಕ್ಕೂಟದಲ್ಲಿಯೂ ನಿರುದ್ಯೋಗದ ಸಮಸ್ಯೆ, ವಿಶೇಷ ರೀತಿಯ ಯಂತ್ರೀಕರಣದಿಂದ, ದೊಡ್ಡ ಪ್ರಮಾಣಕ್ಕೆ ಏರಿದೆ. "ಆದುದರಿಂದ ವ್ಯವಸಾಯಕ್ಕೆ ಪೂರಕವಾಗಿ ಹೊಂದಿಕೊಳ್ಳುವಂಥ ಉಪಕಸುಬುಗಳನ್ನೂ ಕೈಗಾರಿಕೆಗಳನ್ನೂ ಬೆಳೆಸುವ ಪ್ರಯತ್ನ" ಅಲ್ಲಿ ವ್ಯವಸ್ಥಿತವಾಗಿ ನಡೆದಿದೆ. ಪ್ರೊ. ಅರ್ಥರ್ ಲೂಯಿ ಆಧುನಿಕ ರೀತಿಯ ಹೇರಳ ಬಂಡವಾಳದ ಉದ್ಯಮಗಳನ್ನು ತೆಗಳಿದ್ದಾರೆ. ಅಲ್ಲದೆ ಕಟ್ಟಡಗಳ ಮೇಲೆ ಹೇರಳವಾಗಿ–ಅತ್ಯಂತ ಆಧುನಿಕ ತಂತ್ರಜ್ಞಾನದ ಬಳಕೆಗಾಗಿ–ವೆಚ್ಚಮಾಡುವುದನ್ನು ಅಲ್ಲಗಳೆದಿದ್ದಾರೆ. ಸಣ್ಣ ಪ್ರಮಾಣದ ಘಟಕಗಳು ಉತ್ತಮವೆಂದಿದ್ದಾರೆ.

ಆಧುನಿಕ ಯಂತ್ರೀಕರಣವು ಉತ್ತರೋತ್ತರ ಅಗಾಧ ಉದ್ಯೋಗಗಳನ್ನು ಕಲ್ಪಿಸಿಕೊಡುವುದೆಂದು ಸಾಮಾನ್ಯವಾಗಿ ನಂಬಿ ವಾದಿಸಲಾಗುತ್ತಿದೆ. ಇದನ್ನು ಪ್ರೊ. ಮಿರ್‌ಡಾಲ್ ಅಲ್ಲಗಳೆದಿದ್ದಾರೆ, ದೊಡ್ಡ ಪ್ರಮಾಣದ ಕೈಗಾರಿಕೆಗಳು ಉದ್ಯೋಗಗಳನ್ನೂ ಹೆಚ್ಚಿಸುವುದಕ್ಕೆ ಪ್ರತಿಯಾಗಿ ಕೆಟ್ಟ ಪರಿಣಾಮಗಳನ್ನೇ ಮಾಡಿವೆ ಎನ್ನುತ್ತಾರೆ. "ಆಧುನಿಕ ಯಂತ್ರೋದ್ಯಮದಲ್ಲಿ ಕಾರ್ಮಿಕರಿಗೆ ಸ್ವಲ್ಪ ಹೆಚ್ಚಿನ ಬೇಡಿಕೆ ಕಂಡುಬಂದರೆ ಮುಂದೆ ಅದರ ಇಳುವರಿ, ಸಾಂಪ್ರದಾಯಿಕ ಉತ್ಪನ್ನ ವಿಧಾನಕಿಂತ ಹೆಚ್ಚಾಗುವ ಅಪಾಯವಿದೆ," ಎನ್ನುತ್ತಾರೆ. ಮುಂದುವರಿಸಿ ಅವರು ಹೇಳುವ ಮಾತು ಬಹಳ ವಿಚಾರರ್ಹವಾದುದು: "ಗಾಂಧೀಜಿಯವರ ಸಾಮಾಜಿಕ ಮತ್ತು ಆರ್ಥಿಕ ತತ್ವಗಳಲ್ಲಿ ವೈಚಾರಿಕ ಶಕ್ತಿಯಿದೆ. ಯುದ್ಧೋತ್ತರ ಕಾಲದಲ್ಲಿ ಗ್ರಾಮೋದ್ಯೋಗಗಳ ಬೆಳವಣಿಗೆಗೆ ನಿಯೋಜಿತ ಕಾರ್ಯಕ್ರಮದಲ್ಲಿ ಅಭಿ

ವೃದ್ಧಿಯ ಉದ್ದೇಶವಿದೆ, ವ್ಯವಹಾರ ಬದ್ಧವಾದ ಯೋಜನಾರೀತಿಯಿದೆ."

ಪ್ರತಿಯೊಂದು ದೇಶವೂ ತನ್ನ ಸಮಸ್ಯೆಗಳನ್ನು ತನಗೆ ವಿಶಿಷ್ಟವಾದ ರೀತಿಯಲ್ಲಿ ಪರಿಹರಿಸಿಕೊಳ್ಳಬೇಕು. ಅಗಾಧವಾಗಿ ಬೆಳೆದ ದೇಶಗಳ ಆರ್ಥಿಕ ಯೋಜನಾ ತಂತ್ರಗಳನ್ನು ಸುಮ್ಮನೆ ಅನುಕರಿಸುವುದು ಯುಕ್ತವಲ್ಲ. ಇತರರ ಅನುಭವದಿಂದ ಕಲಿತು, ಸದಾ ನಮ್ಮ ಉತ್ಪಾದನಾ ತಂತ್ರಗಳನ್ನು ಉತ್ತಮ ಪಡಿಸಿಕೊಳ್ಳಲು ಸಿದ್ಧವಿದ್ದರೂ, ಯಂತ್ರಗಳು ಮಾತ್ರ ಪವಾಡ ಮಾಡಬಲ್ಲವು ಎಂಬ ಹುಚ್ಚು ಭ್ರಮೆಗೆ ನಾವು ತುತ್ತಾಗಬಾರದು. ಯಂತ್ರವು ಮಾನವನ ಆಶೋತ್ತರಗಳನ್ನೂ ಈಡೇರಿಸುವಂತಾಗಬೇಕು; ಮಾನವ ಆ ಯಂತ್ರ ಚಕ್ರದ ಒಂದು ಭಾಗವಾಗುವಂತೆ ಬಿಡಬಾರದು. ಅಭಿವೃದ್ಧಿ ಕೊರತೆ ಇರುವ ದೇಶಗಳಲ್ಲಿ 'ಮಧ್ಯಮ ರೀತಿಯ ತಂತ್ರ ವಿಧಾನಗಳನ್ನು ಬಳಸಿಕೊಂಡು ಯಂತ್ರಗಳನ್ನು ರೂಢಿಸಿಕೊಳ್ಳುವ ಪ್ರಯತ್ನಗಳು ಆಚರಣೆಗೆ ಬರುತ್ತಿವೆ; ವಿಶಿಷ್ಟ ರೀತಿಯ ಅಗತ್ಯಕ್ಕನುಗುಣವಾಗಿ, ನಮ್ಮ ದೇಶದ ಲಕ್ಷಾಂತರ ಜನರ ದೈಹಿಕ ಶ್ರಮವನ್ನು ಅಗಾಧ ರಚನಾತ್ಮಕ ಶಕ್ತಿಯನ್ನಾಗಿ ಪರಿವರ್ತಿಸಿದರೆ–ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ-ಪ್ರಜಾಸತ್ತಾತ್ಮಕ ವಿಧಾನದಲ್ಲಿ, ಅಮೆರಿಕಾದ ಪ್ರಸಿದ್ಧ ಸಮಾಜ ಶಾಸ್ತ್ರಜ್ಞ ಲೂಯಿ ಮಮ್ ಫರ್ಡ್ ಒಂದೆಡೆ ಹೇಳಿರುವ, " ಮೆಗಾ ಮೆಷಿನ್ " ಅಥವಾ " ಕಾರ್ಮಿಕ ಯಂತ್ರ " ವನ್ನೇ ರಚಿಸಿ ಬಿಡಬಹುದು. ಸ್ವಯಂ ಪ್ರೇರಿತ ಸಂಘಟಿತ ಕಾರ್ಮಿಕ ಶಕ್ತಿ, ಭಾರತದಂಥ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ಅಪರಿಮಿತವಾದುದು.

ಪಾಶ್ಚಾತ್ಯ ದೇಶಗಳಲ್ಲಿ ಕೆಲವರು ಆಧುನಿಕ ವಿಚಾರವಂತರು, ತಮ್ಮ ದೇಶಗಳ ಆರ್ಥಿಕ ಸ್ಥಿತಿಯನ್ನು-"ವಸ್ತು ಸಮೃದ್ಧಿಯ ದುರಂತ" ವೆಂದು ಕರೆದಿದ್ದಾರೆ. ಆಧುನಿಕ ದೊಡ್ಡ ಪ್ರಮಾಣದ ಔದ್ಯೋಗಿಕ ಯಂತ್ರೀಕೃತ ಸಂಸ್ಥೆಗಳು ಕೆಲವು ರಾಕ್ಷಸನಂತಹ ಔದ್ಯಮಿಕ ಸಂಸ್ಥೆಗಳಿಗೆ ಎಡೆಗೊಟ್ಟಿವೆ. ಇವು ರಾಜ್ಯವನ್ನೂ ತಾವು ಹೇಳಿದಂತೆ ನಡೆಯುವ ಸ್ಥಿತಿಗೆ ತಂದಿವೆ. ಇಂಥವುಗಳು–ವಿಶೇಷ ತಜ್ಞರು, ನಿಯೋಜಕರು, ತಂತ್ರಜ್ಞರು ಇವರಿಂದ ಕೂಡಿ–" ಟೆಕ್ನೋಸ್ಟ್ರಕ್ಚರ್ " "ತಂತ್ರ ಪ್ರಧಾನ ಸಂಸ್ಥೆಗಳಾಗಿವೆ" ಎನ್ನುತ್ತಾರೆ ಪ್ರೊ. ಗಾಲ್ ಬ್ರೈತ್. ಇಂಥ ಔದ್ಯೋಗಿಕ ವ್ಯವಸ್ಥೆಯ ಅಪಾಯಗಳಿಂದ ತಪ್ಪಿಸಿಕೊಳ್ಳಬೇಕಾದರೆ, ಹೊಸ ಉದ್ಯಮಗಳು " ಇತರ ಗುರಿಗಳಿಂದ ಕೂಡಿರಬೇಕು " ಎಂದರೆ, ಆ ಗುರಿಗಳು "ಸಮಾಜದ ಉದಾತ್ತ ಉದ್ದೇಶಗಳಿಗ ಸಹಾನುಭೂತಿಯುಳ್ಳವಾಗಿರಬೇಕು" ಎನ್ನುತ್ತಾರೆ ಅವರು. ಗಾಂಧೀಜಿಯ ಆದರ್ಶಗಳು ಮತ್ತು ಕಾರ್ಯಕ್ರಮಗಳಿಗನುಗುಣವಾಗಿ, " ಆ ಗುರಿಗಳು" ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕವೇ ಆಗಿರಬೇಕು.

## ಸ್ವದೇಶೀ ಭಾವನೆ

ಇದೆಲ್ಲಕ್ಕಿಂತಲೂ ಹೆಚ್ಚಾಗಿ, ಗಾಂಧೀಜಿ ನಮಗೆ ಕಲಿಸಿದ ಸ್ವದೇಶೀ ಭಾವನೆ, ಮೂಲತಃ ಆತ್ಮಗೌರವ ಮತ್ತು ಸ್ವಾವಲಂಬನೆಗಳಿಂದ ಕೂಡಿದೆ. ಇತರರ ಮೇಲೆ ಅತಿಯಾಗಿ ಅವಲಂಬನೆ ಹೊಂದದೆ, ನಮ್ಮ ಕಾಲಿನ ಮೇಲೆ ನಾವೇ ನಿಂತುಕೊಳ್ಳುವುದನ್ನು ಅವರು ಬಯಸಿದರು. ಇಂದು, ದೂರದೃಷ್ಟವಶಾತ್ ನಮ್ಮ ರಾಷ್ಟ್ರ ಜೀವನದಲ್ಲಿ ಸ್ವದೇಶೀ ಭಾವನೆ ಕಾಣದಂತಾಗಿದೆ. ಯೋಜನಾಬದ್ಧ ಅರ್ಥಿಕ ಅಭಿವೃದ್ಧಿ ಎಂಬ ಹೆಸರಿನಲ್ಲಿ ಜನ ಎಲ್ಲವನ್ನೂ ರಾಜ್ಯದಿಂದಲೇ ಬಯಸುತ್ತಾರೆ; ಸ್ವಯಂ ಕ್ರಿಯೆ ನಿಧಾನವಾಗಿ ಬತ್ತಿಹೋಗುತ್ತದೆ. ಆರ್ಥಿಕ ಯೋಜನೆಗಳಿಗಾಗಿ ವಿದೇಶೀ ನೆರವನ್ನು ಒಂದು ಮಿತಿಯಲ್ಲಿ. ತಾಂತ್ರಿಕ ವಿದ್ಯಾಜ್ಞಾನಕ್ಕಾಗಿ ಹೊಂದುವುದು ಅಪೇಕ್ಷಿತವಾದರೂ, ಹೊರಗಿನ ನೆರವಿನ ಮೇಲೆ ಅತಿಯಾಗಿ ಅವಲಂಬಿಸುವುದು ನಮ್ಮ ಸಾಮರ್ಥ್ಯವನ್ನೇ ಇಂಗಿಸಿಬಿಡುತ್ತದೆ; ಪ್ರಧಾನವಾಗಿ ಅಗತ್ಯವಾದ ಸ್ವಾವಲಂಬನೆಯೇ ಇಲ್ಲವಾಗುತ್ತದೆ. ಯೋಜನಾ ಆಯೋಗವು ಇದನ್ನು ಅರ್ಥ ಮಾಡಿಕೊಂಡು, " ನಾಲ್ಕನೆಯ ಯೋಜನೆಯ ಒಂದು ಪ್ರಧಾನಗುರಿ, ಆದಷ್ಟು ಬೇಗ ಸ್ವಾವಲಂಬನೆಯ ಕಡೆಗೆ ಹೋಗಬೇಕೆಂದು" ಸಲಹೆ ಮಾಡಿರುವುದನ್ನು ನಾನು ಹರ್ಷದಿಂದ ಸ್ವಾಗತಿಸುತ್ತೇನೆ.



## ಧರ್ಮದರ್ಶೀ ಸಿದ್ಧಾಂತ

ಧರ್ಮ ದರ್ಶೀ ಸಿದ್ಧಾಂತವನ್ನು ಕುರಿತು ಸಂಕ್ಷೇಪವಾಗಿಯಾದರೂ, ಹೇಳದೆ ಹೋದರೆ ಗಾಂಧೀ ಅರ್ಥ ವಿಚಾರ ಪೂರ್ಣವಾಗಲಾರದು. ಬಂಡವಾಳಗಾರರು ಸ್ವಯಂಪ್ರೇರಿತರಾಗಿ, ಶಾಸನದ ಬಲತ್ಕಾರವಿಲ್ಲದೆ, ನಿಜವಾದ ಧರ್ಮದರ್ಶಿಗಳಾಗಿ ವರ್ತಿಸಲು ಸಾಧ್ಯವಿಲ್ಲವೆಂಬ ಆಕ್ಷೇಪವಿದೆ. ಹಾಗೆಯೇ ಗಾಂಧೀಜಿ ತಮ್ಮ ಧರ್ಮದರ್ಶೀ ಸಿದ್ಧಾಂತವನ್ನು ಮುಂದಿಟ್ಟು, ಆರ್ಥಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನು ಹಿಂದಕ್ಕೆ ಹಾಕಿದರೆಂದು ಆಪಾದನೆ ಬಂದಿದೆ. ಬಾಪೂ ಆಗಾಖಾನ್ ಅರಮನೆಯಲ್ಲಿ ಬಂಧಿತರಾಗಿದ್ದಾಗ ಕಾರ್ಯದರ್ಶಿ ಪ್ಯಾರೇಲಾಲ್ ರೊಡನೆ ಈ ವಿಚಾರವನ್ನೂ ದೀರ್ಘವಾಗಿ ಚರ್ಚಿಸಿದ್ದರು. ಅವರು ಒಪ್ಪಿದಂತೆ "ಸಂಪತ್ತಿನ ಒಡೆತನ ಮತ್ತು ಉಪಯೋಗಗಳ ಬಗೆಗೆ ಶಾಸನ ನಿಯಂತ್ರಣವನ್ನು ಧರ್ಮದರ್ಶಿ ಸಿದ್ಧಾಂತ ಬಿಟ್ಟಿಲ್ಲ." ರಾಜ್ಯ ನಿಯಂತ್ರಿತ ಧರ್ಮದರ್ಶಿತ್ವದಲ್ಲಿ, ವ್ಯಕ್ತಿ ಸಮಾಜದ ಹಿತವನ್ನು ಕಡೆಗಣಿಸಿ ತನ್ನ ಸ್ವಾರ್ಥಕ್ಕಾಗಿ ಸಂಪತ್ತನ್ನು ಹೊಂದುವುದಕ್ಕೂ ಅದನ್ನು ಉಪಯೋಗಿಸುವುಕ್ಕೂ ಸ್ವತಂತ್ರನಲ್ಲ," ಧನವಂತರು ತಮ್ಮನ್ನು ಪರಿವರ್ತನೆ ಮಾಡಿಕೊಳ್ಳುವುದಕ್ಕಾಗಿ ಗಾಂಧೀಜಿ ಒಂದು ಅವಕಾಶವನ್ನು ನೀಡಲು ಅಪೇಕ್ಷಿಸಿದ್ದರು ಅಷ್ಟೆ, ಮಾನವಸ್ವಭಾವ ಎಂದಿಗೂ ಪರಿವರ್ತನೆ ಹೊಂದದೆ ಇರುವುದಲ್ಲವೆಂದು ಗೂಢವಾಗಿ ಅವರು ನಂಬಿದ್ದರು. " ಸಮಾಜದ ಅಭ್ಯುದಯಕ್ಕಾಗಿ ಅದರಿಂದ ಅನುಮತಿಸಲ್ಪಟ್ಟಷ್ಟು ಹೊರತಾಗಿ ಬೇರೆ ವೈಯುಕ್ತಿಕ ಆಸ್ತಿಯ ಒಡೆತನದ ಹಕ್ಕನ್ನು " ಗಾಂಧೀಜಿ ಅಂಗೀಕರಿಸಿರಲಿಲ್ಲ.

ಸ್ವಾತಂತ್ರ್ಯ ಪ್ರಾಪ್ತವಾದ ಮೇಲೆ, ಧರ್ಮದರ್ಶೀ ಸಿದ್ಧಾಂತದ ದಿಸೆಯಲ್ಲಿ, ವಿನೋಬಾಜಿಯ ಗ್ರಾಮದಾನ ಚಳುವಳಿ ಒಂದು ಪ್ರಮುಖವಾದ ಹೆಜ್ಜೆ. ಈಚಿನ ಕೆಲವು ವರ್ಷಗಳಲ್ಲಿ ಅದು ಗಮನಾರ್ಹವಾಗಿ ಬೆಳೆದಿದೆ. ಈ ಚಳುವಳಿಯ ಪ್ರಕಾರ, ಗ್ರಾಮದ ಭೂಮಾಲಿಕರಲ್ಲಿ ಕನಿಷ್ಠ ಶೇ ೭೫ರಷ್ಟು ಭೂಮಿ, ಗ್ರಾಮ ಸಮಾಜದ ಒಡೆತನಕ್ಕೆ ಬಿಡಲ್ಪಡಬೇಕು; ವ್ಯಕ್ತಿಯ ಆಸ್ತಿಯಲ್ಲಿ ಇಪ್ಪತ್ತನೆಯ ಒಂದು ಭಾಗ ಗ್ರಾಮದ ಭೂ ಹೀನರಿಗಾಗಿ ಹಂಚಿಕೆಗೆ ದಾನವಾಗಬೇಕು. ಉಳಿದ ಭೂಮಿ, ಗ್ರಾಮ ಸಭೆಯ ಪರವಾಗಿ ಕೃಷಿ ಮಾಡಬೇಕು; ಗ್ರಾಮ ಸಭೆಯ ಸ್ಪಷ್ಟ ಅನುಮತಿಯಿಲ್ಲದೆ ಕ್ರಯ, ಆಧಾರ, ಭೋಗ್ಯ ಇತ್ಯಾದಿ ಪರಭಾರೆಗೆ ಅವಕಾಶವಿಲ್ಲ. ಗ್ರಾಮಸ್ಥರೂ ತಮ್ಮ ತಮ್ಮ ವಾರ್ಷಿಕ ವರಮಾನದಲ್ಲಿ ಮೂವತ್ತನೆಯ ಒಂದು ಭಾಗವನ್ನು "ಗ್ರಾಮಾಭಿವೃದ್ಧಿ ನಿಧಿಗೆ" ಮೀಸಲಿಡಬೇಕು. ಈ ವರೆಗೆ ಸುಮಾರು ೬೦೦೦೦ ಗ್ರಾಮಗಳು, ಕ್ಷೇತ್ರಗಳು ಮತ್ತು ಜಿಲ್ಲೆಗಳನ್ನೊಳಗೊಂಡು, ಈ ಬಗೆಯ ಸಾಮೂಹಿಕ ಪದ್ಧತಿಯನ್ನು ಅಂಗೀಕರಿಸಿವೆ; ಸ್ವಾವಲಂಬನೆ, ಧರ್ಮದರ್ಶೀ ಭಾವನೆ, ಸಹಕಾರ ಉದ್ಯಮ ಇವುಗಳು ಬೆಳೆಯುತ್ತಿವೆ.

ಪ್ರೊ. ಡಿ. ಆರ್. ಗಾಡ್ಗಿಲ್ ಹೇಳಿರುವಂತೆ-"ಗ್ರಾಮದಾನ ಚಳುವಳಿ ಒಂದು ಅಭೂತಪೂರ್ವ ಚಳುವಳಿ. ಇದರ ಸಂಭವಗಳೂ ಸಾಧ್ಯತೆಗಳೂ ಗಹನವಾದವು." "ಪೂರ್ವದೇಶದಿಂದ ಬಂದಿರುವ ಮಹಾ ಸೃಷ್ಟ್ಯಾತ್ಮಕ ವಿಚಾರ" ಎಂದಿದ್ದಾನೆ ಲೂಯಿ ಫಿಷರ್. ಆಚಾರ್ಯಾ ವಿನೋಬಾ ಗ್ರಾಮದಾನ ಚಳುವಳಿಯನ್ನು, ಆಗಾಗ, "ರಕ್ಷಣಾ ಉಪಾಯ" ಎಂದು ಕರೆದಿದ್ದಾರೆ. ಜನತೆ ಸ್ವಾವಲಂಬನೆಯುಳ್ಳವರಾಗಿ, ಸಮಾಜದ ಬಗೆಗೆ ತಮ್ಮ ಕರ್ತವ್ಯವನ್ನು ಅರಿತು ಕೊಳ್ಳುವರಾದ್ದರಿಂದ, ಪ್ರಜಾಸತ್ತೆಯ ತಳಹದಿಯೂ ಬಲಗೊಳ್ಳುತ್ತದೆ.

ಈ ಮಹಾ ಚಳುವಳಿಯ ಪ್ರಭಾವ ರಾಷ್ಟ್ರ ಜೀವನದ ಮೇಲೆ ಎದ್ದು ಕಾಣುವಷ್ಟು ಆಗದಿರುವುದು ಶೋಚನೀಯ. ಈ ಅಹಿಂಸಾತ್ಮಕ ಕ್ರಾಂತಿಯನ್ನು ಅಲ್ಲಿ ಇಲ್ಲಿ ಸುಮ್ಮನೆ ತೆಳುವಾಗಿ ಹರಡುವುದಕ್ಕಿಂತ, ಕೆಲವು ಆರಿಸಿದ ಕ್ಷೇತ್ರಗಳಲ್ಲಿಯೂ ಜಿಲ್ಲೆಗಳಲ್ಲಿಯೂ ರಚನಾತ್ಮಕವಾಗಿ ಸಘನ ಕ್ರಿಯೆ ಮಾಡುವುದರಿಂದ ಉತ್ತಮವಾದೀತು. ಈಗಲೂ ಸರಕಾರ ಮತ್ತು ಖಾಸಗಿ ಸಂಸ್ಥೆಗಳು ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಒಂದುಗೂಡಿಸಿ, ಗಾಂಧೀ ಮಾರ್ಗದ ಸಾಮಾಜಿಕ ಆರ್ಥಿಕ ಪುನರ್ವ್ಯವಸ್ಥೆಯನ್ನು ನೂತನ ರೀತಿಯಲ್ಲಿ ರೂಪಿಸಬಹುದು.

ಕಡೆಯದಾಗಿ, ಗಾಂಧೀಜಿಗೆ ಮಾನವನೇ ಪರಮ ಗಣ್ಯ; ಜೀವನದ ನೈತಿಕ ಮೂಲ್ಯಗಳಿಗೆ ವಿರುದ್ಧವಾಗಿ

ಹೋದುದೆಲ್ಲವೂ ಅವರಿಗೆ ತಿರಸ್ಕೃತವಾಗಿತ್ತು. "ಧರ್ಮ ರಹಿತ ರಾಜಕಾರಣ ಕಶ್ಮಲ" ಎಂದು ಅವರು ಎಷ್ಟೋಸಲ ಘೋಷಿಸಿದ್ದರು. ಹಾಗೆಯೇ ಬಾಪೂ ಹೀಗೆ ನಂಬಿದ್ದರು ; "ನಿಜ ಅರ್ಥವ್ಯವಸ್ಥೆ, ಪರಮ ನೈತಿಕ ಮೌಲ್ಯಗಳಿಗೆ ಎಂದಿಗೂ ವಿರೋಧವಾಗಲಾರವು. ಇದೇ ರೀತಿ ನಿಜ ಧರ್ಮವೆನಿಸಿಕೊಳ್ಳುವುದು, ಒಳ್ಳೆಯ ಅರ್ಥಸಾಧನವೂ ಆಗಬೇಕು." "ನಿಜವಾದ ಅರ್ಥ ವ್ಯವಸ್ಥೆ ಸಾಮಾಜಿಕ ನ್ಯಾಯವನ್ನು ಪ್ರತಿಪಾದಿಸುತ್ತದೆ; ಅದು ಅತ್ಯಂತ ದುರ್ಬಲರನ್ನೊಳಗೊಂಡು ಎಲ್ಲರ ಅಭ್ಯುದಯವನ್ನು ಸಮಾನವಾಗಿ ವೃದ್ಧಿಪಡಿಸುತ್ತದೆ. ಅದು ಯೋಗ್ಯ ಜೀವನಕ್ಕೆ ಅಗತ್ಯವಾದುದು," ಎಂದಿದ್ದರು ಗಾಂಧೀಜಿ.

ಗಾಂಧೀಜಿ, ಸಾಮಾನ್ಯವಾಗಿ ಎಲ್ಲ ತಿಳಿದಿರುವ ರೀತಿಯಲ್ಲಿ ಅರ್ಥ ಶಾಸ್ತ್ರಜ್ಞರಲ್ಲದಿದ್ದರೂ, ಅವರ ಅರ್ಥ ವಿಚಾರ, ಕನಸಿನ ಹಾಗೂ ಓಬೀರಾಯನ ಕಾಲದ ವಿಷಯ ವೆನಿಸದೆ, ನಮ್ಮ ಕಾಲಕ್ಕೆ ಅತ್ಯಂತ ಹೊಂದಿ ಕೊಳ್ಳತಕ್ಕದಾಗಿಯಷ್ಟೇ ಅಲ್ಲ, ಒಂದು ದೃಷ್ಟಿಯಲ್ಲಿ, ನಮ್ಮ ಕಾಲಕ್ಕೆ ಮೀರಿದುದಾಗಿದೆ. ರೋಮಾ ರೋಲಾ ಗಾಂಧೀಜಿಯ ಸತ್ವವನ್ನು ಹೀಗೆ ಪರಿಗಣಿಸಿದರು, "ಜೀವನ ತತ್ತ್ವದ ಪರಿಪೂರ್ಣದ ಅಭಿವ್ಯಕ್ತ ಸತ್ವ ; ಅದು ಹೊಸ ಮಾನವತೆಯನ್ನು ಹೊಸ ಪಥದಲ್ಲಿ ನಡೆಸಬಲ್ಲದು." ವಿನ್‌ಸೆಂಟ್ ಷೋನ್ ಅವರನ್ನು ಹೀಗೆ ಕರೆದರು. "ಅತ್ಯಂತ ಶ್ರೇಷ್ಠ, ವಿವೇಕದ ಮಾನವ ; ನಮ್ಮ ಕಾಲದಲ್ಲಿ ಅವರಿಗೆ ಸಾಟಿ ಯಾದವರು ಇಲ್ಲ." ಊಥಾ ಹೀಗೆ ನುಡಿದಿದ್ದಾರೆ. "ಗಾಂಧೀ ದರ್ಶನದ ಅರ್ಥ ಮತ್ತು ಮಹತ್ವ ಅವರ ದೇಶ-ಕಾಲ ಎರಡನ್ನು ಮೀರಿ ನಿಲ್ಲುವಂಥದು." ಪ್ರೊ. ಐನ್‌ಸ್ಟೈನ್ ಮಹಾತ್ಮನ ಬಗೆಗೆ ಹೀಗೆ ಉದ್ಧರಿಸಿದರು ; "ಪವಾಡ ಪುರುಷ. ಶತಮಾನಗಳು ಕಳೆದ ಮೇಲೆ, ಇಂಥ ವ್ಯಕ್ತಿ ರಕ್ತ ಮಾಂಸಗಳಿಂದ ವಾಸ್ತವಿಕವಾಗಿ ಪೃಥ್ವಿ ಯಲ್ಲಿ ಬುದುಕಿದ್ದನೇ ಎಂದು ಮನುಜಕುಲ ನಂಬೀತೋ ಹೇಗೋ." ನನಗಂತೂ ಎಷ್ಟೋಸಲ ಹೀಗನಿಸಿದೆ. ಅಣುಯುಗದಲ್ಲಿ ನಿಜಕ್ಕೂ ಅಣು ಶಕ್ತಿಯ ಮಾನವ ಗಾಂಧೀಜಿ ಅವರು ಜಗತ್ತು ಹೆಮ್ಮೆಗೊಳ್ಳಬಹುದಾದ ಎಂತದೇ ಭೌತ-ಶಕ್ತಿಯ ಮೇಲೂ ನೈತಿಕ ಹಾಗೂ ಆಧ್ಯಾತ್ಮಿಕ ವಿಜಯವನ್ನು ಅದ್ಭುತವಾಗಿ ಗಳಿಸುವ ಶಕ್ತಿ ಅವರು. ಭಾರತ ಭೂಮಿಯಲ್ಲಿ ಜನಿಸಿದ ಈ ಮಹಾ ಗುರುವಿನ, ಹಾಗೂ ವಿಶ್ವಕುಟುಂಬಿಯಾಗಿ ಕಡೆಗೆ ವಿಶ್ವಾತ್ಮದಲ್ಲಿ ಲೀನನಾದ ಈತನ ಕೀರ್ತಿಯನ್ನು ನೆನೆ ಯಲು ಯೋಗ್ಯರಾಗಬಲ್ಲೆವೇ?







## " ಎರಡು ಜಗಜ್ಜ್ಯೋತಿಗಳು "

# ಬುದ್ಧ ಮತ್ತು ಬಸವ

ಒಂದೇ ಮಾತಿನಲ್ಲಿ ಹೇಳುವುದಾದರೆ, ಅಶೋಕನ ನೀತಿ ತತ್ತ್ವಗಳಲ್ಲಿ ನಾವು ಒಂದು ದೊಡ್ಡ ಸಾಮ್ರಾಜ್ಯಕ್ಕೆ ಮತ್ತು ಒಂದು ಜನಪ್ರಿಯ ಮತಕ್ಕೆ ಬೇಕಾದ ಶ್ಲಾಘ ನೀಯ ಅಡಿಪಾಯವನ್ನು ಪಡೆದಿದ್ದೇವೆ. ಅಶೋಕನ ಕಾಲದಲ್ಲಿದ್ದ ಲೌಕಿಕ ಧರ್ಮವು ಸಮಷ್ಟಿಯ ಮಿತಿ ಮೀರಿದ ಧರ್ಮಶ್ರದ್ಧೆಯ ಯಥಾರ್ಥವಾದ ಮಾನವೀ ಕರಣ. ಅಶೋಕ ಸಾರಿದ ಪರಲೋಕದ ಗುರಿಯೆಂದರೆ ಸ್ವರ್ಗದಲ್ಲಿ ಮರು ಹುಟ್ಟು. ಅವನ ಒಂದೆರಡು ಶಾಸನ ಗಳು ಸಮಕಾಲೀನ ಭಾರತದಲ್ಲಿ ಸಾಮಾನ್ಯವಾಗಿ ಮಾನವ ಧರ್ಮದ ಅಂತಿಮ ಗುರಿಯೆಂದು ನಂಬುವ 'ಸ್ವರ್ಗ'ವನ್ನು ಕುರಿತು ಉಲ್ಲೇಖಿಸಿವೆ. ಸಾಲುಮರ ಗಳನ್ನು ನಡುವುದು, ಬಾವಿಗಳನ್ನು ತೋಡಿಸುವುದು, ಮಾನವ ಮತ್ತು ಪಶುಗಳಿಗಾಗಿ ಆಸ್ಪತ್ರೆಗಳನ್ನು ಕಟ್ಟಿ ಸುವುದು, ದಾನ ಧರ್ಮಗಳನ್ನು ಮಾಡುವುದು, ನೆರೆಹೊರೆಯವರಿಗೆ ಒಳಿತನ್ನು ಬಯಸುವ ನಿಯೋಗ ವನ್ನು ಕಳುಹಿಸುವುದು, ಮುಂತಾದ ಪ್ರಯೋಜನ ಜನಕಾರಿಯಾದ ಕೆಲಸಗಳನ್ನು ಮಾಡುವುದು ಪರ ಲೋಕದ ಗುರಿಗಾಗಿಯೇ ಎಂದು ಸ್ವತಃ ಅಶೋಕನೇ ಹೇಳಿದ್ದಾನೆ. ಈ ದೊರೆ ನಿರ್ವಾಣವನ್ನಾಗಲೀ ಅಥವಾ ಬೌದ್ಧ ಧರ್ಮದ ಇತರ ಹೆಚ್ಚಿನ ತತ್ತ್ವಗಳನ್ನು ಹೇಳಿಲ್ಲ ದಿರುವುದಕ್ಕೆ ನಾವು ಆಶ್ಚರ್ಯಪಡಬೇಕಾಗಿಲ್ಲ. ಏಕೆಂದರೆ ಅವು ಒಳಗುಂಪಿಗೆ ಮಾತ್ರ. ತನ್ನ ಇತಿಹಾಸದುದ್ದಕ್ಕೂ ಬೌದ್ಧಮತ ಲೌಕಿಕರಿಗೆ ಒಂದು ಬಗೆಯ ಗುರಿಯನ್ನೂ ಸನ್ಯಾಸಿಗಳಿಗೆ ಮತ್ತೊಂದು ಬಗೆಯ ಗುರಿಯನು ಹೊಂದಿದ್ದು, ಒಳಗುಂಪಿಗೆ ಒಂದು ರೀತಿಯ ಬೋಧನೆ ಗಳನ್ನೂ, ಮೂರನೆಯ ದರ್ಜೆ ಎನ್ನಿಸುವ ಸಾಮಾನ್ಯ ಗುಂಪಿಗೆ ಒಂದು ಬಗೆಯ ಬೋಧನೆಯನ್ನು ನಿರೂಪಿ ಸಿತು. ಅಶೋಕನು ಬಹು ದೊಡ್ಡ ಸಾಮ್ರಾಜ್ಯದ ಅಧಿಪತಿಯಾಗಿ ಎಲ್ಲ ವಸ್ತುಗಳು ಅಶಾಶ್ವತ ಹಾಗೂ ದುಃಖಮಯವೆಂದು ಒತ್ತಿ ಹೇಳುವುದಾಗಲೀ, ಎಲ್ಲ ಜನ ರಿಗೂ ಸನ್ಯಾಸ ವ್ರತದಿಂದ ಶಾಂತಿ, ಸಂತೋಷವನ್ನು ಪಡೆಯಿರೆಂದು ಬಲಾತ್ಕರಿಸುವುದಾಗಲೀ ಸಾಧ್ಯವಿರ ಲಿಲ್ಲ. ಬುದ್ಧನನ್ನು ಆರಾಧಿಸುವ ಮತ್ತು ಆತನ ನೈತಿಕ ಬೋಧನೆಗಳನ್ನು ಅನುಸರಿಸುವಷ್ಟು ಮಟ್ಟದಲ್ಲಿ ಅವನ ಅನುಭವಗಳನ್ನು ಅನುಕರಿಸದ ಒಂದು ಪ್ರವೃತ್ತಿ ಯನ್ನು ಅಶೋಕನ ಬೋಧನೆ ಮತ್ತು ಅವನ ಕಾಲದ ಶಿಲ್ಪಗಳಲ್ಲಿ ಸಮನಾಗಿಯೇ ಕಾಣಬಹುದು. ಬೌದ್ಧ ಧರ್ಮವು ಮೋಕ್ಷ ಹಾಗೂ ಸಹಾನುಭೂತಿಗೆ ಮಾರ್ಗ ವಾಗಿರುವಂತೆಯೇ ಪರಿಹಾಸ ಶೀಲತೆ, ಮೂಢ ಭಕ್ತಿ ಮತ್ತು ಮಾನವ ದೌರ್ಬಲ್ಯಗಳಿಗೆ ಹೊಂದಿಕೊಳ್ಳುವ ಜಾನಪದ ಧರ್ಮವೂ ಆಗಿದೆ.

ಅಶೋಕನ ಮರಣಾನಂತರ ನೂರು ವರ್ಷಗಳಲ್ಲಿ ಬೌದ್ಧಮತದಲ್ಲಿ ಅಗಾಧ ಬದಲಾವಣೆಗಳಾದವು. ಮಾನ ವನಾಗಿದ್ದ ಬುದ್ಧನು ಅತಿಮಾನವನಾಗಿ ಪರಿಗಣಿಸ ಲ್ಪಟ್ಟನು. ಅವನ ಆಧ್ಯಾತ್ಮಿಕ ಸತ್ತ್ವ ಬಹುಮಟ್ಟಿಗೆ ತಾನು ಹುಟ್ಟಿದ ಹಿಂದೂ ಧರ್ಮದಂತೆಯೇ ದೇಗುಲ ವನ್ನು ಸೇರಿತು. ಜೀವಿಯು ತನ್ನ ಸತತ ಶ್ರದ್ಧೆಯ ಸಾಧನೆಯಿಂದ ಮೋಕ್ಷವನ್ನು ಪಡೆಯುತ್ತಾನೆಂಬ ಅರ್ಹತ್ ಭಾವನೆ ಹೋಗಿ, ದಯಾಪೂರ್ಣನಾದ, ಮಾನವ ಕುಲೋದ್ಧಾರಕನಾದ ಬೋಧಿಸತ್ವನು ಈ ಪ್ರಪಂಚದ ಕಡೆ ಕರುಣೆಯಿಂದ ನೋಡುತ್ತಿದ್ದಾನೆ ಎಂಬ ಭಾವನೆಗೆ ದಾರಿ ಮಾಡಿಕೊಟ್ಟಿತು. ಹೀಗೆ ಸಾಧನೆ. ಗಿಂತ ಅನುಗ್ರಹವೇ ಹೆಚ್ಚಿನ ಮಹತ್ತ್ವವನ್ನು ಪಡೆಯಿತು ಬುದ್ಧನ ಬೋಧನೆಯಲ್ಲೇ ಆದರ್ಶದ ಭಿನ್ನತೆಯಿದ್ದು ಮತಪದ್ಧತಿಯಲ್ಲಿಯೇ ಮೊದಲನೇ ದೊಡ್ಡ ಒಡ ಕುಂಟಾಗಿರುವುದು ಸ್ಪಷ್ಟವಾಗಿದೆ. ಸಿಲೋನಿನ ಇತಿ ಹಾಸದ ಪೂರ್ವಾಚಾರಗಳನ್ನು ನಂಬುವುದಾದರೆ, ಅಶೋಕನ ಕಾಲದಲ್ಲಿ 'ಸಂಘವು' ಮುಖ್ಯವಾಗಿ ಎರಡು

ಗುಂಪುಗಳಾಗಿ ಭಾಗವಾಯಿತು. **ತೆರಾವಾದ** ಅಥವಾ **ಹಿರಿಯರ ಪಂಥ** ಮುಂದೆ ಇದೇ ಹೀನಯಾನ ಪಂಥವಾಯಿತು. ಇನ್ನೊಂದು ಹೆಚ್ಚು ಉದಾರವಾದ ಮಹಾಸಾಂಘಿಕವು ಮುಂದೆ ಮಹಾಯಾನ ಪಂಥವಾಯಿತು. ತೆರವಾದವನ್ನು ಪ್ರತಿಭಟಿಸಿ ಮಹಾಯಾನದ ಉದಯ ಅನಿವಾರ್ಯವೆಂಬ ತೃಪ್ತಿಭಾವನೆ ಇದೆ. ಕೆಲವು ಅಮೂಲ್ಯವಾದ ಕಾರ್ಯಸಿದ್ಧಿಯನ್ನು ಪಡೆದ ಆಧ್ಯಾತ್ಮಿಕವಾದಕ್ಕೆ ಈಗಾಗಲೇ ಹಕ್ಕುದಾರನಾದ ಭಾರತೀಯ ಮನಸ್ಸು ದಕ್ಷಿಣ ಪಂಥದ ನೀತಿ ಶಾಸ್ತ್ರದ ಬಗೆಗೆ ಬಹುಕಾಲ ತೃಪ್ತಿಯಿಂದಿರಲು ಸಾಧ್ಯವಿರಲಿಲ್ಲ. ಹೀನಯಾನವು ಉನ್ನತ ಗುರಿಯತ ಸಾಗುವ ಮಾನವನ ಹಾರೈಕೆಯನ್ನು ಕಡೆಗಣಿಸಿತು. ಅಲ್ಲದೆ ಮಾನವನ ಆಧ್ಯಾತ್ಮಿಕ ಮುಖವನ್ನು ದೋಷಯುಕ್ತವಾಗಿಸುತ್ತದೆ. ಬೌದ್ಧಮತವು ವಿಶಾಲವಾಗಿ ಹರಡಿ, ಹೆಚ್ಚು ಜನರಿಂದ ಅಂಗೀಕರಿಸಲ್ಪಟ್ಟ ಮೇಲೆ ಹೀನಯಾನವು ಉಪಯುಕ್ತವೆನಿಸಲಿಲ್ಲ. ಆಗ ಹೆಚ್ಚು ವಿಶಾಲಹೃದಯ ಹಾಗೂ ಕಡಿಮೆ ದೇಹದಂಡನೆಯ ಆದರ್ಶ ಧ್ಯೇಯವುಳ್ಳ ಧರ್ಮದ ಅಗತ್ಯವಿತ್ತು. ಮಹಾಯಾನವು ಅದನ್ನು ಪೂರೈಸಿತು.

ಇದೂ ಅಲ್ಲದೆ, ಮಹಾಯಾನ ಪಂಥವು ಬೋಧಿಸತ್ವನು ನೈತಿಕ ಮೇಲ್ಮೆಯನ್ನು ಪೂರ್ಣವಾಗಿ ಹೊಂದಿ ಬುದ್ಧತನನ್ನು ಪಡೆಯುವಂತಿದ್ದರೂ, ಉಳಿದವರು ಅದನ್ನು ಗಳಿಸುವ ತನಕ ಬಿಟು ಬಿಡುವ ಬಗೆಗಿನ ಅವಧಾರಣೆಯ ವಿಷಯದಲ್ಲಿ ಹೀನಯಾನದೊಡನೆ ಭಿನ್ನತೆಯನ್ನು ಹೊಂದಿದೆ. ಈ ದಿನ ಎಲ್ಲ ಮಹಾಯಾನ ಧಾರ್ಮಿಕ ಮಠಗಳಲ್ಲಿಯೂ "ಉಳಿದ ಜೀವಿಗಳು ಬೋಧಿಸತ್ವವನ್ನು ಪಡೆಯುವ ತನಕ ನಾನು ಬೋಧಿಯನ್ನು ಸಾಧಿಸಲಾರೆ" ಎಂಬ ಪ್ರತಿಜ್ಞೆಯು ಸರ್ವೇಸಾಮಾನ್ಯವಾಗಿದೆ. ಬೋಧಿಸತ್ವನನ್ನೂ ಕೂಡ ನಮ್ಮ ಧ್ವನಿಯನ್ನು ಕೇಳಿಸಿಕೊಳ್ಳುವ, ಈ ಪ್ರಪಂಚದಮೇಲೆ ದಯಾ ಪೂರ್ಣನಾಗಿ ನೋಡುವ ಅವಲೋಕಿತೇಶ್ವರನ ಮಾತೃಕೆಯೆನಿಸಿದ ದೇವಲೋಕದ ಜೀವಿ ಎಂಬ ದೃಷ್ಟಿಯಿಂದ ನೋಡಲಾಗಿದೆ. ಈ ಹೊಸ ಬದಲಾವಣೆಯೊಡನೆ ಅನುಗ್ರಹದ ಮೇಲಣ ಹೊಸ ಒತ್ತಾಯ ಅಗತ್ಯವಾಗಿಯೇ ಬಂತು. ಆರಂಭದ ಬೌದ್ಧ ಮತವು ಮನುಷ್ಯನು ತನ್ನ ಮೋಕ್ಷವನ್ನು ತಾನೇ ಸಾಧಿಸಿಕೊಳ್ಳಬೇಕೆಂದು ಒತ್ತಾಯ ಪಡಿಸಿತ್ತು. ಹೊಸ ಬೌದ್ಧಮತವು ಇದನ್ನು ಕ್ರಮೇಣ ಕಡಿಮೆಯಾಗಿಸಿತು. ಕ್ರಿಸ್ತ ಶಕದ ಆರಂಭದಷ್ಟಕ್ಕೆ ಅದು ಪಾಪ ಮಾಡಿದವರಿಗೆ ಮೋಕ್ಷ ಸಂಪಾದಿಸಿಕೊಳ್ಳಲು ಅಮಿತಾಭಾನ ಅನುಗ್ರಹವನ್ನು ಅವಲಂಬಿಸಿದರೆ ಮಾತ್ರ ಸಾಧ್ಯವೆಂದು ಭರವಸೆ ನೀಡಿತು ಆದರೆ ಇನ್ನೊಂದು ಕ್ಲಿಷ್ಟ ಸಮಸ್ಯೆ ಉದ್ಭವಿಸಿತು. ಮಹಾಯಾನದ ಪ್ರಗತಿಯಿಂದ ಬೌದ್ಧಮತವು ಪೊಳ್ಳು ವಿಚಾರಗಳನ್ನು ನಿವಾರಿಸಹೋಗಿ ಅದರ ಸ್ಥಾಪಕನ ಬೋಧನೆಗಳನ್ನೇ ಮರೆತು ಅತಿ ನಿಗೂಢವಾಯಿತು. ಬೌದ್ಧ ಮತವು ನಾಗಾರ್ಜುನಂಥ ದೊಡ್ಡ ದೇವತಾ ಶಾಸ್ತ್ರಜ್ಞರನ್ನು ಪಡೆಯಿತು. ಈತನು ನಿಷ್ಕಪಟವಾದ ವಸ್ತು ಸತ್ಯತಾ ವಾದ (Realism) ದಿಂದ ಪ್ರಜ್ಞೆಯೊಂದೇ ಸತ್ಯವೆಂದು ಬೋಧಿಸುವ ಶುದ್ಧ ಆದರ್ಶ ರೂಪ ಗ್ರಹಣ (Idealism)ದ ವರೆಗೆ, ಅಲ್ಲದೆ ಪ್ರಜ್ಞೆಯೂ ಸೇರಿ ಇಡೀ ವಿಶ್ವವೇ ಭ್ರಮೆಯೆಂದು ಬೋಧಿಸುವ ಕೇವಲ ಶೂನ್ಯವಾದದ (Nihilism) ವರೆಗೆ ವ್ಯಾಪ್ತಿಯುಳ್ಳ ಬೌದ್ಧತತ್ವದ ಸಂಘವನ್ನು ವೃದ್ಧಿಪಡಿಸಿದನು. ಉಳಿದವರೂ ಸಹ ಮಾನವನ ಮನಸ್ಸಿನ ವಿವರವಾದ ವಿಶ್ಲೇಷಣೆಯನ್ನು ಮಾಡಿ ಮೋಕ್ಷ ಸಾಧನೆಯ ವಿಧಾನವನ್ನು ತಾವೇ ಚಿಂತಿಸಲು ತೊಡಗಿದರು. ಈ ಕಾರ್ಯ ವಿಧಾನ ಸಿಲೋನಿನ ಭಿಕ್ಷುಗಳಿಂದ ಅನೇಕ ಬಗೆಯ ಕಠಿಣ ತಪಶ್ಚರ್ಯೆಯನ್ನು, ಟಿಬೆಟ್ಟಿನ ಸನ್ಯಾಸಿಗಳಿಂದ ಏಕಾಂತವಾಗಿ ಗವಿಯಲ್ಲಿ ಮಾನವ ಸಂಪರ್ಕವಿಲ್ಲದೆ ಇಡೀ ಜೀವಮಾನವೆಲ್ಲ ಧ್ಯಾನಮಾಡುವ ವ್ರತವನ್ನೊಳಗೊಂಡಿತ್ತು. ಬುದ್ಧನು ತ್ಯಜಿಸಿದ **ಸ**ನ್ಯಾಸ ಧರ್ಮವನ್ನು ಬೌದ್ಧಮತವು ಅನುಸರಿಸುವಂತೆ ಕಂಡಿತು. ಆದರೂ ಈ ಎರಡು ಪಂಥಗಳು ಪರಸ್ಪರ ಪೂರಕವಾದವುಗಳೆಂದು ವಿವರಣೆ ನೀಡುವ ಪ್ರಯತ್ನ ನಡೆಯಿತು. ಡಾ. ಮೆಕ್‌ಗವೆರ್ನ್ ಹೀಗಂದಿದ್ದಾನೆ: "ಹೀನಯಾನವು ಮಹಾಯಾನವನ್ನು ಮೂಲ ಬೌದ್ಧ ಮತದ ಅಪಭ್ರಂಶ ಅಥವಾ ಅದರ ಅಬದ್ಧ ಹಾಗೂ ಕ್ಷೀಣ ಗತಿಯ ಶಾಖೆ ಎಂದು ಪರಿಗಣಿಸಿದರೆ, ಮಹಾಯಾನವು ಹೀನಯಾನವನ್ನು



ಅಬದ್ಧವೆಂದಾಗಲೀ, ನಿಜವಾದ ಬೌದ್ಧಮತಕ್ಕೆ ವಿರುದ್ಧವಾದುದೆಂದು ಹೇಳದೆ ಅದು ಅಪೂರ್ಣ ಅಥವಾ ಮಹಾಯಾನದ ಹೆಚ್ಚು ಗಾಢವಾದ ಸತ್ಯವನ್ನು ಗ್ರಹಿಸಲು ಸಾಧ್ಯವಾಗದವರಿಗೆ ಶಾಕ್ಯಮುನಿ ಬೋಧಿಸಿದ ತೋರ್ಕೆಯ ಸಿದ್ಧಾಂತ ಎನ್ನುತ್ತದೆ". ಜಾನ್ ಬ್ಲೋಫೆಲ್ಡ್ ಹೀಗೆ ಅಭಿಪ್ರಾಯ ಪಡುತ್ತಾನೆ: "ಮಹಾಯಾನವು ಈಚೀಚೆಗೆ ಹುಟ್ಟಿದ್ದು. ಅದು ಬುದ್ಧನ ನಿಜವಾದ ಬೋಧನೆಯ ಅಪಗಮನದಿಂದ ರಚಿತವಾಗಿದೆ ಎಂಬುದು ಹೀನಯಾನದ ಅಭಿಪ್ರಾಯ. ಮಹಾಯಾನದ ದೃಷ್ಟಿ ಹೀಗಿದೆ: ಬುದ್ಧನು ಅವನ ಜೀವನದಲ್ಲಿ ವಿವಿಧ ಹಂತಗಳಲ್ಲಿ ಜನರಲ್ಲಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯದಲ್ಲೂ ಅಂತರವಿರುವುದನ್ನು ಗಮನಿಸಿ ಅದಕ್ಕೆ ಹೊಂದಿಕೆಯಾಗುವಂತೆ ಸತ್ಯದ ಅನೇಕ ಮುಖಗಳನ್ನು ಬೋಧಿಸಿದನು".

ಚಿಂತನೆ ಮತ್ತು ದೇಹದಂಡನೆ (ಜ್ಞಾನ ಮತ್ತು ಕರ್ಮ)ಗಳೆರಡರ ವೈಪರೀತ್ಯವನ್ನು ಮಾನವ ಸ್ವಭಾವದಲ್ಲಿಯೇ ಕಾಣಬಹುದು. ಬೌದ್ಧಮತಕ್ಕೆ ಮತಾಂತರ ಹೊಂದಿದವರು ಅನೇಕ ಸಲ ಪೂರ್ವ ಶಿಕ್ಷಣದಲ್ಲಿ ತಮ್ಮದಾಗಿಸಿಕೊಂಡಿದ್ದ ಪ್ರವೃತ್ತಿ ಮತ್ತು ಪದ್ಧತಿಗಳನ್ನು ಪಡೆದಿರುತ್ತಾರೆ. ನಾಗಾರ್ಜುನಂಥ ಕೆಲವರು ಬ್ರಾಹ್ಮಣರಾಗಿದ್ದುದರಿಂದ ಪಂಥದ ಕೂದಲು ಸೀಳುವಿಕೆಯ ಚಿಂತನಗಳಿಗೆ ಒಗ್ಗಿಕೊಂಡಿದ್ದರೆ, ಮತ್ತೆ ಕೆಲವರು ಮೊದಲ ಗುಂಪಿನ ಶಿಷ್ಯರಂತೆಯೇ ಸನ್ಯಾಸಿಗಳಿದ್ದು ಸನ್ಯಾಸತ್ವವು ಶಕ್ತಿಯನ್ನು ದೊರಕಿಸಿಕೊಳ್ಳುವ ಮಾರ್ಗ ಎಂಬ ಹಿಂದಿನ ಭಾರತೀಯರ ಭಾವನೆಯನ್ನೇ ಮುಂದೆ ತಂದರು. ಈ ಬಗೆಯ ಮನೋಧರ್ಮವನ್ನುಳ್ಳವರು ಬುದ್ಧನು ಮೋಕ್ಷ ಸಾಧನೆಗೆ ಅಗತ್ಯವೆಂದು ಸಾರಿದ ಧ್ಯಾನ ಮತ್ತು ಸಮಾಧಿಗಳು ಇಂದ್ರಜಾಲ ಶಕ್ತಿಯನ್ನು ತರುತ್ತವೆಂದು ಭಾವಿಸಿದರು. ಉತ್ತರದ ಕಲಾಭಿಜ್ಞರಿಗೆ ಕಡಿಮೆಯಲ್ಲದ ದಕ್ಷಿಣದ ದೇವತಾ ಶಾಸ್ತ್ರಜ್ಞರು ಇಂಥ ಶಕ್ತಿಗಳಿಗೆ ಹೆಚ್ಚು ಗಮನವಿತ್ತರು. ಚೀನ ಮತ್ತು ಜಪಾನಿನ ಕಲಾಭಿಜ್ಞರಿಗೆ ಶಾಸನದ ರಕ್ಷಕನಾದ ಅರ್ಹತನ ಅಲೌಕಿಕ ಅದ್ಭುತ ಕಾರ್ಯಗಳು ಬಹಳ ಮೆಚ್ಚಿಗೆಯ ವಿಚಾರವಾದುವು. ಇದೂ ಅಲ್ಲದೆ ಈ ಮಧ್ಯಮ ಮಾರ್ಗವು ಹೊಸದು ಅಥವಾ ಗಣನಾರ್ಹವಾದದ್ದು ಏನೂ ಇಲ್ಲದಿದ್ದರೂ ಅದನ್ನು ಅನುಸರಿಸಲು ದುರ್ಗಮವೆನಿಸಿತ್ತು. ಬೌದ್ಧಮತವು ಈ ಮಾರ್ಗವನ್ನು ಕುರಿತು ಸ್ಪಷ್ಟವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿ, ಸಾಧಕ ಉರಿಯ ಹಾದಿಯ ಮೂಲಕ ಹಾಯಬೇಕಾಗುತ್ತದೆ ಎಂದು ನಿರೂಪಿಸಿದೆ. ಈ ಮಾರ್ಗವು ನಿಜವಾಗಿಯೂ ತರ್ಕ ಪಾರಮ್ಯವಾದ ಹಾಗೂ ಅವಿಚಾರದ ನಂಬಿಕೆಗಳ ಪರ್ಯಾಲೋಚನೆ ಹಾಗೂ ಔದಾಸೀನ್ಯಗಳ ಮತ್ತು ವಿಷಯಲಂಪಟತನ ಹಾಗೂ ದೇಹದಂಡನೆಗಳ ನಡುವಿನ ಆಧ್ಯಾತ್ಮಿಕ ಮಾರ್ಗ.

ಈ ಮಧ್ಯಮ ಮಾರ್ಗವನ್ನು ಪೂರ್ವದ ಮಹರ್ಷಿಗಳು ಎಂಟು ಮಜಲುಗಳಾಗಿ ವಿಸ್ತರಿಸಿ, ಅವನ್ನು ತಿಳಿವಳಿಕೆ, ನೀತಿ ಮತ್ತು ಧ್ಯಾನಗಳೆಂಬ ಶೀರ್ಷಿಕೆಯಲ್ಲಿ ಹೊಂದಿಸಿದರು. ದ್ವಂದ್ವಗಳ ಪರಾಕಾಷ್ಠೆಯನ್ನು ತೊರೆದವನು, ತನ್ನನ್ನು ಬೋಧಿಯಲ್ಲಿಗೆ ಕೊಂಡೊಯ್ಯುವ ಮನಸ್ಥಿತಿಯನ್ನು ಅಭ್ಯಾಸ ಮಾಡುವಲ್ಲಿ ತನ್ಮಯನಾಗದವನು ಸನ್ಯಾಸಿಯೆನಿಸುವನು. ಈ ಮಾರ್ಗವು ಪ್ರಪಂಚದ ಕ್ಲೇಶ, ಅದಕ್ಕೆ ಕಾರಣ, ಪರಿಹಾರದ ಅರಿವು, ಮೊದಲಾದ ಋಜುವಾದ ಮಾನಸಿಕ ಭಾವಗಳಲ್ಲಿ ಆರಂಭವಾಗಿ ಇಂದ್ರಿಯ ಸುಖವನ್ನು ತ್ಯಜಿಸುವ ಎರಡನೆಯ ಹಂತಕ್ಕೆ ಸಾಗುತ್ತದೆ. ಯಾವ ಜೀವಿಯನ್ನೂ ನೋಯಿಸದೆ, ಒಳ್ಳೆಯ ಆಲೋಚನೆಗಳನ್ನೆ ಮಾಡುತ್ತಾ ಸಕ್ರಿಯಾತ್ಮಕವಾಗಿ ಸಾಗುತ್ತಾ ಸುಜ್ಞಾನದ ಹಂತದಿಂದ ನೈತಿಕ ಮಟ್ಟಕ್ಕೇರುತ್ತದೆ. ಅನಂತರ ಬಹಳ ಕಷ್ಟಕರವಾದ ಚಿತ್ತೈಕಾಗ್ರತೆಗೆ ಬಂದು ನಾಲ್ಕು ಭಾವೋದ್ರೇಕ ಸ್ಥಿತಿಗಳೊಡನೆ ಒಳ್ಳೆಯ ಪರವಶತೆಯ ಕೊನೆಯ ಮೆಟ್ಟಲನ್ನು ಮುಟ್ಟುತ್ತದೆ. ಸ್ವಯಂ ಬುದ್ಧನೂ ಕೂಡ ಈ ಮೂರು ಅವಸ್ಥೆಗಳನ್ನು ಹೊಂದಿ, ಅನಂತರ ತೃಷೆಯ ನಿಲುಗಡೆ ಎನ್ನಿಸಿದ ನಿರ್ವಾಣದ ಗುರಿಯನ್ನು ಮುಟ್ಟಿದನೆಂದು ಸಾಧಿಸುವುದುಂಟು. ಬುದ್ಧನು ಪ್ರಪಂಚವನ್ನು ನಿರಂತರ ಪ್ರವಾಹವೆಂದು ತಿಳಿದಿದ್ದನು. ಆತನು "ಎಲ್ಲವೂ ಅಸ್ಥಿರ, ಸಂಕಟಕರ" ಎಂದಿದ್ದಾನೆ. ಆದರೆ ಆತನು ನಿರ್ವಾಣವೆಂದು ಕರೆಯುವ ಶಾಶ್ವತವಾದ ಶಾಂತಿ

ಯನ್ನು ಮನಸ್ಸಿನಲ್ಲಿ ಕಲ್ಪಿಸಿದನು. ಅವನಿಗಾದ ಅನುಭವವನ್ನು ಆ ಜಾಗ್ರದವಸ್ಥೆಯು ಪ್ರಶಾಂತ, ಶುದ್ಧ, ಪ್ರಕಾಶಭೇದ್ಯ, ಜ್ವಾಲನ ಶಕ್ತಿ, ಪಾಪ ನಿರ್ಲೇಪ, ನಮ್ರ, ಸಕ್ರಿಯ, ದೃಢ, ಕ್ಷೋಭೆ ರಹಿತವಾದದ್ದು' ಎಂದು ವರ್ಣಿಸಲಾಗಿದೆ. ಆದ್ದರಿಂದ ಬೌದ್ಧಮತವನ್ನು ಅರ್ಥಮಾಡಿಕೊಳ್ಳುವ ಬೀಗದ ಕೈಯೆಂದರೆ ಕ್ಷೋಭೆಯ ಮಧ್ಯೆ ಶಾಂತಿ, ಅಶಾಶ್ವತದ ಮಧ್ಯೆ ಸ್ಥಿರತೆ, ಮಿಥ್ಯೆಯ ನಡುವೆ ಸತ್ಯವನ್ನು ಕಾಣುವುದು ಎಂಬ ಭಾವನೆ.

ಶ್ರೇಷ್ಠ ಬೌದ್ಧ ಕಲಾವಿದರು ಈ ಪ್ರಮುಖ ಭಾವನೆಯನ್ನು ನಮಗೆ ತೋರಿಸಲು ಪ್ರಯತ್ನಿಸಿದ್ದಾರೆ. ಉದಾಹಣೆಗಾಗಿ ಬುದ್ಧನ ಮಾರನ ಸೈನ್ಯವು ಅವನನ್ನು ಅಲುಗಾಡಿಸಲು ಸಾಧ್ಯವಾಗದ, ಅಲ್ಲದೆ ಅವನ ಚೆಲುವೆತ್ತ ಹೆಣ್ಣು ಮಕ್ಕಳ ಆಕರ್ಷಣೆ ಕೂಡ ವಿಚಲಿತಗೊಳಿಸದ ಸಮಾಧಿ ಸ್ಥಿತಿಯ ಆ ಶಾಂತಿಯನ್ನು ರೂಪಿಸುವ ಚಿತ್ರ. ಜಪಾನಿನ ಪ್ರಸಿದ್ಧ ದೇವಾಲಯದ ಚಿತ್ರಗಳಲ್ಲಿ ಇಂಥದೇ ಚಿತ್ರವಿದೆ. ಅದರಲ್ಲಿ ಅಂತಿಮವಾಗಿ ನಿರ್ವಾಣ ಪದವಿಗೇರುವ ಶಾಂತ ಮೂರ್ತಿ, ಅವನ ಸುತ್ತ ದುಃಖದಿಂದ ಉದ್ರೇಕಗೊಂಡ ದೇವತೆಗಳು, ಮಾನವರು ಮತ್ತು ಪ್ರಾಣಿಗಳೂ ಇದ್ದಾರೆ ಸಿಲೋನಿನ ಕಾಡುಗಳಲ್ಲಿರುವ ಬೃಹದಾಕಾರದ ಏಕ ಶಿಲಾ ಪ್ರತಿಮೆಯು ಅವನು ಕಣ್ಣು ಮುಚ್ಚಿ, ಕೈಗಳನ್ನು ಮಡಿಚಿ, ನೆಟ್ಟಗೆ, ನಿಶ್ಚಲನಾಗಿ ಕುಳಿತಿರುವುದನ್ನು ರೂಪಿಸುತ್ತದೆ. ಬುದ್ಧನ ಇತರ ಪ್ರತಿಮೆಗಳಲ್ಲಿ ಕಾಲ ಬಳಿ ಜಿಂಕೆ ಇದ್ದು, ಆತನ ಪ್ರಥಮ ಶಿಷ್ಯರ ಸಮೂಹದಿಂದ ಸುತ್ತುವರಿಯಲ್ಪಟ್ಟು ಕುಳಿತಿರುವ, ನಿಂತಿರುವ ಚಿತ್ರಗಳು ನಮಗೆ ಕಾಣಿಸುತ್ತವೆ. ಮತ್ತೆ ಕೆಲವು ಬುದ್ಧನು ನಿಮಿತ್ತವಾದದ ( causality ) ಬೋಧಕನೆಂದೂ, ರೋಗ ನಿರ್ಣಯಮಾಡಿ, ಗುಣಪಡಿಸುವ ಒಳ್ಳೆಯ ವೈದ್ಯನೆಂದೂ ತಿಳಿಸುತ್ತವೆ. ಈ ಪ್ರತಿಮೆಗಳು ಮೂಲ ಗ್ರಂಥಗಳಲ್ಲಿ ಕ್ರಿಯಾತ್ಮಕವಾಗಿ ಕಾಣುವ ಬುದ್ಧತನದ ದೀರ್ಘವಾದ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಕಮಲ ಸೂಕ್ತವು ಸಾಮಾನ್ಯ ಜನತೆಗೆ ನಿತ್ಯನಾದ ಬುದ್ಧನನ್ನು ನೀಡಿದ ಹಾಗೆ, ಅಶ್ವಘೋಷನಂಥ ಮತಾಂತರ ಹೊಂದಿದ ಬ್ರಾಹ್ಮಣರು ಸನ್ಯಾಸಿಗಳ ಉಪಯೋಗಕ್ಕಾಗಿ ಸ್ತೋತ್ರಗಳನ್ನು ಬರೆದರು. ಅಶ್ವಘೋಷನ 'ಬುದ್ಧ ಚರಿತ'ವು ಒಂದು ಸಂಪದ್ಭರಿತ, ವರ್ಣರಂಜಿತ ಕಾವ್ಯವಾಗಿದ್ದು ಕಲೆ ಹಾಗೂ ಭಕ್ತಿಯನ್ನು ಉದ್ದೀಪನಗೊಳಿಸಲು ಬಹಳವಾಗಿ ಯತ್ನಿಸಿದೆ.

ಬೌದ್ಧಮತದ ಹಿರಿದಾದ ಕಥೆಯನ್ನು ನಿರೂಪಿಸುವಾಗ ನಾವು ಅದರ ವರ್ಚಸುಳ್ಳ ದೃಷ್ಟಿಗಳನ್ನು ಹಾಗೂ ಅದರ ಉದಾತ್ತವಾದ ಕಾರ್ಯ ಸಿದ್ಧಿಗಳನ್ನು ಸ್ಫುಟಗೊಳಿಸಲು ಯತ್ನಿಸಿದ್ದೇವೆ. ವ್ಯವಸ್ಥೆ ಇಲ್ಲದ ಧಾರ್ಮಿಕ ಸಂಸ್ಥೆಯಾಗಿದ್ದು ಸದಾ ಒಡಂಬಡಿಕೆಗೆ ಸಿದ್ಧವಾಗುತ್ತಿದುದೇ ಅದರ ಸ್ಪಷ್ಟವಾದ ದೌರ್ಬಲ್ಯ. ಬುದ್ಧನ ವ್ಯಕ್ತಿತ್ವ ಸಂಘಕ್ಕೆ ಒಕ್ಕೂಟದಲ್ಲಿ ನೀಡಿತ್ತು. ಆದರೆ ಆತ ಧಾರ್ಮಿಕ ಸಂಸ್ಥೆಯ ಪ್ರತ್ಯಕ್ಷ ಮುಖಂಡನಾಗಿ ಅಂಕಿತನಾಗಲಿಲ್ಲ; ಅದಕ್ಕೆ ಅವಕಾಶವನ್ನೂ ಮಾಡಿಕೊಳ್ಳಲಿಲ್ಲ. ಇದು ಅನೇಕ ಪಂಥಗಳ ಉದಯಕ್ಕೆ ಕಾರಣವಾಯಿತು. ಅವನ ಮರಣಾನಂತರ ಎರಡು ವರ್ಷಗಳಲ್ಲಿ ತಮ್ಮ ತಮ್ಮ ಸನ್ಯಾಸಿ ಮಠಗಳನ್ನು ಹೊಂದಿದ ಹದಿನೆಂಟಕ್ಕೂ ಹೆಚ್ಚು ಪಂಥಗಳುಂಟಾದವು. ಹೀಗೆ ಬೌದ್ಧ ಧರ್ಮ ಸಂಸ್ಥೆಯಲ್ಲಿಯ ವ್ಯವಸ್ಥೆಯು ಬಹಳ ಸಡಿಲವಾಗಿತ್ತು. ಅಂತೆಯೇ ಅದು ಅದರ ಇತಿಹಾಸದುದ್ದಕ್ಕೂ ಅವನತಿಗೆ ಕಾರಣವಾಯಿತು. ಭಾರತದಲ್ಲಿ ಅದರ ಕೆಳಮುಖಕ್ಕೂ ಇದೇ ಕಾರಣವಾಯಿತು. ಬಹು ದೊಡ್ಡ ತತ್ತ್ವವಾದ ನಿಮಿತ್ತವಾದದಲ್ಲಿ ಕೆಲವು ಭಾಗಗಳು ಮಾತ್ರ ಒಪ್ಪಿಗೆಯಾದವು. ಆದರೂ ಎಲ್ಲ ಬೌದ್ಧ ಧರ್ಮಾವಲಂಬಿ ರಾಷ್ಟ್ರಗಳಲ್ಲಿಯೂ ತಮ್ಮ ಧರ್ಮದ ಅಭ್ಯಾಸದಲ್ಲಿ ವೈಜ್ಞಾನಿಕ ಪದ್ಧತಿಯನ್ನು ಅನ್ವಯಿಸಲು, ವಿಧಾನವನ್ನು ನವೀಕರಿಸಲು ಬಯಸುವ ಅಲ್ಪ ಸಂಖ್ಯಾತರಾದ ವಿಚಾರಿಗಳು ಇರುತ್ತಾರೆ.

ಬೌದ್ಧರೂ ಕೂಡ ಉಳಿದ ನಮ್ಮೆಲ್ಲರಂತೆಯೇ ಮಾನವರು ಎಂಬುದನ್ನು ತಿಳಿಸಲೇ ಇಷ್ಟೆಲ್ಲವನ್ನೂ ಹೇಳಿದ್ದು. ಸಂತರನ್ನು ಸಿದ್ಧಗೊಳಿಸುವ ಶಕ್ತಿ ಮತ್ತು ಹಾಗೆ ಸಿದ್ಧಗೊಳಿಸಿದ ಸನ್ಯಾಸಿತನದ ಮೌಲ್ಯವೇ ಒಂದು ಧರ್ಮದ ಸತ್ವದ ನಿಜವಾದ ಪರೀಕ್ಷೆ. ಬೌದ್ಧ





ಮತವು ಈ ಶಕ್ತಿಯನ್ನು ಗಣನಾರ್ಹವಾಗಿ ತೋರಿಸಿದೆ. ಅಲ್ಲದೆ ಈ ಸ್ಫೂರ್ತಿ ಇನ್ನು ಜೀವಂತವಾಗಿರುವುದರಿಂದ ಅದರ ಭವಿಷ್ಯ ಆಶಾಜನಕವಾಗಿದೆ. ಈ ವಿಷಯದಲ್ಲಿ ಕಿಸ್ಮಸ್ ಹಂಫ್ರೇಸ್ ಹೀಗೆ ನಿರರ್ಗಳವಾಗಿ ಹೇಳುತ್ತಾನೆ : "ಬೌದ್ಧಮತವು ವಾಸ್ತವವಾಗಿ ವಿಶ್ವದ ಯಾವುದೇ ಸಂಸ್ಥೆಗೆ ಅಥವಾ ಬೇರೆ ಯಾವುದೇ ಸಂಘಕ್ಕೆ ಸುಲಭವಾಗಿ ಎರವಲಾಗಿಲ್ಲ. ಒಬ್ಬನ ಮೋಕ್ಷಕ್ಕೆ ಅವನ ವಯ್ಯಕ್ತಿಕ ಸಾಧನೆ ಅಗತ್ಯವೆಂದು ಇದು ಒತ್ತಾಯಪಡಿಸಿತು. ಐಹಿಕ ಸಾಮರ್ಥ್ಯಕ್ಕಾಗಿ ಇದು ಹಾತೊರೆಯುವುದಿಲ್ಲ. ಸಂಘದ ಸದಸ್ಯರು ಎಷ್ಟೆಷ್ಟು ರಾಜಕೀಯದಲ್ಲಿ ತಲೆಹಾಕುತ್ತಾರೋ ಅಷ್ಟಷ್ಟು ಅವರು ಕೆಳಮಟ್ಟಕ್ಕಿಳಿಯುತ್ತಾರೆ. ಬೌದ್ಧಮತದಲ್ಲಿ ಪೋಪ್ ಇಲ್ಲ. ಟಿಬೆಟ್ ಅನ್ನುಳಿದು ಮತ್ತೆಲ್ಲೂ ಧರ್ಮಾಧಿಕಾರಿಯೂ ಇಲ್ಲ. ಈ ವಿಷಯದಲ್ಲಿ ಅಂತ ರಾಷ್ಟ್ರೀಯ ಪರಸ್ಪರ ಸಹಕಾರವೆಂದರೆ ತತ್ತ್ವ ಬಗ್ಗೆ ಭಾವನೆಗಳ ಪರಸ್ಪರ ವಿನಿಮಯ ಮಾಡಿಕೊಳ್ಳುವುದು ಹಾಗೂ ಅದನ್ನು ಸೂಕ್ತ ರೀತಿಯಲ್ಲಿ ಪ್ರಸಿದ್ಧ ಪಡಿಸುವುದು. ಈ ಆಧ್ಯಾತ್ಮಿಕ ಶಕ್ತಿಯಾಗಿ ಮಾತ್ರ ಬೌದ್ಧ ಮತವು ಮನಮುಟ್ಟುತ್ತದೆ ಮತ್ತು ಆಧುನಿಕ ಪ್ರಪಂಚವನ್ನು ಇನ್ನು ಹೆಚ್ಚು ಪ್ರಭಾವಿತವನ್ನಾಗಿ ಮಾಡುತ್ತದೆ."

ಬೌದ್ಧಮತವು ಕರುಣಾಪೂರ್ಣ, ಮಧ್ಯಮ ಮಾರ್ಗಗಾಮಿ, ಆತ್ಮಪರಿಜ್ಞಾನಗಳ ಅಡಿಪಾಯವನ್ನುಳ್ಳ ವಿಶ್ವಧರ್ಮವನ್ನು ನೀಡಿತು. ತನ್ನ ವರ್ಣ ಚಿತ್ರ, ಶಿಲ್ಪ, ಭಿತ್ತಿ ಚಿತ್ರಗಳಲ್ಲಿನ ಹೊಸಬಗೆಕಲೆಯಿಂದ ಬೌದ್ಧಮತವು ಪ್ರಪಂಚದಲ್ಲಿ ತನ್ನ ಪ್ರಭಾವ ಮುದ್ರೆಯನ್ನು ಒತ್ತಿದೆ. ನಿರಂತರವಾಗಿ ಸಾಗಿದ ಅನೇಕ ಹುಟ್ಟುಗಳಲ್ಲಿನ ಬುದ್ಧನ ಪ್ರಾಪಂಚಿಕ ಜೀವನಗಳಿಗೆ ಸಂಬಂಧಿಸಿದ ಅನೇಕ ಜಾತಕಗಳು ಕುಂಚ, ಉಳಿ ಮತ್ತು ಕೊಡತಿಗಳಿಗೆ ಸತ್ತ್ವಪೂರ್ಣವಾದ ಸ್ಫೂರ್ತಿಯನ್ನು ನೀಡಿವೆ. ಈ ಜಾತಕಗಳು ಕಲಾವಿದರಿಗೆ ಸುಸಂಸ್ಕೃತಾಭಿರುಚಿಯನ್ನು ಮತ್ತು ಹೇರಳವಾದ ಸಂಪತ್ತನ್ನು ದೊರಕಿಸುವುದರ ಜೊತೆಗೆ ಗತಕಾಲದ ಸಾಮಾಜಿಕ ದೃಶ್ಯಗಳನ್ನು ಅವುಗೆ ಕಾಣಿಸುತ್ತವೆ. ಬೌದ್ಧ ಕಲೆಯು ವಾಸ್ತವವಾಗಿದೆ. ಅದು ನಮ್ಮ ಗಂಡು ಹೆಣ್ಣಿನ, ಪ್ರಾಣಿಗಳ, ಹಸಿರು ಸಸ್ಯದ, ಬೆಳಕು ಹಾಗೂ ನೆರಳಿನ ಪ್ರಪಂಚವನ್ನು ಕುರಿತದ್ದಾಗಿ ಸ್ವದೇಶೀಯವಾಗಿದೆ. ಅದು ಭಾರತೀಯ ಜೀವನವನ್ನು ತಾನು ಕಂಡಂತೆ ಚಿತ್ರಿಸಿದೆ. ಅದರ ಹುಟ್ಟಿನ ಹಿನ್ನೆಲೆಯಲ್ಲಿ ಮತೀಯ ಆವೇಶಪೂರ್ಣ ಪ್ರೇರಣೆಯಿದ್ದರೂ ನೈಸರ್ಗಿಕ ಬೆಳವಣಿಗೆಯಲ್ಲಿನ ಸೌಂದರ್ಯವನ್ನು ಅಂತ ದೃಷ್ಟಿಯಿಂದ ಗ್ರಹಿಸಿ ಪ್ರಕಾಶಪಡಿಸುವ ರೀತಿಯಾರ ಮನಸ್ಸಿಗಾದರೂ ಹಿಡಿಸುತ್ತದೆ. ಬೌದ್ಧ ಕ್ರಾಂತಿಯು ಕಲಾವಿದರಿಗೆ ವಿಮೋಚನೆಯನ್ನು ತಂದುಕೊಟ್ಟು, ಜನಸಾಮಾನ್ಯರಲ್ಲಿ ಕಲಾತ್ಮಕ ಮನೋಭಾವನೆಯನ್ನುಂಟು ಮಾಡಿತು; ಅದು ಕಲಾಜ್ಞಾನವನ್ನು ವೃದ್ಧಿಪಡಿಸಿತು. ಹಾಗೂ ಕಲಾವಿದರ ಸೂಕ್ಷ್ಮಗ್ರಾಹಿ ಗುಣವನ್ನು ವಿಕಾಸಗೊಳಿಸಿತು. ದೊಡ್ಡಗುರಿಯನ್ನು ಸಾಧಿಸಬೇಕೆಂಬ ಮಹದಾಕಾಂಕ್ಷೆ ತುಂಬಿದ ಕಲಾವಿದರಿಗೆ ಹೊಸ ವ್ಯವಸ್ಥೆಯೇ ಅಗ್ರಮಾನ್ಯವಾಗಿರುವ ದೃಷ್ಟಾಂತಗಳುಳ್ಳ ಹಿರಿದಾದ ವಸ್ತುಗಳನ್ನೊದಗಿಸಿತು.

ಬೌದ್ಧಮತವು ಸಾಹಿತ್ಯ ಕ್ಷೇತ್ರದಮೇಲೆ ಬೀರಿದ ಪ್ರಭಾವ ಕಡಿಮೆಯದೇನಲ್ಲ. ಕಾವ್ಯರಂಗದಲ್ಲಿ ಅಶ್ವಘೋಶನು 'ಬುದ್ಧಚರಿತ' ಮತ್ತು 'ಸೌಂದರನಂದ' ಎಂಬ ಎರಡು ಆಲಂಕಾರಿಕ ಮಹಾಕಾವ್ಯಗಳನ್ನು ಬರೆದಿದಾನೆ. ಈತನು 'ಸಾರಿಪುತ್ರ ಪ್ರಕರಣ' ಎಂಬ ನಾಟಕದ ಕರ್ತೃವೂ ಹೌದು. ನಾಟಕಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ವಸ್ತುಗಳನ್ನು ಬಳಸಿದವರಲ್ಲಿ ಬೌದ್ಧರೇ ಮೊದಲಿಗರು ಎಂಬುದನ್ನು ಈ ನಾಟಕವು ತೋರಿಸುತ್ತದೆ. ಹರ್ಷನ 'ನಾಗಾನಂದ' ನಾಟಕವು ಅಶ್ವಘೋಶನ ಸಂಪ್ರದಾಯವನ್ನು ಮುಂದುವರಿಸಿತು. 'ಜಾತಕಗಳು' ಭಾರತದಲ್ಲಿನ ಕಟ್ಟು ಕಥೆ ಹಾಗೂ ಜಾನಪದ ಸಾಹಿತ್ಯಕ್ಕೆ ಪೂರ್ಣಗಾಮಿ ಎಂದು ಹೇಳುವುದುಂಟು. ಭಕ್ತಿ ಹಾಗೂ ನೀತಿಪರವಾದ ಭಾವಗೀತೆಗಳ ಕ್ಷೇತ್ರದಲ್ಲಿ ಬೌದ್ಧರು ಉಳಿದವರು ಅನುಸರಿಸಲು ನೆಲಗಟ್ಟನ್ನು ಸಿದ್ಧಪಡಿಸಿದರು. ಇತ್ಸಾಂಗನು ದಾಖಲೆ ಮಾಡಿರುವಂತೆ ನೀತಿ ಶೃಂಗಾರ ಹಾಗೂ ವೈರಾಗ್ಯ ಶತಕಗಳನ್ನು ಬರೆದ ಸುಪ್ರಸಿದ್ಧ ಭರ್ತೃಹರಿಯೂ ಕೂಡ ಬೌದ್ಧನೇ. ತಂತ್ರ ಹಾಗೂ ವೈದ್ಯಕೀಯ ಕ್ಷೇತ್ರಗಳಲ್ಲೂ ಕೂಡ ಬೌದ್ಧ ಸಾಹಿತ್ಯದ ಮೊತ್ತ ಯಾವ ರೀತಿಯಲ್ಲೂ ಅಲ್ಪವಲ್ಲ.

ಹೀಗೆ ಬೌದ್ಧ ಕ್ರಾಂತಿಯು ಮಾನವತೆಯ ಎಲ್ಲ ವಿಷಯಗಳ ಮೇಲೆ, ಅದರಲ್ಲಿಯೂ ಕಲೆ ಮತ್ತು ಸಾಹಿತ್ಯದ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿದೆ. ಇದು ರಾಷ್ಟ್ರದ ಆವಶ್ಯಕತೆಗಳಿಗೆ ಹೊಂದಿಕೊಳ್ಳುವಂತೆ ಸಾಹಿತ್ಯ ಮತ್ತು ಕಲೆಗಳಲ್ಲಿ ಪುನರ್ವ್ಯವಸ್ಥೆಯನ್ನುಂಟು ಮಾಡಿತು. ಅಲ್ಲದೆ ವೈಜ್ಞಾನಿಕ ಆಲೋಚನೆಗಳನ್ನು ವಿಮೋಚನೆಗೊಳಿಸಿತು. ಇದು ಸಾಮಾಜಿಕ ಹಾಗೂ ಧಾರ್ಮಿಕ ರಂಗದಲ್ಲಿ ಹೊಸದಾರಿಗಳನ್ನು ಬೆಳಗಿಸಿತು. ಬೌದ್ಧಮತವು ಲೌಕಿಕ ವ್ಯಕ್ತಿಗೆ ಸಂಪ್ರದಾಯ ಬಾಹಿರ ಮತವಾದರೆ, ಸಂಪ್ರದಾಯಸ್ಥ ಬೌದ್ಧ ಧರ್ಮೀಯನಿಗೆ ಪ್ರತಿಭಾವಂತನಿಂದ ದಿಗ್ದರ್ಶನ ಮಾಡಲ್ಪಟ್ಟ ಜೀವನ ಮಾರ್ಗ. ಆಧ್ಯಾತ್ಮಿಕ ಸಮಸ್ಯೆಗಳ ಬಗೆಗಿನ ತನ್ನ ತರ್ಕ ಸಮ್ಮತವಾದ ಪ್ರಸ್ತಾಪದಿಂದ ಇದು ತತ್ವಜ್ಞಾನಿಗೂ ಹಿಡಿಸುತ್ತದೆ. ತನ್ನ ಸೂಕ್ಷ್ಮವಾದ ಮನಶ್ಶಾಸ್ತ್ರದ ಮೌಲ್ಯದಿಂದ ಇದು ಸಾಧಕರಿಗೂ ಬೆಲೆಯುಳ್ಳದ್ದಾಗಿದೆ. ಕಲೆ ಮತ್ತು ವಾಸ್ತುಶಿಲ್ಪಗಳು, ಜ್ಞಾನ ಕೇಂದ್ರಗಳು ಹಾಗೂ ಪೂಜಾ ವಿಧಾನಗಳ ಆದರ್ಶ ಮಾರ್ಗಗಳನ್ನು ಹಾಕಿದ ಸಂಸ್ಥೆಯಾಗಿ ಇದು ಇತಿಹಾಸಕಾರನಿಗೂ ರುಚಿಸುತ್ತದೆ.

ಮೂಲ : ಶ್ರೀ ಶ್ರೀ ಕುಮಾರ ಸ್ವಾಮಿಜಿ
ನವಕಲ್ಯಾಣ ಮಠ, ಧಾರವಾಡ.
ಕನ್ನಡಕ್ಕೆ : ಶ್ರೀ ಟಿ. ಆರ್. ಮಹದೇವಯ್ಯ
ಬೆಂಗಳೂರು.

@@@

# ಕತ್ತಲು - ಬೆಳಕು

೧

ಅರ್ಧ ರಾತ್ರಿಯ ಸಮಯ;
ಇರಲಿಲ್ಲ ಗಗನದೊಳು ಚಂದ್ರಲೇಖಾಛಾಯೆ;
ಎಲ್ಲೆಲ್ಲೂ ಕತ್ತಲು,
ಬೆಳಗಿನ ಚಿಹ್ನೆಯಿಲ್ಲ ಸುತ್ತಲು;
ಆಗಸದಲಿ ಇಲ್ಲ ತಾರೆಗಳ ಸುಳಿವು,
ತಮಂಧವು ಮಾಡಿತ್ತು ಬೆಳಕಿನ ಕಳವೂ;
ಸೂಯ್ಯೆಂದು ಬೀಸುತಿದೆ ತಂಗಾಳಿತೊಯ್ದು,
ಮಣ್ಣ ಕಣಗಳ ಎಡೆಯೆಂದೆಡೆಗೆ ಸುರಿದು.

೨

ಮನುಪಾಳ್ಯ–ಅದೊಂದು ಹಳ್ಳಿ,
ಇಂದೇನೋ ಉರಿಯುತ್ತಿಲ್ಲ ಅಲ್ಲೊಂದೂ ಕೊಳ್ಳಿ,
ಹೆಮ್ಮರಗಳಿಗೆ ಹಬ್ಬಿದ್ದು ಪರಿಮಳವೆಸೆದಿತ್ತು
ಮಲ್ಲಿಗೆಯ ಬಳ್ಳಿ;
ಇನಿತಿಲ್ಲ ರವ–
ಇದ್ದೂ ಇಲ್ಲದಂತೆ ಜೀವಂತ ಶವ.

೩

ಇನಿತು ಸರಿಯಿತು ನೋಡ,
ಅಲ್ಲಿ ಕಂಡವು ಒಂದೆರಡು ತಾರೆ ನೋಡ;
ಮತ್ತೂ ಸರಿಯಿತು ಮುಗಿಲು
ಚಂದ್ರ ರಶ್ಮಿಗಳಾಗಿಸಿದವು ನೆಲವ ಚುಂಬಿಸಲು,
ಇನಿತರೊಳು........
' ಗುರ್ರ್ರ ಗುರ್ರ್ರೆ'ಂದು ಅತ್ತ ಕಾಡಿನಲಿ
ರವ ಬರುತಿತ್ತು ಹಳ್ಳಿಯ ಬಳಿ '
ಎದ್ದರು ಜನತೆ, ಉರಿದವು ಜ್ಯೋತಿ.
" ಓ ಹೋ ಹುಲಿ "–ಗುಲ್ಲು ಹೀಗೆನೆ,
ಸೊಡರನು ಮೀರುವ ಕಂಗಳ
ಹುಲಿಗಳು ಬಂದು ಸೇರಿದುವು ಅಂಗಳ.
ಎಲ್ಲರೂ ತಂತಮ್ಮಹಟ್ಟಿಗೆ ದೌಡು
ಒಂದಾಯಿತು ನೋಡು ಬಾಗಿಲ ಜೋಡು;
ಆದರಾ ಸಣ್ಣವಳು ' ಧರ್ಮವ್ವ, '
ಹೊರಗೆ ಉಳಿದಳು. ಕೂಗಿದಳು ನಡುಗು
ಕಂಠದಲ್ಲಿ ' ಅವ್ವ '
ಆದರೇನು? ಉಳಿಸಲಾರದೆ ಒಳಗಿನಿಂದಲೇ
ಅವಳಪ್ಪ ಅಮ್ಮ
ಹುಲಿಯ ಸದ್ದ ಹತ್ತಿರದಿಂದಾಲಿಸಿ, ಅರುಚಿದರು;
" ಓ ಎಮ್ಮ ಧರ್ಮ, "
ಯಾವ ಸದ್ದೂ ಇರಲಿಲ್ಲ.
ಹೊರಬಂದರಾ ಬಸದಿಯ ವೀರಸಿವಾಸಿಗಳೆಲ್ಲ



ಮಾತಾ–ಪಿತೃಗಳು ಕೂಗಿದರು : "ಎಲ್ಲಿರುವಿಯಮ್ಮ?"
ನೆಲವು ಕೆನ್ನೀರಿನಿಂ ತೊಯ್ದಿತ್ತು. ಅದಕಂಡು ಅರಚಿದ
ಮತ್ತೊಮ್ಮೆ.
ಹಳ್ಳಿಗರೆಲ್ಲರೂ ಸಂತೈಸತೊಡಗಿದರು..
ಮತ್ತಾರು 'ಧರ್ಮವ್ವ'ನ ಹಿಂದೆ ಕರೆತರುವರು.

೪

ಕತ್ತಲದು ಕಳೆದಿತ್ತು;
ಮುಂಜಾನೆಯಾಗಿತ್ತು.
ಪೂರ್ವಾಂಗನೆ ಕೆಂಬಣ್ಣದರಿವೆ ಹೊದ್ದಿರಲು,
ಅವಳ ಸಿರಿ ಮೊಗವೆನಲು ಅರುಣ ಸೇರಿದ ಬಾನ ಮೇಲೆ
ತನ್ನ ಸಾಸಿರ ಕರಗಳಿಂ ನೆಲವನಾಲಿಂಗಿಸಿ,
ಮಾಡಿದ ಹರಿದ್ವರ್ಣಲೇಕಿತ ಊರಿನ ಮರಸಸಿ.
ಅದೇಗಗನ;–ಆದರೀಗದು ಸುಶುಭ್ರ.
ಅವೇ ಮುಗಿಲು; ಅಲ್ಲೀಗ ಬಂದಿಹನು ಮಿತ್ರ.
ಅದೇ ಹಳ್ಳಿ—
ಅಳುತಿಹರು 'ಧರ್ಮವ್ವ'ನಯ್ಯ–ಅವ್ವ ದುಃಖ ತಾಳಿ.
' ಅಯ್ಯೋ ಪಾಪ, '
ಎಲ್ಲಿ ನಿವಾಸಿಗಳು ಮಾಡಿದರು ಬಾಯಿಯ ತಾಪ
ಸುದ್ದಿ ಹುಟ್ಟಿದೆ ಮತ್ತೊಂದು
' ಸತ್ಯಕ್ಕ'ಗೆ ಹುಟ್ಟಿದೆ ಚೆಲು ಮಗುವೊಂದು
ಹಾದಿಯಲಿ ಹೋಗುತಿದ್ದ ಮುದುಕಿ ಅನುತಿದ್ದಳು!
" ಎಂಟರಲಿ ಸುತನೊಬ್ಬ ಸತ್ತ ಬಸಿರ ನೋವಿಂದ;
ಇದರಿಂದ ಅವಳ ಆಸೆಯಾಯ್ತು ಪಾಳು;
ಅರೆ ಮತ್ತು ನೂರರಲಿ ಮಡಿದ ಮತ್ತೊಬ್ಬ ಮರದ
ಬಳಿ ಕೈ–ಕಾಲೆದೆಗಳಿಗಾದ ಪೆಟ್ಟಿನಿಂದ;
ನಾಲ್ಕರಲಿ ಮತ್ತೋರ್ವ ' ಅದೂ ಇದೂ ಒಂದೇ '
ಎನುತ ಆಲೋಕವ ಸೇರಿದ.
ಮೂರು ಮತ್ತರೆಯ ಪೋಗುವನೇನೋ ಈತ,
' ಮಾಯೆಯಲಿ ಜಗವ ಸುತ್ತಿಪ್ಪ'ನ ಕೂಡುವ ನಿಮಿತ್ತ"
ಇಳಿದಿತ್ತವಳರವ.
ಕಳೆದಿರುಳು ಅಳಿದಿದ್ದಳು ' ಧರ್ಮ'ವ್ವ,

—ನಿರ್ಮಾಯ

———

# ನಿನ್ನಲ್ಲಿ ನಾನಾಗಿ

ನಿನ್ನ ಕಂಗಳಲಿ
ನನ್ನ ಬಾಳಿದೆ,
ನಿನ್ನ ಆಸ್ಯದಲಿ
ನನ್ನ ಜಗವಿದೆ! ||೧||

ನೀನು ನಕ್ಕಾಗ
ನನ್ನ ಹೃದಯ ನಗುವುದು
ಗಿರಿಯಾ ಾರ ನೋವು
ತೃಣವೆನಿಸುವುದು! ||೨||

ನಿನ್ನ ಕಂಗಳಲಿಹ ಕಾಂತಿ
ನನ್ನೆದೆಯ ಶೃಂಗಾರ!
ನಿನ್ನ ಅಮೃತ ಪೂರ್ಣ ಸೊಲ್ಲು
ಬಾಳಿನ ಬಂಗಾರ! ||೩||

ನೀನಡೆಯುತಿರೆ
ಆತ್ಮವೆ ಚಲಿಸಿದಂತೆ
ನೀನೌನವಾಗಿ ಕೂತಾಗ
ಅಂತರ್ಸ್ಫೂರ್ತಿ–ಸ್ಥಿರತೆ ಅಪ್ಪಂತೆ! ||೪||

ನಿನ್ನಲ್ಲಿ ನಾನಾಗಿ
ಬೆರೆತಾಡುತಿರೆ
ನಾಕದ ನೆಪ್ಪೇಳಿಸುವುದು
ಬವಣೆ ಭರಿತ ಈ ತಿರೆ! ||೫||

— ರತ್ನಪ್ರಿಯ

# ನಮ್ಮ ನೆರೆಹೊರೆಯ ಚಂದ್ರ

— ಡಾ. ಪಿ. ಎಸ್. ವೆಂಕಟಸ್ವಾಮಿ ಸೆಟ್ಟಿ.

ಬೆಂಗಳೂರು ವಿಶ್ವವಿದ್ಯಾನಿಲಯದ ಪರೀಕ್ಷಾವಿಭಾಗಾಧಿಕಾರಿಗಳು ಹಂಗಾಮಿ ರಿಜಿಸ್ಟ್ರಾರರೂ ಆದ ಶ್ರೀ ಮಾನ್ ಡಾ. ಪಿ. ಎಸ್. ವೆಂಕಟಸ್ವಾಮಿ ಸೆಟ್ಟಿಯವರು ಖ್ಯಾತ ಭೌತಶಾಸ್ತ್ರಾಧ್ಯಾಪಕರು ಉತ್ತಮವಾಗ್ಮಿಗಳು, ಒಳ್ಳೆಯ ಲೇಖಕರು, ವಿಜ್ಞಾನದ ಜಟಿಲವಿಷಯಗಳನ್ನು ಸುಲಭ ಗ್ರಾಹ್ಯವಾಗುವಂತೆ ಕನ್ನಡದಲ್ಲಿ ವಿವರಿಸಬಲ್ಲ ಚಾತುರ್ಯವುಳ್ಳವರು. ಪ್ರಕೃತ "ನಮ್ಮ ನೆರೆಹೊರೆಯ ಚಂದ್ರ" ಎಂಬ ಲೇಖನವು ತಾ. ೨೫—೧೧—೬೯ರಂದು ಬೆಂಗಳೂರು ಆಕಾಶವಾಣಿಯಲ್ಲಿ ಪ್ರಸಾರವಾದ ಭಾಷಣವಾಗಿದೆ. ಅಮೆರಿಕಾದವರು ಹಾರಿಸಿದ ಅಪೊಲೋ ೧೧ ಮತ್ತು ೧೨ರ ಬಗಗೆ ಸ್ಥೂಲವಾದ ವಿವರಣೆ ಇದರಲ್ಲಿದೆ. ಈ ಲೇಖನವನ್ನು ಒದಗಿಸಿ ನಮ್ಮ ವಾಚಕರಿಗೆ ಶ್ರೀಯುತರು ಉಪಕರಿಸಿದ್ದಾರೆ. ಅವರಿಗೆ ಧನ್ಯವಾದಗಳು.

ಇಂದು ನಾವು ಮಾನವನ ಇತಿಹಾಸದಲ್ಲಿ ಇದುವರೆವಿಗೂ ನಡೆಯದೆ ಇದ್ದಂಥ ಸೇನೆಗೆ ಸಂಬಂಧಪಡೆದ ಅತ್ಯಂತ ದೊಡ್ಡದಾದ ಪ್ರಯೋಗದ ವಿವರಗಳನ್ನು ತಿಳಿಯಲಿದ್ದೇವೆ. ಚಂದ್ರನು ಭೂಮಿಯ ಸುತ್ತಲೂ ವೃತ್ತಾಕಾರದಲ್ಲಿ ತಿರುಗುತ್ತಿರುವ ಒಂದು ಉಪಗ್ರಹವೆಂಬುದು ಎಲ್ಲರಿಗೂ ತಿಳಿದ ವಿಷಯ. ಈ ಚಂದ್ರನು ಮಾನವನ ಭಾವನೆಗಳನ್ನು ಅನೇಕ ರೀತಿಯಲ್ಲಿ ಕೆರಳಿಸಿದ್ದಾನೆ. ಮಕ್ಕಳಿಗೆ ಚೆಂಡಿ ನೋಪಾದಿಯಲ್ಲಿ, ಕವಿಗಳಿಗೆ ಸ್ಫೂರ್ತಿದಾಯಕನಾಗಿ, ಪ್ರೇಮಿಗಳಿಗೆ ಮಧುಚಂದ್ರನಾಗಿ ಕಾಣಿಸಿಕೊಂಡಿದ್ದಾನೆ. ಆದರೆ ವಿಜ್ಞಾನಿಗಳಿಗೆ ಇದುವರೆವಿಗೂ ಒಂದು ಸವಾಲಿನಂತಿದ್ದವನು ಈಗ ಸೋತಿದ್ದಾನೆ. ಈಗಾಗಲೇ ಮೂರು ಗಗನಯಾತ್ರಿಗಳ ಎರಡು ತಂಡಗಳು ಚಂದ್ರನ ಮೇಲೆ ಓಡಾಡಿ ತಮಗೆ ಸಿಕ್ಕಿದ ವಸ್ತುಗಳನ್ನು ಭೂಮಿಗೆ ತಂದಿದ್ದಾರೆ. ಅಲ್ಲದೆ ಚಂದ್ರನ ಮೇಲೂ ಕೆಲವು ವೈಜ್ಞಾನಿಕ ಸಲಕರಣೆಗಳನ್ನು ಬಿಟ್ಟು ಬಂದಿದ್ದಾರೆ. ಇಂತಹ ಒಂದು ಪವಾಡ ನಡೆದದ್ದು ಹೇಗೆ ಎಂಬುದನ್ನು ತಿಳಿಯೋಣ.

ಇದೇ ವರ್ಷ ಜೂಲೈ ತಿಂಗಳು ೧೬ನೇ ತಾರೀಖು ಬುಧವಾರ ಸಾಯಂಕಾಲ ೭ ಘಂಟೆ ೩ ನಿಮಿಷಕ್ಕೆ ಸರಿಯಾಗಿ ಅಮೆರಿಕ ಸಂಯುಕ್ತ ಸಂಸ್ಥಾನಗಳ ಪ್ಲಾರಿಡಾ ರಾಜ್ಯದ ಕೇಪ್ ಕೆನಡಿ ಎಂಬ ಸ್ಥಳದಲ್ಲಿರುವ ಆಕಾಶ ಬಂದರಿನಿಂದ ಅಪೊಲೋ ೧೧ ಎಂಬ ಆಕಾಶ ನೌಕೆಯು ಚಂದ್ರಲೋಕ ಯಾತ್ರೆಗಾಗಿ ಹೊರಟಿತು. ಮಾನವ ಚರಿತ್ರೆಯಲ್ಲೇ ಇಂತಹ ಯಾತ್ರೆ ಮೊತ್ತಮೊದಲಿನದು. ಇದೇ ಅತ್ಯಂತ ದೊಡ್ಡದು, ಅತ್ಯಂತ ತೂಕ ಉಳ್ಳದ್ದು, ಅತ್ಯಂತ ಶಕ್ತಿಶಾಲಿಯಾದದ್ದು ಮತ್ತು ಅತ್ಯಂತ ಬೆಲೆಯಾದದ್ದು. ಈ ಆಕಾಶ ನೌಕೆಯ ಕ್ಷಿಪಣಿ ಮೂರು ಹಂತಗಳಲ್ಲಿ ತಯಾರಾದದ್ದು. ಕ್ಷಿಪಣಿಯ ಮೇಲೆ ಶಂಖಾಕಾರದಲ್ಲಿರುವುದೇ ಆಜ್ಞಾವಾಹಕ. ಇದರ ಒಳಗಡೆ ಮೂರು ಗಗನ ಯಾತ್ರಿಗಳು ಅವರಿಗೆ ಬೇಕಾದ ಸೌಕರ್ಯಗಳು, ವೈಜ್ಞಾನಿಕ ಸಲಕರಣೆಗಳು ಇದ್ದುವು. ಇಷ್ಟೇ ಅಲ್ಲದೆ ಚಂದ್ರನಲ್ಲಿ ಇಳಿಯಲು ಉಪಯೋಗಿಸಿದ ಚಂದ್ರವಾಹಕವೂ ಇದರೊಳಗೇ ಇತ್ತು. ಚಂದ್ರವಾಹಕದ ಒಳಗೂ ಸಹ ಇಬ್ಬರು ಯಾತ್ರಿಗಳಿಗೆ ಬೇಕಾದ ಸೌಕರ್ಯ, ವೈಜ್ಞಾನಿಕ ಸಲಕರಣೆಗಳು ಎಲ್ಲವೂ ಇತ್ತು.

ನಾಲ್ಕು ಲಕ್ಷಜನ, ವಿಜ್ಞಾನಿಗಳು, ಇಂಜನಿಯರುಗಳು, ಆಡಳಿತಾಧಿಕಾರಿಗಳು, ಅಧಿಕಾರಿಗಳು, ತಾಂತ್ರಿಕಜ್ಞರು ಮತ್ತು ಗುಮಾಸ್ತರು ಅನೇಕ ದಿನ ಪಟ್ಟ ಪರಿಶ್ರಮದ ಫಲವೇ ಅಪೊಲೋ ೧೧. ಅದರ ಕ್ಷಿಪಣಿ ಮತ್ತು ವಾಹಕಗಳು ಎರಡೂ ಸೇರಿದರೆ ೩೦ ಲಕ್ಷಕ್ಕಿಂತ ಹೆಚ್ಚು ಬಿಡಿಭಾಗಗಳಿದ್ದುವು. ಪ್ರತಿಯೊಂದು ಬಿಡಿ ಭಾಗವು ಸಹ 100ಕ್ಕೆ 99.9999 ರಷ್ಟು ಸರಿಯಾಗಿ ಪರಿಪೂರ್ಣತೆಯಿಂದ ಕೆಲಸ ಮಾಡಿದವು.



ಇಲ್ಲದಿದ್ದರೆ ಚಂದ್ರಲೋಕ ಯಾತ್ರೆಯಲ್ಲಿ ತೊಂದರೆಗಳುಂಟಾಗುತ್ತಿದ್ದುವು. ಇಂತಹ ಬೃಹದಾಕಾರದ ಅಪೊಲೋ 11 ರ ತೂಕ 3100 ಟನ್ನುಗಳು, ಎತ್ತರ 363 ಅಡಿಗಳು, ಈ ಆಕಾಶ ನೌಕೆಯನ್ನು ಹಾರಿಸಲು ಉಪಯೋಗಿಸಿದ ಕ್ಷಿಪಣಿಯ ಯಂತ್ರಕ್ಕೆ ಸ್ಯಾಟರ್ನ್-5 ಅಥವಾ ಶನಿ-5 ಎಂದು ಹೆಸರಿಟ್ಟಿದ್ದಾರೆ. ಅದಕ್ಕೆ ತಕ್ಕ ಹೆಸರೇ. ಆಕಾಶ ನೌಕೆಯು ಹಾರುವುದಕ್ಕೆ $2\frac{1}{2}$ ಘಂಟೆ ಮೊದಲೇ ಗಗನಯಾತ್ರಿಗಳು ಅಜ್ಞಾವಾಹಕದೊಳಕ್ಕೆ ಹೋಗಿ ಅದನ್ನು ಹೊರಗಿನಿಂದ ಮೋಹರು ಮಾಡಿದರು. ಕ್ಷಿಪಣಿಯು ಹಾರಿಸಿದ ಮೊದಲಲ್ಲೇ ಒಂದು ಸೆಕೆಂಡಿಗೆ 15 ಟನ್ನುಗಳಂತೆ ಇಂಧನವನ್ನು ಬಳಸಿಕೊಂಡಿತ್ತು ಮೊದಲನೆಯ ಮತ್ತು ಎರಡನೆಯ ಹಂತಗಳು ಉರಿದು ಬೀಳುವಷ್ಟರಲ್ಲಿ 100 ಮೈಲಿಗಳ ಎತ್ತರಕ್ಕೆ ಹೋಗಿ ಗಂಟೆಗೆ 17500, ಮೈಲಿಗಳ ವೇಗವನ್ನು ವಾಹಕ 12 ನಿಮಿಷಗಳಲ್ಲಿ ಪಡೆದಿತ್ತು, ಕ್ಷಿಪಣಿಯ ಮೂರನೆ ಹಂತವು ಮಾತ್ರ ಮುಂದೆ ಬೇಕಾದಾಗ ಉಪಯೋಗಿಸುವುದಕ್ಕೋಸ್ಕರ ಆಜ್ಞಾವಾಹಕಕ್ಕೆ ಅಂಟಕೊಂಡೇ ಇತ್ತು. ನೂರು ಮೈಲಿಗಳ ಎತ್ತರದಲ್ಲಿ ಮೂರನೇ ಹಂತದ ಕ್ಷಿಪಣಿಯ ಸಹಾಯದಿಂದ ಅಕಾಶನೌಕೆಯು ಭೂಮಿಯ ಸುತ್ತ ವೃತ್ತಾಕಾರದಲ್ಲಿ ಸುತ್ತಲೂ ಮೊದಲುಮಾಡಿತು. ಎರಡು ಸಲ ಸುತ್ತಿದ ಮೇಲೆ ಎರಡು ಘಂಟೆಗಳ ಪ್ರಯಾಣ ಮುಗಿದ ಮೇಲೆ ಮತ್ತೆ ಮೂರನೇ ಹಂತದ ಕ್ಷಿಪಣಿಯ ಸಹಾಯದಿಂದ ಆಕಾಶ ನೌಕೆಯನ್ನು ಚಂದ್ರನ ದಿಕ್ಕಿಗೆ ತಿರುಗಿಸಲಾಯಿತು. ಇನ್ನು ಮೂರು ದಿನಗಳು ಶೂನ್ಯದಲ್ಲಿ 2,40,000 ಮೈಲಿ ದೂರವಿರುವ ಚಂದ್ರನತ್ತ ಗಂಟೆಗೆ ಸುಮಾರು 25,000 ಮೈಲಿ ಪ್ರಾರಂಭವೇಗದಲ್ಲಿ ಪ್ರಯಾಣ ಮಾಡಿದರು. ಚಂದ್ರನ ಹತ್ತಿರ ಬರುವ ವೇಳೆಗೆ ಈ ವೇಗ ಗಂಟೆಗೆ 2,200 ಮೈಲಿಗಳಷ್ಟಾಗಿತ್ತು. ಅಲ್ಲದೆ ಚಂದ್ರನ ಆಕರ್ಷಣೆ ನೌಕೆಯ ಮೇಲೆ ಹೆಚ್ಚು ಪ್ರಭಾವ ಬೀರುತ್ತಿತ್ತು. ಆಗ ಪುನಹ ನೌಕೆಯನ್ನು ತಿರುಗು ಮುರುಗು ಮಾಡಿ ಮೂರನೆ ಹಂತದ ಕ್ಷಿಪಣಿಯ ಸಹಾಯದಿಂದ ನೌಕೆಯನ್ನು ಚಂದ್ರನ ಸುತ್ತ ಅಂಡಾಕಾರದಲ್ಲಿ ಸುಮಾರು 70 ಮೈಲಿ ದೂರದಲ್ಲಿ ಸುತ್ತುವಂತೆ ಮಾಡಿದರು. ಚಂದ್ರನಿಗೆ ಒಂದು ಸುತ್ತು ಹಾಕುವುದಕ್ಕೆ 3 ಘಂಟೆ ಬೇಕಾಗುತ್ತಿತ್ತು. ಇದರಲ್ಲಿ 45 ನಿಮಿಷಗಳು ಚಂದ್ರನ ಹಿಂಭಾಗದಲ್ಲಿರುವುದರಿಂದ ಯಾತ್ರಿಕರಿಗೆ ಭೂ ಸಂಪರ್ಕ ಕಡಿದುಹೋಗುತ್ತಿತ್ತು.

ಚಂದ್ರನ ಸುತ್ತ ಎರಡು ಸಲ ಸುತ್ತಿದ ಮೇಲೆ ಇಬ್ಬರು ಗಗನಯಾತ್ರಿಗಳು ಸುಮಾರು 30 ಅಂಗುಲ ವ್ಯಾಸವುಳ್ಳ ಪ್ಲಾಸ್ಟಿಕ್ ಸುರಂಗದ ಮೂಲಕ ಚಂದ್ರವಾಹಕದ ಪ್ರವೇಶಮಾಡಿದರು. ನಂತರ ಚಂದ್ರವಾಹಕವನ್ನು ಬೇರ್ಪಡಿಸಿದರು. ನಂತರ ನಿಧಾನವಾಗಿ ಚಂದ್ರನ ಮೇಲೆ ಇಳಿದರು. ಚಂದ್ರವಾಹಕವನ್ನು ಒಂದು ಸಲ ಪರೀಕ್ಷಿಸಿ ಅದು ಯಥಾಸ್ಥಿತಿಯಲ್ಲಿದೆಯೆಂದು ಭರವಸೆ ಬಂದ ಮೇಲೆ ಅದರಿಂದ ಹೊರಬಂದು ಚಂದ್ರನ ಮೇಲ್ಮೈ ಮೇಲೆ ಇಳಿಸಿದರು. ಈಗ ಅವರು ಒತ್ತಡದ ಉಡಿಗೆಗಳನ್ನು ಧರಿಸಿದ್ದರು. ಈ ಉಡಿಗೆಯ ಬಗ್ಗೆ ಮುಂದೆ ವಿಶದವಾಗಿ ತಿಳಿಯೋಣ. ಸುಮಾರು 3 ಘಂಟೆಗಳ ಕಾಲ ಚಂದ್ರನ ಮೇಲೆ ಓಡಾಡಿ ತಮಗೆ ಬೇಕಾದ ಕಲ್ಲು ಮಣ್ಣುಗಳನ್ನು ಆರಿಸಿಕೊಂಡು, ಕೆಲವು ವೈಜ್ಞಾನಿಕ ಸಾಧನಗಳನ್ನು ಅಲ್ಲಿ ಸ್ಥಾಪಿಸಿ ಚಂದ್ರವಾಹಕ್ಕೆ ಹಿಂತಿರುಗಿ ವಿಶ್ರಾಂತಿ ಪಡೆದರು. ಹೀಗೆ ಸುಮಾರು 18 ಘಂಟೆಗಳು ಕಳೆದ ನಂತರ ಪುನಃ ಚಂದ್ರಲೋಕದಿಂದ ಹಾರಿ ಆಜ್ಞಾವಾಹಕದೊಂದಿಗೆ ಸೇರಿ ಪ್ಲಾಷ್ಟಿಕ್ ಸುರಂಗದ ಮೂಲಕ ಒಳಕ್ಕೆ ಬಂದರು. ಇದಾದ ಮೇಲೆ ಚಂದ್ರವಾಹಕವನ್ನು ಚಂದ್ರನ ಸುತ್ತ ಸುತ್ತಲುಬಿಟ್ಟು ಅಜ್ಞಾವಾಹಕವನ್ನು ಭೂಮಿಯ ಕಡೆಗೆ ತಿರುಗಿಸಿ ಭೂಮಿಯತ್ತ ಪ್ರಯಾಣ ಬೆಳಿಸಿದರು ಈಗ ಭಾರ ಕಡಿಮೆ ಮಾಡುವುದಕ್ಕಾಗಿ ತಮಗೆ ಬೇಡದ ಸಲಕರಣೆ ಸಾಮಾನುಗಳನ್ನು ಹೊರಹಾಕಿ ಶಂಖಾಕಾರದ 13,000 ಪೌಂಡಿನ ಅಜ್ಞಾವಾಹಕ ಮಾತ್ರ ಭೂಮಿಗೆ ವಾಪಸಾಯಿತು. ಆಜ್ಞಾವಾಹಕದ ಒಂದು ಕಡೆ 2,700 ಡಿಗ್ರಿ 'ಸಿ' ನಷ್ಟು ಶಾಖವಿದ್ದರೂ ಒಳಗಡೆ ಗಗನ ಯಾತ್ರಿಗಳು ಆರಾಮವಾಗಿ ಸುಖಾಸನಗಳಲ್ಲಿ ಕುಳಿತ್ತಿದ್ದರು. ಭೂಮಿಯ ಹತ್ತಿರ ಬಂದಮೇಲೆ ದುಮುಕು ಕೊಡೆಗಳ ಸಹಾಯದಿಂದ ನಿಧಾನವಾಗಿ ಹವಾಯಿ ದ್ವೀಪಗಳ ಹತ್ತಿರದಲ್ಲೇ ಸಮುದ್ರದಲ್ಲಿ ಇಳಿದರು.

ಗಗನಯಾತ್ರಿಗಳು ಚಂದ್ರನ ಮೇಲೆ ಇಳಿದಾಗ ಒತ್ತಡದ ಉಡಿಗೆಗಳನ್ನು ಹಾಕಿಕೊಂಡಿದ್ದರು. ಇದರ ವಿಷಯವಾಗಿ ನಾವು ಹೆಚ್ಚು ತಿಳಿಯಬೇಕಾಗಿದೆ. ಇದು ಪ್ಲಾಸ್ಟಿಕಿನಿಂದ ಮಾಡಲ್ಪಟ್ಟದ್ದು ಮೂರು ಪದರಗಳನ್ನು ಹೊಂದಿರುತ್ತದೆ. ಮೊದಲನೇ ಪದರ ಶರೀರಕ್ಕೆ ಅಂಟಿಕೊಂಡಿರುತ್ತದೆ. ಈ ಪದರವು ನೈಲಾನಿನ ಬಲೆಯಂತಿರುತ್ತದೆ. ಇದರ ಮೇಲೆ ಶರೀರವನ್ನು ಸುತ್ತುಗಟ್ಟಿದಂತೆ ಸಣ್ಣ ಕೊಳವೆ ಇರುತ್ತದೆ. ಈ ಕೊಳವೆಯಲ್ಲಿ ಯಾವಾಗಲೂ ನೀರು ಹರಿಯತ್ತಿರುತ್ತದೆ. ಶರೀರಕ್ಕೆ ಶಾಖ ಬೇಕಾದಾಗ ಬಿಸಿ ನೀರು ಹರಿಯುತ್ತದೆ. ಶರೀರಕ್ಕೆ ಥಂಡಿ ಬೇಕಾದಾಗ ತಣ್ಣೀರು ಹರಿಯುತ್ತದೆ. ಇದರ ಮೇಲಿರುವ ಎರಡನೇ ಪದರ ಮುಖವನ್ನು ಬಿಟ್ಟು ಶರೀರದ ಇತರ ಎಲ್ಲ ಭಾಗಗಳನ್ನೂ ಆವರಿಸಿರುತ್ತದೆ. ಇದರಲ್ಲಿ ಮೂರು ಭಾಗಗಳಿದ್ದು ಮೊದಲನೆ ಭಾಗ ಶರೀರವನ್ನು ಹಿತವಾಗಿಡಲು ಸಹಾಯಕವಾಗುವ ಮೆತ್ತೆಯಿಂದ ಮಾಡಿರುತ್ತದೆ. ಎರಡನೇ ಭಾಗ ಅನಿಲದಿಂದ ತುಂಬಿದ್ದು ಶರೀರಕ್ಕೆ ಬೇಕಾದ ಒತ್ತಡವನ್ನು ಕೊಡುತ್ತದೆ. ಮೂರನೇ ಭಾಗ, ಅನಿಲ ತುಂಬಿದ ಎರಡನೇ ಭಾಗದ ಆಕಾರ ಕೆಡದಂತೆ ನೋಡಿಕೊಳ್ಳುವ ಸಲುವಾಗಿ ಇರುವ ಕವಚವಾಗಿರುತ್ತದೆ. ಮೂರನೇ ಪದರ ಮೊದಲಿನ ಎರಡು ಪದರಗಳಿಗಿಂತ ತೊಡಕಾದುದು. ಇದರಲ್ಲಿ ಅನೇಕ ಭಾಗಗಳಿದ್ದು ವೈಜ್ಞಾನಿಕ ಸಲಕರಣೆಗಳನ್ನು ಹೊಂದಿರುವುದೇ ಅಲ್ಲದೆ ವಿಪರೀತ ವೇಗದಿಂದ ಬರುವ ಉಲ್ಕೆಗಳನ್ನು ತಡೆಯುವ ಗುಣವನ್ನು ಹೊಂದಿರುತ್ತದೆ. ಇವೇ ಅಲ್ಲದೆ ಮೊಣಕೈ, ಮೊಣಕಾಲು ಮತ್ತು ಭುಜಗಳು ತರೆದುಹೋಗದೆ ಇರುವುದಕ್ಕಾಗಿ ಆ ಭಾಗಗಳನ್ನು ಕ್ರೊಮೆಲ್-ಆರ್ ಎಂಬ ಲೋಹದ ತಗಡಿನಿಂದ ಮುಚ್ಚಿರುತ್ತಾರೆ. ಈ ಉಡುಪಿನ ಇನ್ನೊಂದು ಭಾಗ ಎಂದರೆ ಶಿರಸ್ತ್ರಾಣ. ಈ ಶಿರಸ್ತ್ರಾಣಕ್ಕೆ ಒಂದು ಮುಂಚಾಚು ಬೇರೆ ಇರುತ್ತದೆ. ಮುಖದ ಭಾಗಕ್ಕೆ ಮಾತ್ರ ಪಾರದರ್ಶಕವಾದ ಪ್ಲಾಸ್ಟಿಕ್ ಮುಖವಾಡವಿರುತ್ತದೆ. ಇಷ್ಟೇ ಅಲ್ಲದೆ ಕೈಗಳಿಗೆ ವಿಶೇಷವಾದ ಕೈಚೀಲಗಳನ್ನೂ ಕಾಲಿಗೆ ವಿಶೇಷವಾದ ಬೂಟುಗಳನ್ನೂ ಒದಗಿಸುತ್ತಾರೆ. ಇಷೆಲ್ಲದರ ಜೊತೆಗೆ ಬೆನ್ನಿನ ಮೇಲೆ ಒಂದು ಮೂಟೆ ಕಟ್ಟಿರುತ್ತಾರೆ. ಇದರಲ್ಲಿ ಜೀವನಾಧಾರವಾದ ಆಮ್ಲಜನಕ, ಇತರ ವೈಜ್ಞಾನಿಕ ಸಲಕರಣೆಗಳು ಇರುತ್ತವೆ. ಇತರ ಗಗನಯಾತ್ರಿಗಳ ಜೊತೆ ಮತ್ತು ಭೂಮಿಯ ಮೇಲಿನ ವಿಜ್ಞಾನಿಗಳ ಜೊತೆ ಮಾತನಾಡಲು ಬೇಕಾದ ಸಂಪರ್ಕ ಸಾಧನಗಳೂ ಈ ಮೂಟೆಯಲ್ಲಿರುತ್ತವೆ. ಇದೆಲ್ಲದರ ತೂಕ 150 ಪೌಂಡುಗಳು. ಇದನ್ನು ಧರಿಸಿಕೊಂಡರೆ ಮಾನವ ಶೂನ್ಯ ಅಥವಾ ನಿರ್ವಾತದಲ್ಲಿ 155 ಘಂಟೆ ಜೀವ ಉಳಿಸಿಕೊಂಡಿರಬಹುದು. ಉಡುಪು ಇಷ್ಟು ತೊಡಕಾಗಿದ್ದರೂ ಅದನ್ನು ಧರಿಸಿಕೊಂಡವರಿಗೆ ಯಾವ ರೀತಿಯ ಅನಾನುಕೂಲ ಇಲ್ಲದೆ ತಮ್ಮ ಮನೆಯಲ್ಲಿ ಓಡಾಡುವಾಗ ಯಾವ ರೀತಿ ಇರುತ್ತದೋ ಅದೇ ಸುಖ ಕೊಡುತ್ತದೆ. ಚಂದ್ರನಮೇಲೆ ಗಾಳಿಯಿಲ್ಲ, ನೀರಿಲ್ಲ, ಗಿಡ ಮರಗಳಿಲ್ಲ, ಮನೆ ಮಠಗಳಿಲ್ಲ. ಅಲ್ಲಿಂದ ಭೂಮಿ ಒಂದು ದೊಡ್ಡ ಚಂದ್ರನಂತೆ ಕಾಣುತ್ತೆ. ಸೂರ್ಯನ ರಶ್ಮಿಗಳು ವಾಯುಮಂಡಲವಿರದೇ ಇರುವುದರಿಂದ ಇಲ್ಲಿಗಿಂತ ತೀಕ್ಷ್ಣವಾಗಿರುತ್ತವೆ. ಹಗಲಲ್ಲಿ ವಿಪರೀತವಾದ ಶಾಖವು, ರಾತ್ರಿಯಲ್ಲಿ ವಿಪರೀತವಾದ ಶೈತ್ಯವೂ ಇರುತ್ತದೆ. ಅಲ್ಲಿ ಗಾಳಿಯಿಲ್ಲದೆ ಇರುವುದರಿಂದ ಒಬ್ಬರು ಮಾತನಾಡಿದುದು ಇನ್ನೊಬ್ಬರಿಗೆ ಕೇಳುವುದಿಲ್ಲ. ಆದುದರಿಂದ ಅಲ್ಲಿ ಓಡಾಡುವ ಚಂದ್ರಯಾತ್ರಿಕರು ಮಾತುಗಳು ಕೇಳಲು ಅನುಕೂಲವಾಗುವಂತೆ ವೈಜ್ಞಾನಿಕ ಯಂತ್ರಗಳನ್ನು ಬಳಸಬೇಕಾಗುತ್ತದೆ. ಈ ಯಂತ್ರಗಳ ಸಹಾಯದಿಂದ ನಾವು ಮಾತನಾಡುವುದು ಇನ್ನೊಬ್ಬರು ಕೇಳುವಂತೆಯೂ, ಇನ್ನೊಬ್ಬರು ಮಾತನಾಡಿದ್ದು ನಾವು ಕೇಳುವಂತೆಯೂ, ಮಾಡಬಹುದು. ಇಂತಹ ಯಂತ್ರಗಳನ್ನು ಬೆಂಗಳೂರಿನ ಭಾರತ ಎಲೆಕ್ಟ್ರಾನಿಕ್ಸ್ ಕಾರ್ಖಾನೆಯವರು ತಯಾರಿಸುತ್ತಿದ್ದಾರೆ. ಚಂದ್ರನ ವ್ಯಾಸ ಭೂಮಿಯ ವ್ಯಾಸದ $\frac{1}{4}$ ಭಾಗ ಇರುವುದರಿಂದ ಅದರ ಗಾತ್ರ ಬಹಳ ಕಮ್ಮಿ ಇದೆ. ಇದರಿಂದ ಅಲ್ಲಿ ಓಡಾಡುವ ಮಾನವನಿಗೆ ಒಂದು ದೊಡ್ಡ ಗೋಳದ ಮೇಲೆ ಓಡಾಡುತ್ತಿರುವ ಅನುಭವವಾಗುತ್ತೆ. ಎರಡನೆಯದಾಗಿ ಮಾನವನ ತೂಕ, ಭೂಮಿಯ ಮೇಲಿರುವ ತೂಕದ $\frac{1}{6}$ ಭಾಗ ಮಾತ್ರ ಇರುತ್ತದೆ. ಇಲ್ಲಿ 120 ಪೌಂಡು ತೂಕವಿರುವ





ಮನುಷ್ಯ ಅಲ್ಲಿ 30 ಪೌಂಡು ಮಾತ್ರ ಇರುತ್ತಾನೆ. ಅದರಂತೆ ಇಲ್ಲಿ $1\frac{1}{2}$ ಅಡಿ ಹೆಜ್ಜೆ ಇಡುವ ಮನುಷ್ಯ ಅಲ್ಲಿ 10 ಅಡಿ ಹೆಜ್ಜೆ ಇಡಬೇಕಾಗುತ್ತದೆ. ಇಲ್ಲಿ 100 ಪೌಂಡು ಹೊರುವ ಮಾನವ ಅಲ್ಲಿ 600 ಪೌಂಡು ಹೊರಬಹುದು. ಚಂದ್ರಲೋಕದ ಈ ಎಲ್ಲ ವೈಶಿಷ್ಟ್ಯಗಳಿಗೂ ಹೊಂದಿಕೊಳ್ಳುದಕ್ಕೆ ಬೇಕಾದ ತರಪೇತಿಯನ್ನು ಗಗನಯಾತ್ರಿಗಳಿಗೆ ಭೂಮಿಯ ಮೇಲಿನ ಪ್ರಯೋಗ ಶಾಲೆಗಳಲ್ಲೇ ಕೊಟ್ಟಿರುತ್ತಾರೆ. ಗಗನಯಾತ್ರಿಗಳು ಸೌಖ್ಯವಾಗಿ ಹಿಂತಿರುಗಿರುವುದನ್ನು ನೋಡಿದರೆ ತರಬೇತಿಯು ಎಷ್ಟು ನಿಖರವಾಗಿತ್ತೆಂಬುದು ತಿಳಿದು ಬರುತ್ತದೆ.

ಅಪೋಲೋ 11ರ ಗಗನಯಾತ್ರಿಗಳು ಚಂದ್ರಲೋಕದಲ್ಲಿ ಓಡಾಡಿ ಪ್ರಥಮ ಮಾನವರಾಗಿ ಹೆಮ್ಮೆಯಿಂದ ಹಿಂತಿರುಗಿದರೂ ಸಹ ಇಲ್ಲಿನ ವಿಜ್ಞಾನಿಗಳು ಅವರನ್ನು ಕೈಕುಲುಕಲಿಲ್ಲ. ಏಕೆಂದರೆ ಚಂದ್ರಲೋಕದಲ್ಲಿ ಯಾವುದಾದರೂ ಜೀವಂತವಾದ ಕ್ರಿಮಿಗಳಿದ್ದು ಅವುಗಳನ್ನು ಯಾತ್ರಿಕರು ಹೊತ್ತು ತಂದಿದ್ದರೆ ಅದರಿಂದ ಭೂಮಿಯ ಮೇಲಿನ ಮಾನವರಿಗೆ ಅಪಾಯವುಂಟಾಗಬಹುದೆಂಬ ಹೆದರಿಕೆ. ಗಗನ ಯಾತ್ರಿಗಳು ಭೂಮಿಗೆ ಹಿಂತಿರುಗಿ ಆಕಾಶವಾಹಕದ ಹೊರಗೆ ಬಂದ ತಕ್ಷಣ ಅವನ್ನು ಭೂಮಿಯ ವಾತಾವರಣದಿಂದ ಬೇರ್ಪಡಿಸಲು ಪ್ಲಾಸ್ಟಿಕಿನಿಂದ ಮಾಡಿದ ತೊಡಿಗೆಗಳೊಳಗೆ ಹೋಗುವಂತೆ ಮಾಡಿದರು. ಈ ತೊಡಿಗೆಗಳು ಒಳಗಿರುವ ಯಾವ ಜೀವಾಣುಗಳು ನಾಶವಾಗುವಂತೆ ನೋಡಿಕೊಳ್ಳುವುದೇ ಅಲ್ಲದೆ ಅವರು ಉಸಿರಾಡಿ ಹೊರಗೆ ಬಿಟ್ಟ ಗಾಳಿಯನ್ನು ಶುದ್ಧಿಮಾಡಿ ಹೊರಹಾಕುತ್ತದೆ. ಇದಾದ ಮೇಲೆ ಅವರು ಒಂದು ಸಣ್ಣ ತೆಪ್ಪದ ಮೇಲೆ ಬಂದರು ತೆಪ್ಪದಿಂದ ಅವರನ್ನು ಹೆಲಿಕ್ಯಾಪ್ಟರ್ ಹೊತ್ತುಕೊಂಡು ಅವರಿಗಾಗಿ ಕಾದಿರುವ ಹಡಗಿನಲ್ಲಿ ಬಿಟ್ಟಿತು. ಅಮೇಲೆ ಹಡಗಿನಲ್ಲಿ ಅವರಿಗಾಗಿ ವಿಷೇಶವಾಗಿ ತಯಾರಿಸಿದ ವ್ಯಾನಿನೊಳಕ್ಕೆ ಹೋಗಿ, ವ್ಯಾನಿನ ಬಾಗಿಲು ಮುಚ್ಚಿದ ನಂತರ ಪ್ಲಾಸ್ಟಿಕ್ಕಿನ ತೊಡಿಗೆಗಳನ್ನು ಬಿಚ್ಚಿಹಾಕಿದರು. ಈ ವ್ಯಾನಿನೊಳಗೆ ಕೆಲವು ದಿನಗಳು ಅವರು ವಾಸಿಸಬೇಕಾಯಿತು. ಅವರ ಜೊತೆಗೆ ಒಳಗಡೆ ಒಬ್ಬ ವೈದ್ಯ, ಒಬ್ಬ ಇಂಜಿನಿಯರೂ ಇದ್ದರು. ಹಡಗು ರೇವಿಗೆ ಬಂದ ತಕ್ಷಣ ವ್ಯಾನನ್ನು ಒಂದು ಲಾರಿ ಎಳೆದುಕೊಂಡು ಹೂಸ್ಟನ್ ಪಟ್ಟಣದಲ್ಲಿರುವ ಪ್ರಯೋಗಶಾಲೆಗೆ ತಂದಿತು. ಇದು ಬಹು ವಿಚಿತ್ರವಾದ ಪ್ರಯೋಗಶಾಲೆ. ಈ ಪ್ರಯೋಗಶಾಲೆಯ ಒಳಗಡೆ ಬೇರೆಯವರ ಸಂಪರ್ಕವಿಲ್ಲದೆ ಅವರು 21 ದಿನಗಳಿದ್ದರು. ಆ ದಿನಗಳಲ್ಲಿ ಇವರೊಂದಿಗೆ ವಿಜ್ಞಾನಿಗಳು ವೈದ್ಯರು ಮತ್ತು ಇತರ ಕೆಲಸಗಳಿಗೆ ಬೇಕಾದ ಕೆಲವು ಸೇವಕರು ಇದ್ದರು. ಯಾತ್ರಿಗಳು ತಮ್ಮ ಸಂಬಂಧಿಗಳು ಮತ್ತು ಇತರರೊಂದಿಗೆ ಮಾತನಾಡಬೇಕಾದರೆ ಗಾಜಿನ ಮೂಲಕ ನೋಡಿಕೊಂಡು ಮಾತನಾಡುತ್ತಿದ್ದರು. ಎಲ್ಲ ವೈಜ್ಞಾನಿಕ ಮತ್ತು ವೈದ್ಯಕೀಯ ಪರೀಕ್ಷೆಗಳು ಮುಗಿದ ನಂತರ ಅವರು ಹೊರಗೆ ಬಂದರು.

ಗಗನಯಾತ್ರಿಗಳು ಇಷ್ಟೆಲ್ಲ ಕಷ್ಟಪಟ್ಟುದೇಕೆ ? ಚಂದ್ರಲೋಕದಿಂದನಾಲ್ಕಾರು ಕಲ್ಲುಗಳು, ಮಣ್ಣು ತರುವುದಕ್ಕಾಗಿ. ಅವರು ತಂದ ಕಲ್ಲು ಮಣ್ಣುಗಳನ್ನು ಪ್ರಪಂಚದ ಅನೇಕ ಪ್ರಯೋಗ ಶಾಲೆಗಳಲ್ಲಿ ವಿಜ್ಞಾನಿಗಳು ಪರೀಕ್ಷಿಸಿದ್ದಾರೆ. ಹೆಚ್ಚಿನ ಮಾಹಿತಿ ಇನ್ನೂ ಹೊರಗೆಡವಬೇಕಾಗಿದೆ.

ಇದೇ ತಿಂಗಳು 17ನೇ ತಾರೀಖು ಬುಧವಾರ ಗಗನ ಯಾತ್ರಿಗಳ ಎರಡನೇ ತಂಡವು ಚಂದ್ರ ಲೋಕಕ್ಕೆ ಹೊರಟಿದ್ದು ಮೂರು ದಿನಗಳ ಪ್ರಯಾಣದ ನಂತರ ಚಂದ್ರನಲ್ಲಿ ಇಳಿದು ಅಲ್ಲೆ 32 ಗಂಟೆಗಳ ಕಾಲ ಕಳೆದು ಹಿಂತಿರುಗಿದ್ದಾರೆ. ಈ ಆಕಾಶನೌಕೆಗೆ ಅಪೊಲೋ 12 ಎಂದು ಹೆಸರಿಟ್ಟಿದ್ದಾರೆ. ಅಪೊಲೋ 12 ಮತ್ತು ಅಪೊಲೋ 11 ಕ್ಕೂ ಒಂದು ವ್ಯತ್ಯಾಸವಿತ್ತು. ಅಪೊಲೋ 11 ರ ನಿಯಂತ್ರಣವನ್ನು ಭೂಮಿಯ ಮೇಲಿನವರು ಇಟ್ಟುಕೊಂಡಿದ್ದರು. ಅಪೋಲೋ 12ರ ನಿಯಂತ್ರಣವನ್ನು ಅವರು ಇಟ್ಟುಕೊಳ್ಳದೆ ಗಗನ ಯಾತ್ರಿಗಳಿಗೇ ಬಿಟ್ಟಿದ್ದರು. ಎರಡನೆಯದಾಗಿ ಅಪೋಲೋ 12ರ ಗಗನಯಾತ್ರಿಗಳು ಚಂದ್ರಲೋಕದಲ್ಲಿ ಅಮೂಲ್ಯವಾದ ವೈಜ್ಞಾನಿಕ ಯಂತ್ರಗಳನ್ನು ಸ್ಥಾಪಿಸಿ ಬಂದಿದ್ದಾರೆ. ಈ ಯಂತ್ರಗಳು ಯಾವುವೆಂದರೆ ಮೊದಲನೆಯದಾಗಿ ಕಂಪನ ಮಾಪಕ. ಚಂದ್ರನಲ್ಲಿ

ಏನಾದರೂ ಕಂಪನಗಳುಂಟಾದರೆ ಅದನ್ನು ಅರಿತುಕೊಳ್ಳುವುದೇ ಅಲ್ಲದೆ, ಆ ಸಮಾಚಾರವನ್ನು ಭೂಮಿಗೂ ಕಳುಹಿಸಿಕೊಡುವ ಯಂತ್ರ. ಎರಡನೆಯದಾಗಿ ಕಾಂತ ಕ್ಷೇತ್ರಮಾಪಕ. ಇದು ಚಂದ್ರನ ಕಾಂತಶಕ್ತಿಯನ್ನು ಗುರುತಿಸಿ ಭೂಮಿಗೆ ತಿಳಿಸುವ ಯಂತ್ರ. ಮೂರನೆಯದು ಅಯೋಣುಶೋಧಕ. ಚಂದ್ರನ ವತಾವರಣದಲ್ಲಿ ಅಯೋಣುಗಳಿದ್ದರೆ ಅದನ್ನು ಗುರುತಿಸುವ ಯಂತ್ರ. ನಾಲ್ಕನೆಯದು ಸೌರಮಾರುತಮಾಪಕ. ಚಂದ್ರನಲ್ಲಿ ಯಾವುದಾದರೂ ರೀತಿಯ ಚಲನೆಗಳಿದ್ದರೆ ಅದನ್ನು ಗುರುತಿಸುವ ಯಂತ್ರ. ಇವೇ ಅಲ್ಲದೆ, ಈ ಎಲ್ಲ ಯಂತ್ರಗಳನ್ನೂ ನಡೆಸುವುದಕ್ಕಾಗಿ ಬೇಕಾಗುವ ವಿದ್ಯುಚ್ಛಕ್ತಿಯನ್ನು ಒದಗಿಸುವ ಅಣು ವಿದ್ಯುತ್ ಉತ್ಪಾದಕಯಂತ್ರವನ್ನು ಅಲ್ಲಿ ಇಟ್ಟಿದ್ದಾರೆ. ಈ ಅಣುವಿದ್ಯುತ್ ಉತ್ಪಾದಕವು ಎಲ್ಲ ಯಂತ್ರಗಳಿಗೂ ಬೇಕಾಗುವ ವಿದ್ಯುತ್ತನ್ನು ಒಂದು ವರ್ಷದವರೆಗೆ ಒದಗಿಸುವುದು. ಇದರಿಂದ ಅನೇಕ ವೈಜ್ಞಾನಿಕ ವಿಷಯುಗಳನ್ನು ಸಂಗ್ರಹಿಸಬಹುದಾಗಿದೆ.

ಇಡೀ ಭಾರತದ ನಾಲ್ಕನೆ ಪಂಚವಾರ್ಷಿಕ ಯೋಜನೆಗೆ ಖರ್ಚುಮಾಡಿದಷ್ಟು ಹಣವನ್ನು ಅಮೆರಿಕ ಅಪೋಲೋ 11ರ ಒಂದು ಪ್ರಯೋಗಕ್ಕಾಗಿ ಖರ್ಚು ಮಾಡಿದರು. ಇಷ್ಟೆಲ್ಲ ಖರ್ಚು ಮಾಡುವುದೇಕೆ ? ಮಾನವ ತನ್ನ ಜೀವನದಲ್ಲಿ ಇತರರಿಗಿಂತ ಭಿನ್ನವಾದ ಸಾಧನೆಯನ್ನು ಮಾಡಬೇಕೆಂಬ ಇಚ್ಚೆ ಇಟ್ಟುಕೊಂಡಿರುತ್ತಾನೆ. ಅದೇ ರೀತಿ ಪ್ರತಿಯೊಂದು ರಾಷ್ಟ್ರವು ಇತರ ರಾಷ್ಟ್ರಗಳಿಗಿಂತ ತಾನು ಮುಂದೆ ಎಂದು ತೋರಿಸಿಕೊಳ್ಳುವ ಹಂಬಲವನ್ನು ಹೊಂದೇ ಇರುತ್ತದೆ. 1957 ಇಸವಿ ಅಕ್ಟೋಬರ್ 3 ರಂದು ರಷ್ಯದವರು ಪ್ರಥಮ ಸ್ಪೂಟ್ನಿಕ್ ಅನ್ನು ಹಾರಿಸಿದಾಗ ಅಮೆರಿಕದವರು ಸ್ಪರ್ಧೆಯಲ್ಲಿ ಸೋತವರಂತೆ ಅವಮಾನಿತಗೊಂಡಿದ್ದರು. 12 ವರ್ಷಗಳ ಸತತ ಪ್ರಯತ್ನದಿಂದ ಇಂದು ಅಮೆರಿಕನರು ರಷ್ಯರನ್ನು ಹಿಂದೆ ಹಾಕಿ ಮಾನವರ ಎರಡು ತಂಡಗಳನ್ನು ಚಂದ್ರಲೋಕಕ್ಕೆ ಕಳುಹಿಸಿ ಕರೆಸಿಕೊಂಡಿದ್ದಾರೆ. ಅಕಾಶಯಾನದಲ್ಲಿ ಇದು ಮೊದಲ ಹೆಜ್ಜೆ, ಮುಂದೆ ಹತ್ತಿರದ ಗ್ರಹಗಳಾದ ಶುಕ್ರ ಮತ್ತು ಮಂಗಳ ಗ್ರಹಗಳಿಗೆ ಮಾನವರನ್ನು ಕಳುಹಿಸುವ ಯೋಜನೆಗಳು ತಯಾರಾಗಲಿವೆ.

ಮಾನವ ಕುಲದ ಚರಿತ್ರೆ ಅಂಧಕಾರದಿಂದ ಬೆಳಕಿನ ಕಡೆಗೆ ಹೋಗುತ್ತಿರುವ ನಿರಂತರ ಹೋರಾಟವಾಗಿದೆ. ಈ ಹೋರಾಟದಲ್ಲಿ ಭಾರತವೂ ಎಂದಿಗೆ ಪಾಲ್ಗೊಳ್ಳುವುದೆಂಬುದನ್ನು ಕಾದು ನೋಡಬೇಕು.

(ಆಕಾಶವಾಣಿ ಕೃಪೆಯಿಂದ)

—:o:—

## ನನ್ನ ಹೃದಯ

ನನ್ನ ಹೃದಯ
ಭಾವ ಮಯ
ಕಣ್ಣ ನೀರು
ಮದಿರ ಮಯ ! ||೧||

ನನ್ನ ಹೃದಯ
ನಿನ್ನ ದೇಗುಲ
ನನ್ನ ಮಾತು
ನಿನ್ನ ಜ್ಯೋತಿಫಲ ! ||೨||

ನನ್ನ ಹೃದಯ
ನಿನ್ನ ದೀವಿಗೆ
ನನ್ನ ಬೆಳಕು
ನಿನ್ನ ಬೆಸುಗೆ ! ||೩||

ನನ್ನ ಹೃದಯ
ನಿನ್ನ ಚಿನ್ಮಯ
ಬಾಳ ಚಣ ಚಣ
ಶಿವ ಅಮೃಣ್ಮಯ ! ||೪||

ನನ್ನ ಹೃದಯ
ನಿನ್ನ ಆತ್ಮ,
ನನ್ನ ಪ್ರಿಯತಮ
ನೀನೆ ಪರಮಾತ್ಮ ! ||೫||

— ರತ್ನಪ್ರಿಯ



# ದಕ್ಷ ರಾಜಕಾರಣಿಯ ಕಣ್ಮರೆ.

ಲೇ: ಎಸ್. ಚಂದ್ರಶೇಖರಯ್ಯ ಬೆಂಗಳೂರು.

ಶನಿವಾರ ದಿನಾಂಕ 24-10-1969ರ ರಾತ್ರಿ 11-20ಕ್ಕೆ ಶರಣ ರಾಜಕಾರಣಿ ಶ್ರೀಶಿದ್ದಲಿಂಗಪ್ಪ ರುದ್ರಪ್ಪ ಕಂಠಿಯವರು ಶಿವಾಧೀನರಾದದು ಕನ್ನಡ ನಾಡಿ ಗೊಂದು ತುಂಬಬಾರದ ಹಾನಿ.

1908ನೇ ಇಸವಿ ಡಿಸೆಂಬರ್ 21ರಂದು ವಿಜಾಪುರ ಜಿಲ್ಲೆಯ ಹುನುಗುಂದ ತಾಲ್ಲೂಕಿನ ಇಲಕಲ್ಲು ಗ್ರಾಮದಲ್ಲಿ ಜನಿಸಿದ ಶ್ರೀ ಎಸ್. ಆರ್. ಕಂಠಿಯವರು ಧಾರವಾಡದ ಕರ್ನಾಟಕ ಕಾಲೇಜ್, ಕೊಲ್ಲಾಪುರದ ರಾಜಾರಾವ್ ಹಾಗೂ ಸೈಕ್ಸ್, ಲಾ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡಿ ಆರ್ಟ್ಸ್ ಹಾಗೂ ಕಾನೂನು ಪದವಿ ಪಡೆದರು.

1935ರಲ್ಲಿ ಬಾಗಲಕೋಟೆಯಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. 1939ರಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಹಾಗೂ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾದರು. 1940·ರಿಂದ 1946ರ ವರೆಗೆ ವಿಜಾಪುರ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಹರಿ ಜನ, ರೈತರು ಹಾಗೂ ನೇಕಾರ ಸಂಘಟನೆಯಲ್ಲಿ ಆಸಕ್ತಿ ವಹಿಸಿದ್ದರು. ವಿಜಾಪುರದಲ್ಲಿ 1940-41ರಲ್ಲಿ ನಡೆದ ಸತ್ಯಾಗ್ರಹ ಮತ್ತು 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಸೆರೆ ಮನೆಯವಾಸವನ್ನು ಅನುಭವಿಸಿದರು.

1946ರಲ್ಲಿ ಅವರ ಸಾಮರ್ಥ್ಯ ಬೆಳಕಿಗೆ ಬಂದು ಅವರು ಮುಂಬೈ ಸರ್ಕಾರದಲ್ಲಿ 6 ವರ್ಷಗಳ ಕಾಲ ಪಾರ್ಲಿಮೆಂಟರಿ ಕಾರ್ಯದರ್ಶಿಗಳಾಗಿ ಅತ್ಯಂತ ದಕ್ಷತೆಯಿಂದ ಈ ಕಾರ್ಯವನ್ನು ನಿರ್ವಹಿಸಿದ ನಂತರ ಅವರು ಮುಂಬೈ ವಿಧಾನ ಸಭೆಯ ಉಪಾಧ್ಯಕ್ಷರಾಗಿ ನಾಲ್ಕು ವರ್ಷಗಳಕಾಲ ಸೇವೆ ಸಲ್ಲಿಸಿ ಶಾಸನ ಸಭೆಯ ಕಾರ್ಯ ಕಲಾಪಗಳಲ್ಲಿ ಅತಿ ಹೆಚ್ಚಿನ ಅನುಭವ, ಪರಿಶ್ರಮ ಪಡೆದು ಖ್ಯಾತಿಗಳಿಸಿದರು.

ಕರ್ನಾಟಕ ಏಕೀಕರಣವಾದಮೇಲೆ ವಿಶಾಲ ಮೈಸೂರಿನಲ್ಲಿ 1956ರಿಂದ 1962ರ ವರೆಗೆ ಮೈಸೂರಿನ ವಿಧಾನ ಸಭಾಧ್ಯಕ್ಷರಾಗಿ ಅತ್ಯಂತ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರು. 1962ರ ಮಾರ್ಚಿಯಿಂದ ಜೂನವರೆಗೆ ಅವರು ಅನಿರೀಕ್ಷಿತವಾಗಿ ರಾಜ್ಯದ ಮುಖ್ಯ ಮಂತ್ರಿಗಳಾಗಿ ಕಾರ್ಯವನ್ನು ನಿರ್ವಹಿಸಿ ಶ್ರೀ ನಿಜಲಿಂಗಪ್ಪನವರಿಗೆ ಈ ಸ್ಥಾನವನ್ನು ಬಿಟ್ಟುಕೊಟ್ಟರು. 1962 ರಿಂದ 1967ರ ವರೆಗೆ ರಾಜ್ಯದ ಶಿಕ್ಷಣ ಸಚಿವರಾಗಿ ಸೇವೆ ಸಲ್ಲಿಸಿ ಶಿಕ್ಷಣ ರಂಗದಲ್ಲಿ ವ್ಯಾಪಕ ಸುಧಾರಣೆಗಳಿಗೆ ಕಾರಣರಾದರು. ಈ ದಿಶೆಯಲ್ಲಿ ಅವರು ರಾಜ್ಯಕ್ಕೆ ಅಮೋಘ ಸೇವೆಸಲ್ಲಿಸಿದರು. ರಾಜ್ಯದಲ್ಲಿ ಎಸ್. ಎಸ್. ಎಲ್. ಸಿ. ಮಟ್ಟದವರೆಗೆ ಉಚಿತ ಶಿಕ್ಷಣ ದೊರೆಯುವಂತೆ ಮಾಡಿದರು. ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡಿದ ಕೀರ್ತಿ ಇವರಿಗೆ ಸಲ್ಲಬೇಕಾಗಿದೆ. ವಿಜಾಪುರದ ಸೈನಿಕ ಶಾಲೆ, ಕಿತ್ತೂರು ಚನ್ನಮ್ಮ ಸ್ಮಾರಕ, ಹಾಗೂ ಹೆಣ್ಣು ಮಕ್ಕಳ ಸಾರ್ವಜನಿಕ ಶಾಲೆ ಇವುಗಳನ್ನು ಸ್ಥಾಪಿಸಿದರು. ಪ್ರತಿ ವರ್ಷ ಅಕ್ಟೋಬರ್ 23ನೆಯ ತಾರೀಖು 'ಮಹಿಳಾ ದಿನಾಚರಣೆ'ಯನ್ನು ಆಚರಿಸುವ ಹಾಗೆ ನಿಯಮವನ್ನು ಜಾರಿಗೆ ತಂದವರು ಇವರೇ.

ಶ್ರೀ ಕಂಠಿಯವರ ರಾಜಕಾರಣ ಅಪ್ಪಟ ಧರ್ಮಾವಲಂಬಿಯಾಗಿತ್ತು. ಹೇಗೆ ಮಹಾತ್ಮ ಗಾಂಧಿಯವರು ರಾಜಕಾರಣ ಹಾಗೂ ಧರ್ಮದ ಸಂಗಮವಾಗಿದ್ದರೋ ಅದೇ ರೀತಿ ಶ್ರೀ ಕಂಠಿಯವರ ಎಲ್ಲ ರಾಜಕಾರಣವೂ ಧರ್ಮದ ತಳಹದಿಯ ಮೇಲೆಯೇ ಮೇಲೆದ್ದಿತ್ತು. ಶ್ರೀ ಕಂಠಿಯವರು ರಾಜಕಾರಣಿಯೇ? ಎಂದು ಸಂಶಯ

ತಾಳುವಷ್ಟರ ಮಟ್ಟಿಗೆ ಅವರು ಸಾತ್ವಿಕರಾಗಿದ್ದರು. ಧರ್ಮಾವಲಂಬಿಗಳಾಗಿದ್ದರು. ಅವರ ಮಾತಿನಲ್ಲಿ ಕೃತಿಯಲ್ಲಿ ಎಲ್ಲದರಲ್ಲಿಯೂ ಸಾತ್ವಿಕತೆಯು ಎದ್ದು ಕಾಣುತ್ತಿತ್ತು. ಸಾತ್ವಿಕ ರಾಜಕಾರಣಿಗಳು ವಿರಳ. ಅವರು ಶೈಕ್ಷಣಿಕ, ಧಾರ್ಮಿಕ ಸಾಮಾಜಿಕ ರಂಗದಲ್ಲಿ ಅನುಪಮ ಸೇವೆಯನ್ನು ಸಲ್ಲಿಸಿದ್ದಾರೆ. ದೇಶಕ್ಕಾಗಿ ಹಾಗೂ ಕರ್ನಾಟಕ ಏಕೀಕರಣಕ್ಕಾಗಿ ಶ್ರೀ ಕಂಠಿಯವರು ಅಪಾರ ಸೇವೆಸಲ್ಲಿಸಿದ್ದಾರೆ. ಅವರು ವಿಜಾಪುರ ಜಿಲ್ಲೆಯ ಹುನಗುಂದ ಕ್ಷೇತ್ರದಿಂದ ಶಾಸನ ಸಭೆಗೆ ಚುನಾಯಿತರಾಗಿ ಬಂದರು.

23-10-1969 ರಂದು ಶ್ರೀ ಕಂಠಿಯವರು ಮಹಿಳಾ ದಿನಾಚರಣೆಯಲ್ಲಿ ಭಾಗವಹಿಸಲು ಕಿತ್ತೂರಿಗೆ ಹೋಗಿದ್ದಾಗ ಅವರಿಗೆ ಹೃದಯವೇದನೆ ಕಾಣಿಸಿಕೊಂಡಾಗ ಅವರನ್ನು 'ಬೆಳಗಾವಿ ಹಾಗೂ ನರ್ಸಿಂಗ್ ಹೋಂಗೆ' ಚಿಕಿತ್ಸೆಗಾಗಿ ಕರೆದುಕೊಂಡು ಹೋಗಲಾಯಿತು. ಅಲ್ಲಿ ಡಾಕ್ಟರು ಅವರನ್ನು ಬದುಕಿಸಲು ತಮ್ಮ ಸಾಮರ್ಥ್ಯ ಮೀರಿ ಪ್ರಯತ್ನಿಸಿದರೂ ಸಫಲವಾಗಲಿಲ್ಲ. ರಾತ್ರಿ 11-20ಕ್ಕೆ ಅವರ ಪ್ರಾಣ ಪಕ್ಷಿ ಹಾರಿ ಹೋಯಿತು. 61 ವರ್ಷಗಳ ಸಾರ್ಥಕ ಜೀವನವನ್ನು ಸಾಗಿಸಿ ಎಲ್ಲರ ಮೆಚ್ಚಿಗೆಗೂ ಪಾತ್ರರಾಗಿದ್ದು ಹೃದಯಾ ಘಾತದಿಂದ ಹಠಾತ್ ನಿಧನರಾದರು. ಅವರ ನಿಧನದಿಂದ ದೇಶಕ್ಕೆ ಸಮಾಜಕ್ಕೆ ಭರಿಸಲಾಗದ ಹಾನಿಯುಂಟಾಗಿದೆ. ಇಂತಹ ಸಾರ್ಥಕ ಜೀವಿಯ ಅಗಲುವಿಕೆಯಿಂದ ನೊಂದ ಬಂಧು ಮಿತ್ರ ವರ್ಗಕ್ಕೆ ದುಃಖವನ್ನು ಸಹಿಸುವ ಶಕ್ತಿಯನ್ನು, ಮೃತರ ಆತ್ಮಕ್ಕೆ ಶಾಂತಿಯನ್ನು, ಕರುಣಿಸಲೆಂದು ಶ್ರೀ ಸಿದ್ಧಗಂಗಾ ಪತ್ರಿಕೆಯು ಆಶಿಸುತ್ತದೆ.

10-9-80 [illegible] 10½ಗೆ
[illegible]



Reg. No. RN/17139/69

ಮಹನೀಯರೇ,

ದಕ್ಷಿಣ ಭಾರತದ ಸುಪ್ರಸಿದ್ಧ ಜಾತ್ರೆಗಳಲ್ಲಿ ಒಂದಾದ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆಯ ಸಮಯದಲ್ಲಿ ಪ್ರತಿವರ್ಷ ಏರ್ಪಡಿಸುತ್ತಿರುವ ಮೇಲ್ಕಂಡ ವಸ್ತುಪ್ರದರ್ಶನದಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರದ ವಿವಿಧ ಇಲಾಖೆಯವರೂ, ಖಾಸಗಿ ಸಂಘ - ಸಂಸ್ಥೆಗಳವರೂ ಜನೋಪಯುಕ್ತ ಅನೇಕ ಪ್ರದರ್ಶನಗಳನ್ನೇರ್ಪಡಿಸಿ ಸುಮಾರು ಐದಾರು ಲಕ್ಷ ಜನ ಪ್ರೇಕ್ಷಕ ವರ್ಗಕ್ಕೆ ವ್ಯವಸಾಯ, ಕೈಗಾರಿಕೆ ಕುಶಲ ಕಲೆ, ವಾಣಿಜ್ಯ, ವಿಜ್ಞಾನ, ಭೌಗೋಳಿಕ, ಆರೋಗ್ಯ, ಸಾಂಸ್ಕೃತಿಕ, ರಾಜಕೀಯ, ಮನರಂಜನೆ ಮೊದಲಾದ ವಿವಿಧ ಮುಖಗಳಲ್ಲಿ ಜ್ಞಾನಾಭಿವೃದ್ಧಿಗೊಳಿಸುತ್ತಿರುತ್ತಾರೆ.

ಈ ವರ್ಷವೂ ಮಾಮೂಲಿನಂತೆ ವಸ್ತುಪ್ರದರ್ಶನವನ್ನು ಏರ್ಪಡಿಸುತ್ತೇವೆಂದು ತಿಳಿಸಲು ಹರ್ಷವಾಗುತ್ತಿದೆ. ತಾವು ತಮ್ಮ ಆಕರ್ಷಣೀಯ 'ಸ್ಟಾಲ್' ನ್ನು ತೆರೆದು ಜನಜಾಗೃತಿಗೊಳಿಸುವುದರ ಮೂಲಕ ಲಾಭವನ್ನು ಪಡೆದು ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಕೃಪೆಗೆ ಪಾತ್ರರಾಗಬೇಕಾಗಿ ಕೋರುತ್ತೇವೆ. ಸಮಸ್ತ ಮಹನೀಯರೂ, ಮಹಿಳೆಯರೂ ಈ ವಸ್ತು ಪ್ರದರ್ಶನಕ್ಕೆ ಒಮ್ಮೆ ಭೇಟಿ ಕೊಟ್ಟು ಜ್ಞಾನಾಭಿವೃದ್ಧಿ ಪಡೆಯಬೇಕೆಂದು ಆಶಿಸುತ್ತೇವೆ.

ಹೆಚ್ಚಿನ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ :

**ಕಾರ್ಯದರ್ಶಿ**

**ವಸ್ತುಪ್ರದರ್ಶನ ಸಮಿತಿ**

**ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲಾ**

# ವ್ಯವಸಾಯ

## ಮತ್ತು

# ಕೈಗಾರಿಕಾ

# ವಸ್ತುಪ್ರದರ್ಶನ

ಶ್ರೀ ಸಿದ್ಧಗಂಗಾ ಕ್ಷೇತ್ರ

ತುಮಕೂರು ಜಿಲ್ಲೆ

**ದಿನಾಂಕ 4-3-1970 ರಿಂದ**

**17-3-1970 ರವರೆಗೆ**